ಸಂಜೀವಿನಿ ಪ್ರಕಾಶನ ೩.

# ಗ್ರಾಮ ಪಂಚಾನನ

(ಸಾಮಾಜಿಕ ಕಾದಂಬರಿ)

[ ೨ ]

ಬಾ. ಕೃ. ಲಕ್ಷ್ಮೇಶ್ವರ.

ಸಂಜೀವಿನಿ ಪ್ರಕಾಶನ ಹುಬ್ಬಳ್ಳಿ.

# ಸಂಪಾದಕನ ಮಾತು.

ಸಂಜೀವಿನಿ ಪ್ರಕಾಶನದ ಎರಡನೆಯ ಗ್ರಂಥವೆಂದು "ಗ್ರಾಮ ಪಂಚಾನನ"ದ ೨ನೆಯ ಭಾಗವನ್ನು ಓದುಗರಿಗೆ ಕೊಡಲು ನಮಗೆ ಬಹಳ ಸಂತೋಷವಾಗುತ್ತದೆ. ಈ ಕಾದಂಬರಿಯನ್ನು ಬರೆದ ಶ್ರೀ|| ಬಾ. ಕೃ. ಲಕ್ಷ್ಮೇಶ್ವರರವರು ಈಗಾಗಲೇ ಕನ್ನಡಿಗರಿಗೆ ಪರಿಚಿತರಾಗಿದ್ದಾರೆ. ಈ ಗ್ರಂಥದ ಮೊದಲನೆಯ ಭಾಗದ ಪ್ರಕಟನೆಯಿಂದ ರಸಿಕರ ಮನವನ್ನು ತಮ್ಮೆಡೆಗೆ ಪೂರ್ಣ ಸೆಳೆದುಕೊಂಡಿದ್ದಾರೆ. ಶಾಲೆಯ ಮಾಸ್ತರರಾಗಿ ವೇತನ ಹೊಂದಿ ಹಳ್ಳಿಯಲ್ಲಿದ್ದರೂ ಶ್ರೀ|| ಲಕ್ಷ್ಮೇಶ್ವರರು ಸಾಹಿತ್ಯವಭಿರುಚಿಯನ್ನು ಬೆಳೆಸಿಕೊಂಡು ಹಳ್ಳಿಯ ಜೀವನವನ್ನು ಸೂಕ್ಷ್ಮ ದೃಷ್ಟಿಯಿಂದ ಅವಲೋಕಿಸಿ ಅಲ್ಲಿಯ ಕೊಳಚೆಯನ್ನು ತೆಗೆದೊಗೆಯುವಉದ್ದೇಶದಿಂದ ಈ ಕಾದಂಬರಿಯನ್ನು ಬರೆದಿದ್ದಾರೆ. ಇದರ ಇನ್ನೂ ಒಂದು ಭಾಗವನ್ನು ಈಗ ಬರೆಯತೊಡಗಿದ್ದಾರೆ. ಅದು ಕೂಡ ಬೇಗ ಹೊರಬೀಳುವದೆಂದು ನಾನು ಆಶಿಸುತ್ತೇನೆ.

ಇದು ೨ನೆಯ ಭಾಗವೆಂದು ಹೇಳಿದ್ದರೂ ಇಡೀಕತೆಯಲ್ಲಿಯ ಒಂದು ಭಾಗವೆಂದು ಓದುಗರಿಗೆ ಅನಿಸುವದೇ ಇಲ್ಲ. ಶ್ರೀ|| ಲಕ್ಷ್ಮೇಶ್ವರರು ಹಾಗೆ ಬರೆದಿದ್ದಾರೆ ಇದನ್ನೊಂದೇ ಓದಿದರೂ ಇದು ಪೂರ್ತಿಯಾದ ಕಾದಂಬರಿಯಂಬಂತೆ ಭಾಸವಾಗುವದು

ಕಾದಂಬರಿಕಾರರು ತಮ್ಮ ಅರಿಕೆಯಲ್ಲಿ ಹೇಳಿದಂತೆ ಕೆಲವು ಹುಲಿಗಳು ಗರ್ಜಿಸಿರಬಹುದು. ಸ್ವಾರ್ಥಸಾಧಕರ ಆಟ ನಡೆಯದಂತೆ ಮಾಡಿದರೆ ಗರ್ಜಿಸದೇ ಏನು ಮಾಡಿಯಾರು? ಕಾದಂಬರಿ ಹೇಗಿದೆ? ಸಾಹಿತ್ಯದಲ್ಲಿ ಇದಕ್ಕೆ ಎಂಥ ಸ್ಥಾನ? ಎಂಬುದನ್ನು ಹೇಳುವದು ವಿಮರ್ಶಕರ ಕೆಲಸ. ಅದನ್ನು ಅವರು ಮಾಡಲಿ.

ನಮ್ಮ ಮೊದಲನೆಯ ಪ್ರಕಟನೆಯಾದ "ನಸುಕಿ"ನಲ್ಲಿ ಬರಲಿರುವ ಗ್ರಂಥಗಳು, ಶ್ರೀ|| ಮಹಿಷೀ ಮಧ್ವರಾಯರು ಬರೆದ ಸಾಮಾಜಿಕ ಕಾದಂಬರಿ "ಜೀವನಪಥ" ಮತ್ತು ದಿ|| ವಿಜಯ ಬೆಟಗೇರಿಯವರ ಕಥಾಸಂಕಲನ "ಮುಗಿಲಮಲ್ಲಿಗೆ" ಎಂದು ಪ್ರಸಿದ್ಧಿಸಲ್ಪಟ್ಟಿತ್ತು. ಆದರೆ ಶ್ರೀ ಮಹಿಷೀಯವರಾಗಲೀ, ದಿವಂಗತ ಬೆಟಗೇರಿಯವರ ಅಣ್ಣಂದಿರಾದ ಕವಿಭೂಷಣ ಕೃಷ್ಣ ಶರ್ಮಾ ಬೆಟಗೇರಿಯವರಾಗಲಿ ನಮ್ಮ ವೇಳೆಗೆ ಸರಿಯಾಗಿ ಆ ಗ್ರಂಥ

ಗಳನ್ನು ನಮಗೆ ಒಪ್ಪಿಸಲಿಲ್ಲ. ಆದುದರಿಂದ ಅವುಗಳನ್ನು ಬಿಟ್ಟು ಬಿಡಬೇಕಾಯಿತು. ಪ್ರಕಾಶನದ ದಿನಗಳು ಸಮೀಪಿಸಹತ್ತಿದವು. ಆಗ ನನ್ನ ಸಹಾಯಕ್ಕೆ ನನ್ನ ಅಪ್ತಮಿತ್ರರೂ, ಲಲಿತಸಾಹಿತ್ಯಮಾಲೆಯ ಸಂಪಾದಕರೂ ಆದ ಶ್ರೀ|| ಚಳ್ಳಿ ಗೋವಿಂದರಾಯರು ಮುಂದೆ ಬಂದು ಶ್ರೀ|| ಬಾ. ಕೃ. ಲಕ್ಷ್ಮೇಶ್ವರರ ಗ್ರಾಮಪಂಚಾನನದ ಎರಡನೆಯ ಭಾಗವನ್ನು ದೊರಕಿಸಿಕೊಟ್ಟರು. ಅವರಿಗೆ ಅನಂತ ವಂದನೆಗಳು. ಶ್ರೀ|| ಲಕ್ಷ್ಮೇಶ್ವರರು ತಮ್ಮ ಕಾದಂಬರಿಯನ್ನು ಪ್ರಕಟಿಸಲು ಅನುಮತಿಯನ್ನಿತ್ತರು. ಪ್ರಿನ್ಸಿಪಾಲ ಗೋಕಾಕರು ಈ ಕಾರ್ಯದಲ್ಲಿ ಹುರುಪನ್ನಿತ್ತು ಪತ್ರ ಬರೆದರು. ಶ್ರೀ|| ಆರ್. ವ್ಹಿ. ಕುಲಕರ್ಣಿ M. A. ಇವರು ಈ ಕಾದಂಬರಿಯನ್ನು ಒಂದು ರೂಪಕ್ಕೆ ತಂದುಕೊಟ್ಟರು. ಇವರೆಲ್ಲರಿಗೂ ನನ್ನ ಅನಂತವಂದನೆಗಳು.

ಶ್ರೀಮಾನ್ನರಾದ ಮಹಿಷೀ ಮತ್ತು ಬೆಟಗೇರಿಯವರು ಬೇಗನೇ ತಮ್ಮ ತಮ್ಮ ಗ್ರಂಥಗಳನ್ನು ನನಗೆ ದಯಪಾಲಿಸುವರೆಂದು ನಂಬಿದ್ದೇನೆ. ಅವರು ಕೊಟ್ಟ ಕೂಡಲೇ ಓದುಗರಿಗೆ ಅರ್ಪಿಸುವದು ನನ್ನ ಕರ್ತವ್ಯ.

ಈ ಹೊತ್ತಿಗೆಯನ್ನು ಅತಿ ತುಸು ದಿನಗಳಲ್ಲಿ ಅಚ್ಚು ಹಾಕಿಸಿಕೊಟ್ಟ ವಾಗ್ವಿಲಾಸ ಪಾವರ ಪ್ರಿಂಟಿಂಗ ವರ್ಕ್ಸದ ಮಾಲಕರ ಉಪಕಾರಸ್ಮರಿಸುವೆನು. ಪ್ರಕಾಶನ ಕಾರ್ಯದಲ್ಲಿ ನೆರವಾದ ನನ್ನ ಗೆಳೆಯ ಶ್ರೀ|| ಬಸವಣ್ಣೆಪ್ಪ ಅಣ್ಣಾ ಸಂಕೇಶ್ವರ ಇವರಿಗೆ ವಂದನೆಗಳು.

೧—೯—೪೭ ಕೆಲವುದಾನಿ ಗುರುರಾಯ.

## ಓದುಗರಲ್ಲಿ ಅರಿಕೆ.

ನಾನು ಬರೆದ "ಗ್ರಾಮಪಂಚಾನನ"ದ ಮೊದಲನೆಯ ಭಾಗವು ಮನೋಹರ ಗ್ರಂಥಮಾಲೆಯ ೪೯ನೆಯ ಕುಸುಮದಲ್ಲಿ ೧೯೪೦ ಎಪ್ರಿಲ್ ತಿಂಗಳಲ್ಲಿ ಅರಳಿತು. ಮುಂದೆ ಮಹಾಯುದ್ಧದ ಜ್ವಾಲೆಯೇ ಎದ್ದಿತು. ತಾವರೆಗಳೇ ತಲ್ಲಣಿಸುವ ಸಮಯದಲ್ಲಿ ತುಂಬಿಯು ಹೂವನ್ನು ಹುಡುಕುವವರಾರು? ಹೀಗಾಗಿ ನಾನು ಬರೆದ ಪಂಚಾನನದ ಎರಡನೆಯ ಭಾಗವು ಮೂಲೆಗುಂಪಾಯಿತು. ನಾನಂತೂ ಮೊದಲೇ ಮುಗ್ಗಲಗೇಡಿ. ಓದುಗರ ಆತುರವೇನೋ ಕೇಳಬರುತ್ತಿತ್ತು. ನಿರ್ಧನಿಕನಾದ ನಾನು ಮಾಡುವದೇನು?

ಯುದ್ಧಜ್ವಾಲೆಯು ಶಾಂತವಾಗುವ ಸಮಯವನ್ನು ನಿರೀಕ್ಷಿಸುತ್ತ ಕುಳಿತಿ. ಓದುಗರೆಲ್ಲ ನಿರಾಶರಾದರು. ಅಷ್ಟರಲ್ಲಿ ವ್ಹಿಶ್ ನಗರಕಾಲೇಜದ ಪ್ರಿನ್ಸಿಪಾಲ ರಾದ ಗೋಕಾಕರವರು ಮೂಲೆಗುಂಪಾದ ಹೊತ್ತಿಗೆಯನ್ನು ತೆಗೆದೊಯ್ದರು. ಮಿ|| ಆರ್. ವ್ಹಿ. ಕುಲಕರ್ಣಿ ಎಂ. ಎ. ಇವರು ತಿದ್ದಿ, ಅಚ್ಚುಕೊಡಲಿಕ್ಕೆ ಯೋಗ್ಯವಾದದ್ದನ್ನು ಮಾಡಿದರು. ಕಾಗದ ದೊರೆಯುವದೇ ದುಸ್ತರವಾದ್ದ ರಿಂದ ಹಿಂಜರಿದರು ಪ್ರಕಾಶಕರು, ಆದರೂ ಸಂಜೀವಿನಿ ಪ್ರಕಾಶನದವರು ತಮ್ಮ ಮಾಲೆಯಲ್ಲಿ ಪ್ರಕಟಿಸಲು ಸಮ್ಮತಿಸಿದರು. ಮಹಾಯುದ್ಧದ ಜ್ವಾಲೆಯೂ ಅಡಗಿತು ಅಂತೂ ಆರು ವರ್ಷಗಳ ಮೇಲಾದರೂ ನನ್ನ ಕಾದಂಬರಿಯ ಎರಡನೆಯ ಭಾಗವು ಹೊರಬಿದ್ದದ್ದು ನನ್ನ ಸುದೈವವೆಂದು ಭಾವಿಸಿದ್ದೇನೆ.

ಗ್ರಾಮ ಪಂಚಾನನವು ಹೊರಬಿದ್ದೊಡನೆ ಎಷ್ಟೋ ಸಿಂಹಗಳು ಗರ್ಜಿ ಸಿದವು. ಬೇಟೆಗಾರರು ಬೆನ್ನು ಚಪ್ಪರಿಸಿದರು. ತನ್ನ ಆಳುವರಿತ ಗ್ರಾಮ ಪಂಚಾನನಕ್ಕೆ ತಗ್ಗು-ಹಿಗ್ಗುಗಳಾಗಲಿಲ್ಲ. ಹಾಗೆಯೇ ಹೊಂಚುಹಾಕಿಕೊಂಡು ಕುಳಿತಿತ್ತು. ಕಾಲದ ಪ್ರತಿಕೂಲತೆಯಿಂದ ಗ್ರಾಮಪಂಚಾನನವು ಪ್ರಾಚೀನ ಪರಂಪರೆಯಲ್ಲಿ ಹುಟ್ಟಿತು. ಈಗ ಆಧುನಿಕ ಪ್ರಪಂಚದಲ್ಲಿ ಬೆಳೆಯುಹತ್ತಿದೆ ಕರ್ನಾಟಕದಲ್ಲಿಯ ಒಡಕೇ ಈ ಕಾದಂಬರಿಯ ಉಗಮಸ್ಥಳ. ಅದರ ಬಾಲ ಲೀಲೆಯು ಮೊದಲನೇ ಭಾಗದಲ್ಲಿ ಬಂದಿದೆ. ತಾರುಣ್ಯತಾಂಡವವು ಎರಡ ನೆಯ ಭಾಗದಲ್ಲಿದೆ. ವಾರ್ಧಿಕ್ಯ ವೈರಾಗ್ಯವು ಮೂರನೆಯ ಭಾಗದಲ್ಲಿ ಬರ ಬಹುದು. ನಮ್ಮ ಒಡಕಣ್ಣ ಸತ್ತಿಲ್ಲ; ವೃದ್ಧನಾಗಿರುವ ಹುಣಸೆಯ ಹಣ್ಣು. ಅದರ ಹುಳಿಹೋಗದು. ಒಡಕಣ್ಣ ವಾಲ್ಮೀಕಿಯಾಗಬೇಕು. ಅದು ಕಾಲ ಚಕ್ರದ ಗತಿ; ಅಂದಿಗೇ ಈ ಕಾದಂಬರಿಯು ಮುಗಿಯುವುದು. ಈ ಭಾಗವು ಹೊರಬೀಳಲಿಕ್ಕೆ ಅತ್ಯಂತ ದಕ್ಷತೆ ವಹಿಸಿದ ಪ್ರಿನ್ಸಿಪಾಲ ಗೋಕಾಕರವರನ್ನೂ ಉದಯೋನ್ಮುಖರಾದ ಆರ್. ವ್ಹಿ. ಕುಲಕರ್ಣಿಯವರನ್ನೂ ತಮ್ಮ ಮಾಲೆ ಯಲ್ಲಿ ಪ್ರಕಟಿಸಲಿಕ್ಕೆ ಇಂಬುಗೊಟ್ಟ ಶ್ರೀ ಕಲಮದಾನಿಯವರನ್ನೂ ಅಭಿನಂ ದಿಸುತ್ತೇನೆ. ಇಲ್ಲಿಯವರೆಗೆ ಗ್ರಾಮಪಂಚಾನನದ ಎರಡನೆಯ ಭಾಗಕ್ಕಾಗಿ ದೀರ್ಘಕಾಲ ಮಾರ್ಗಪ್ರತೀಕ್ಷೆ ಮಾಡಿದ ಓದುಗರ ಕ್ಷಮೆಯನ್ನು ಯಾಚಿಸು ವೆನು. ಹೆಸರಿಗೆ ತಕ್ಕಂತೆ ಸಂಜೀವಿನಿ ಪ್ರಕಾಶನದ ಸಂಪಾದಕರು ಈ ರೀತಿ ನನ್ನಂಥ ಅನೇಕ ಲೇಖಕರಿಗೆ ನೆರವಾಗಲೆಂದು ಹಾರೈಸದಿರಲಾರೆ.

ಬಾ. ಕೃ. ಲಕ್ಷ್ಮೇಶ್ವರ

# ಗ್ರಾಮ ಪಂಚಾನನ

## ೧ ಕಾಮನಹಬ್ಬದ ಕೋಲಾಹಲ.

ಫಾಲ್ಗುಣ ಶುದ್ಧ ಬಿದಿಗೆಯ ಚಂದ್ರನನ್ನು ನೋಡಿದ ಕೂಡಲೆ ಸಣ್ಣ ಹುಡುಗರು ಶಂಖವಾದ್ಯವನ್ನು ಪ್ರಾರಂಭಿಸಿಬಿಡುತ್ತಾರೆ. ಹೋಳಿಯ ಹಬ್ಬ ಸಮೀಪಿಸಿದೆಯೆಂಬುದಕ್ಕೆ ಅದು ಬಲವಾದ ಗುರುತು. ಬ್ರಹ್ಮಪುರೀ ವರ್ಣನೆಯಲ್ಲಿ ಈ ಹಬ್ಬದ ಬಗ್ಗೆ ಕಾಣಿಸಿದ ಐತಿಹ್ಯವನ್ನು ಇಲ್ಲಿ ಉದ್ಧರಿಸುವುದು ಯುಕ್ತವೆನಿಸುತ್ತದೆ.

"ಒಂದಾನೊಂದು ಕಾಲದಲ್ಲಿ ಹೋಳಿ ಎಂಬ ದುಷ್ಟ ರಾಕ್ಷಸಿ ಇದ್ದಳು. ಆಕೆಯು ಸಣ್ಣ ಮಕ್ಕಳನ್ನು ಕೊಂದು ತಿಂದು ತನ್ನ ಹಸಿವನ್ನು ಹಿಂಗಿಸಿಕೊಳ್ಳುತ್ತಿದ್ದಳು. ಅವಳ ಬಾಧೆಯಿಂದ ಬಳಲಿದಂಥವರಾಗಿ ಜನರೆಲ್ಲಾ ಪರಮಾತ್ಮನಿಗೆ ಶರಣುಹೋದರು. ಆಗ ದೈತ್ಯಾರಿಯು ಚಿಕ್ಕ ಬಾಲಕನ ರೂಪವನ್ನು ಧಾರಣಮಾಡಿ, ತನ್ನನ್ನು ತಿನ್ನಲಿಕ್ಕೆ ಬಂದ ಹೋಳಿಕೆಯ ಹರಣವನ್ನು ಹೀರಿದನು. ಆಗ ಬಾಲಕರೆಲ್ಲಾ ಆನಂದಭರಿತರಾಗಿ ಹಲಗೆಗಳನ್ನು ಬಡಿಯುತ್ತಾ, ಅವಾಚ್ಯಶಬ್ದಗಳನ್ನು ಆಡುತ್ತಾ, ಶಂಖವಾದ್ಯವನ್ನು ಪುಟಿಸುತ್ತಾ, ಕುಳ್ಳು ಕಟ್ಟಿಗೆಗಳನ್ನು ಕದ್ದು ತಂದು, ಆ ರಾಕ್ಷಸಿಯ ದೇಹಕ್ಕೆ ಅಗ್ನಿ ಸಂಸ್ಕಾರ ಮಾಡಿದರು. ಆ ಚಿತೆಯ ಬೂದಿಯನ್ನು ತಮ್ಮ ಹಣೆಗೆ ಹಚ್ಚಿಕೊಂಡು, ತಮ್ಮ ಅರಿಷ್ಟವು ದೂರಾಯಿತೆಂದು ಭಾವಿಸಿದರು. ಅಂದು ಫಾಲ್ಗುಣ ಶುದ್ಧ ಪೌರ್ಣಿಮೆಯು ಹುಬ್ಬಾನಕ್ಷತ್ರದಿಂದ ಯುಕ್ತವಾಗಿತ್ತು. ಹೀಗಿರುವದರಿಂದ ಆ ಹುಣ್ಣಿವೆಗೆ ಹೋಳೀ ಹುಣ್ಣಿವೆಯೆಂಬ ಹೆಸರು ಬರುವಂಥಾದ್ದಾಗಿದೆ."

ಈ ಪರಂಪರೆಯ ಮೇರೆಗೆ ಭಾವಿಕರಾದ ಹಿಂದೂಗಳಲ್ಲಿ ಹೋಳಿಕೆಯ ಪ್ರತಿಮೆಯನ್ನು ಹುಬ್ಬಾನಕ್ಷತ್ರದ ದಿವಸ ತಮ್ಮ ಮನೆಯ ತಲೆಬಾಗಿಲ

ಮುಂದೆ ದಹಿಸುವ ಪರಿಪಾಠವೂ ಇದೆ. ಇದಲ್ಲದೆ ಹೋಳಿಹುಣ್ಣಿವೆಯ ದಿವಸ ಕಾಮರತಿಯರ ಪ್ರತಿಮೆಗಳನ್ನು ಸ್ಥಾಪಿಸಿ, ಮುಂದೆ ಐದು ದಿವಸ ಉತ್ಸವಮಾಡಿ ರಂಗಪಂಚಮಿಯ ದಿನ ಕಾಮದಹನ ಮಾಡುವ ಪದ್ಧತಿಯೂ ಅಲ್ಲಲ್ಲಿ ಪ್ರಚಾರದಲ್ಲಿದೆ. ಈ ಪದ್ಧತಿಗೆ ಸ್ಕಂದಪುರಾಣದಲ್ಲಿ ಹೇಳಿದ ಕಾಮದ ಹನದ ಕಥೆಯೂ ಆಧಾರವಾಗಿದೆ. ಈ ಹಬ್ಬವು ವಸಂತಕಾಲದಲ್ಲಿ ಬೆಳೆಯ ಬಹುದಾದ ಕಾಮವನ್ನು ಆರಂಭದಲ್ಲಿಯೆ ದಹಿಸುವದಕ್ಕೆ ಮಾಡುವ ಪರ್ವ ವೆಂದು ವೈದಿಕರು ವಾದಿಸುತ್ತಾರೆ; ಸಮಾಜ ಹಿತಕ್ಕಾಗಿ ಕಾಮನು ಮಾಡಿದ ಸ್ವಾರ್ಥತ್ಯಾಗದ ಸ್ಮಾರಕಕ್ಕಾಗಿ, ಅವನನ್ನು ಅಭಿನಂದಿಸಿ, ರಾಷ್ಟ್ರದ ತರುಣ ರಲ್ಲಿ ನವಜಾಗ್ರತಿಯನ್ನು ಹುಟ್ಟಿಸಲಿಕ್ಕೆಂದು ಆಚರಿಸುವ ರಾಷ್ಟ್ರೀಯ ಹಬ್ಬ ವೆಂದು ಲೌಕಿಕರು ಹೇಳುತ್ತಾರೆ. ಅದೇನೆ ಇರಲಿ, ಹೋಳಿಹಬ್ಬ ಮಾತ್ರ ನಡೆಯುತ್ತಿದೆ.

ಬೊಮ್ಮೀಗೇರಿಯಲ್ಲಿ ನಡೆದದ್ದು ಹೋಳಿಕಾದಹನವೂ ಅಲ್ಲ; ಕಾಮದ ಹನವೂ ಅಲ್ಲ. ಅದು ಗ್ರಾಮಜೀವನದ ಶಾಂತಿದಹನ.

ಈ ಸಲದ ಕಾಮನಹಬ್ಬದಲ್ಲಿ ಒಡಕಣ್ಣನು ಬಹಳ ಆಸಕ್ತಿಯನ್ನು ತೋರಿದನು. ಅವನ ತಂತ್ರಗಳ ಪ್ರಭಾವದಿಂದ ಬೊಮ್ಮೀಗೇರಿಯ ಜನತೆ ಯಲ್ಲಿ ವೈಮನಸ್ಸಿನ ಅಂಕುರವು ಆಗಲೆ ಮೊಳೆತಿತ್ತು. ಅದಕ್ಕೆ ನೀರೆರೆದು, ಗೊಬ್ಬರಹಾಕಿ ಮಹಾವೃಕ್ಷವನ್ನಾಗಿ ಮಾಡುವುದಕ್ಕೆ ಕಾಮನ ಹಬ್ಬವೇ ತಕ್ಕದ್ದೆಂದು ಅವನು ಕಂಡು ಹಿಡಿದಿದ್ದನು. ಎಂತಲೆ ಹಬ್ಬಕ್ಕೆ ನಾಲ್ಕಾರು ದಿನ ಮುಂಚಿತವಾಗಿ ಬ್ರಾಹ್ಮಣರಲ್ಲಿ ನಿರುದ್ಯೋಗಿಗಳಾದ ತಲೆತಿರುಕ ತರುಣ ರನ್ನು ಒಟ್ಟುಗೂಡಿಸಿ, ಈ ವರ್ಷ ಬ್ರಾಹ್ಮಣರೆಲ್ಲರೂ ಒಟ್ಟುಗೂಡಿ ತಮ್ಮ ಓಣಿಯಲ್ಲಿಯೆ ಕಾಮನನ್ನಿಟ್ಟು ಒಳ್ಳೇ ವೈಭವದಿಂದ ಹಬ್ಬವನ್ನು ಮಾಡಬೇ ಕೆಂದೂ ಅದಕ್ಕೆ ಬೇಕಾದ ಸಹಾಯವನ್ನು ತಾನು ಮಾಡುವೆನೆಂದೂ ಹುರಿ ದುಂಬಿಸಿ, ಒಂದು ಮನೆಪಟ್ಟಿಯನ್ನು ಕೂಡ ಸಿದ್ಧಪಡಿಸಿ, ಅದರಂತೆ ದುಡ್ಡು ಕೂಡಿಸಲಿಕ್ಕೆ ಅವರನ್ನು ಕಳುಹಿದನು. ಮತ್ತು ತನ್ನ ಎರಡು ರೂಪಾಯಿ ಗಳ ಪಟ್ಟಿಯನ್ನು ಮೊದಲಿಗೇ ಕೊಟ್ಟುಬಿಟ್ಟನು.

ಒಡಕಣ್ಣಿನ ಪ್ರತಿಕಕ್ಷಿಗಳಾದ ಗಂಗಾಧರ ದೀಕ್ಷಿತರೇ ಮೊದಲಾದವರ ಮಕ್ಕಳು ಮೊಮ್ಮಕ್ಕಳು ಸಹ ಈ ತಂಡದಲ್ಲಿ ಸೇರಿದ್ದರಿಂದ ಮೇಲೆ ಕೇಳುವುದೇನು! ಎಲ್ಲರೂ ಹಿಂಡುಗಟ್ಟಿಕೊಂಡು ಮನೆಮನೆ ತಿರುಗಿ ಪಟ್ಟಿಯನ್ನು ಕೇಳಲಿಕ್ಕೆ ಪ್ರಾರಂಭಿಸಿದರು. ಒಡಕಣ್ಣನು ತಯಾರಿಸಿದ ಪಟ್ಟಿಯಲ್ಲಿ ತಂತ್ರಾನುಕೂಲವಾದ ತಾರತಮ್ಯವಿಲ್ಲದಿದ್ದರೆ ಅವನಿಗೆ ಒಡಕಣ್ಣನೆಂದು ಏಕೆನ್ನಬೇಕು? ತನ್ನ ಪಂಗಡದವರಿಗೆ ನಾಲ್ಕಾಣೆ ಪಟ್ಟಿಯಿದ್ದರೆ ತನ್ನ ವಿರುದ್ಧ ಪಕ್ಷದವರಿಗೆ ರೂಪಾಯಿ ಎರಡು ರೂಪಾಯಿಗಳವರೆಗೂ ಜಡಿದಿದ್ದನು. ಒಡಕಣ್ಣನ ಅನುಯಾಯಿಗಳು ತಮ್ಮ ಪಟ್ಟಿಯನ್ನು ಬೇಗಬೇಗನೆ ಕೊಡತೊಡಕಿದರು.

ಗಿರಿಧರರಾಯರು ಮಾತ್ರ ಈ ಪಟ್ಟಿಗೆ ವಿರೋಧಿಸಿ ಪಟ್ಟಿ ಎತ್ತುವವರಿಗೊಂದು ಭಾಷಣವನ್ನೆ ಕೊಟ್ಟರು.

“ಅಲ್ಲಪ್ಪೋ, ನಮ್ಮ ಊರಾಗ ಇಂದಿನತನಕಾ ಬ್ರಾಹ್ಮಣರ ಕಾಮು ಅಂತೇನು ಪ್ರತ್ಯೇಕ ಕಾಮುನ್ನ ಕೂಡಿಸಿಲ್ಲ. ಈ ಹಬ್ಬಾ ಅಂಬೋದು ಒಂದು ಜಾತೀಯವರದಲ್ಲ. ಬ್ರಾಹ್ಮಣರಿಂದ ಹಿಡಿದು ಪಂಚಮರ ತನಕಾ ಎಲ್ಲಾರೂ ಕೂಡಿ ನಡಿಬೇಕೂ ಅಂಬೋದನ್ನ ಕೃತಿಯಿಂದ ತೋರಿಸಲಿಕ್ಕೆ ಮಾಡೋ ಹಬ್ಬ ಇದು. ಆದಕ್ಕ ನೀವು ಬ್ರಾಹ್ಮಣರ ಕಾಮು ಅಂತ ಬ್ಯಾರೆ ಕಾಮುನ್ನ ಇಡಬ್ಯಾಡ್ರಿ. ಹಿಂದಿನಿಂದ ನಡದು ಬಂದಂತೆ ಎಲ್ಲಾ ಜಾತಿಯವರೂ ಕೂಡಿಕೊಂಡು, ಎನಪಾ ಅಂತಂದ್ರ, ಒಕ್ಕಟ್ಟಿನಿಂದ ಈ ಹಬ್ಬಾ ಮಾಡಿದರ ನಾನು ಪಟ್ಟೀ ಕೊಟ್ಟೇನು. ಇಲ್ಲಪಾಂತಂದ್ರ ಒಂದುಕಾಸು ಸಹಿತ ಕೊಡೂದಿಲ್ಲ. ಏನ್ರೆಪಾ!”

ಒಡಕಣ್ಣನಲ್ಲಿ ತರಬೇತಾಗಿ ಬಂದ ಹುಡುಗರು ಇದಕ್ಕೆ ಸೊಪ್ಪು ಹಾಕಿಯಾರೆ? ಗಿರಿಧರರಾಯರ ಮೊಮ್ಮಕ್ಕಳೆ ಮುಂದಾಗಿ, “ಬ್ರಾಹ್ಮಣರೊಳಗ ಎಷ್ಟೋ ಮಂದಿ ಪಟ್ಟೀ ಕೊಟ್ಟಾರ ನೀವು ಯಾಕ ಕೊಡಬಾರದು? ಕಂಡ ಕಂಡ ಜಾತಿಯವರ ಮನಿಗೆ ಹೋಗಿ “ನೀವು ಕೊಡ್ರೆಪಾ ನೀವು ಕೊಡ್ರೆಪಾ” ಅಂತ ತಿರಕೊಳ್ಳೋ ಕೆಲಸ ನಾವು ಮಾಡೂದಿಲ್ಲ” ಎಂದೂ ಆಗ್ರಹಮಾಡಿದರು.

ಒಡಕಣ್ಣನ ತಂತ್ರದಿಂದ ತಮ್ಮ ಮೊಮ್ಮಕ್ಕಳೂ ತಮಗೆ ತಿರುಗಿ ಬಿದ್ದುದನ್ನು ಕಂಡು ಗಿರಿಧರರಾಯರ ಸಿಟ್ಟು ನೆತ್ತಿಗೇರಿತು. ಅವರು ಮೊಮ್ಮಕ್ಕಳ ಮೇಲೆ ಹರಿಹಾಯ್ದು, "ಎಲಾ ಶೀನ್ಯಾ, ಶ್ರೀಪ್ಯಾ, ನಿಮ್ಮ ತಲೀಮ್ಯಾಲಿನ ಮಾಸಹಾರಿಲ್ಲ; ನನಗ ಬುದ್ಧೀ ಹೇಳಲಿಕ್ಕೆ ಬಂದಿರಾ? ಸುಮ್ಮಗ ಮನೀ ಮೂಲ್ಯಾಗ ಬಿದ್ದಿರ್ರಿ. ಆ ಕಾಮನ ಹಂದ್ರಕ್ಕ ಹೋದ್ರಿ ಅಂದ್ರ ನಿಮ್ಮ ಕಾಲ ಕ ಮುರಿದೇನು" ಎಂದು ಗದ್ದರಿಸಿದರು.

ಪಟ್ಟಿ ಕೇಳಲಿಕ್ಕೆ ಬಂದ ಹುಡುಗರಿಗೂ ಸಿಟ್ಟು ಬಂತು. ಅವರು ನೆಟ್ಟಗೆ ಒಡಕಣ್ಣನ ಬಳಿಗೆ ಬಂದರು. ಒಡಕಣ್ಣನು "ಯಾಕರ್ಯೋ, ಮಾರೀ ಒಣಗಿಸಿಕೊಂಡು ಬಂದಿರಲ್ಲ?" ಎಂದು ಬಹು ಉತ್ಕಂಠೆಯಿಂದ ಕೇಳಿದನು. ಅವರು ಗಿರಿಧರರಾಯರ ಮನೆಯಲ್ಲಿ ತಮಗಾದ ಅಪಮಾನ ವನ್ನು ಬಣ್ಣಿಸಿ ಹೇಳಿದರು.

ಅದಕ್ಕೆ ಒಡಕಣ್ಣನು "ಆ ಮುದಿಡ್ವಾರಾ ಬಹಳ ಜೀನ ಪಂಕ ಇದ್ದಾನ. ರುಡ್ಡು ಕೇಳಿದರ ಅವನ ಗಡ್ಡಕ್ಕ ಬೆಂಕಿ ಹತ್ತಿಧಾಂಗ ಆಗ್ತದ. ಇಂಥವರು ಈ ಊರಾಗ ನಾಕಾರ ಮಂದಿ ಇದ್ದಾರ. ಅವರು ಪಟ್ಟೀ ಕೊಡದಿದ್ರ ಇಲ್ಲ. ಮುಂದ ಅವರ ಪಾರುಪತ್ಯ ಮಾಡೋಣಂತ. ನಾ ಕೊಟ್ಟ ಎರಡು ರೂಪಾಯಿ ನನಗ ಕೊಡ್ರಿ ನಿಮಗ ಹಂದ್ರಾ ಹಾಕಲಿಕ್ಕೆ ಬೇಕಾದ ಸಾಮಾ ನೆಲ್ಲಾ ನಾ ಕೊಡತೀನಿ. ಈಗ ಕೂಡಿದ ಪಟ್ಟಿಯೊಳಗ ಒಂದು ಕಾಮನ ಮಾರೀ ತಂದು ಹುಲ್ಲಕಾಮನ್ನ ಮಾಡಿ ಕೂಡಿಸಿ, ನೀವೆಲ್ಲಾ ಕೂಡಿ ಹೋಳೀ ಹಬ್ಬಾ ಮಾಡ್ಲಿಕ್ಕೇಬೇಕು. ಹಿಡಿದ ಕೆಲಸಾ ಬಿಟ್ಟು ಹೇಡೀ ಅಂತ ಅನಿಸಿಕೊಳ್ಳಬ್ಯಾಡ್ರಿ" ಎಂದು ಅವರನ್ನು ಹುರಿದುಂಬಿಸಿ, ತನ್ನ ಎರಡೂ ರೂಪಾಯಿಗಳನ್ನು ತಿರುಗಿ ತೆಗೆದುಕೊಂಡು, "ಇವತ್ತ ರಾತ್ರಿ ಬೆಳದಿಂಗಳದಾಗ ನೀವೆಲ್ಲರೂ ಕೂಡಿ ಬಂದು, ನಮ್ಮ ಓಣ್ಯಾಗ ಕ ಹಂದರಾ ಹಾಕ್ರಿ. ಮಂಟಪಾ ಗಿಂಟಪಾ ಏನೂ ಬ್ಯಾಡ. ಹುಣ್ಣಿವೀ ದಿವಸ ಹುಲ್ಲಕಾಮನ್ನಿಟ್ಟು ನಾಕು ದಿನ ಹುರ್ ಅಂತ ಗೊಂದಲಾ ಹಾಕಿದ್ರ ತೀರಿತು. ಅದರೊಳಗ ಏನು ಬಂದಷ್ಟು ನಾ ನೋಡಿಕೋತೀನಿ," ಅಭಯವಚನವನ್ನಿತ್ತನು. ಹುಡುಗರು ಸಮಾ ಧಾನಹೊಂದಿ ಹೊರಟು ಹೋದರು.

ಬ್ರಾಹ್ಮಣರು ಪ್ರತ್ಯೇಕವಾಗಿ ಕಾಮನನ್ನಿಡುವರೆಂಬ ವಾರ್ತೆಯು ಬೊಮ್ಮೇಗೇರಿಯ ತುಂಬಾ ಹರಡಿತು. ಉಳಿದ ಜಾತಿಯವರಿಗೇನು ಹೇವ ವಿಲ್ಲವೆ ? ಬ್ರಾಹ್ಮಣರಕಾಮ, ಲಿಂಗವಂತರಕಾಮ, ಕುರುಬರಕಾಮ, ಬಣ ಜಿಗರಕಾಮ- ಹೀಗೆ ಹಲವಾರು ಕಾಮುಗಳು ಕುಳಿತವು.

ಜಾತಿಯ ಒಡಕು ಸ್ಪಷ್ಟವಾಯಿತು. ಮೊದಲೇ ಒಡಕಣ್ಣನು ಎಣಿಸಿದಂತೆ ಅವನ ಒಡಕಿನ ತಂತ್ರವು ಸಫಲವಾಯಿತು. ತಾನೊಂದು ಬಗೆದರೆ ದೈವವೊಂದು ಬಗೆಯಿತೆಂಬ ಮಾತು ಪರಂಪರಾಗತವಾದ ನಮ್ಮ ಆಚಾರಗಳಿಗೆ ಹತ್ತುವಂತೆ ಇನ್ನಾವುದಕ್ಕೂ ಹತ್ತಲಾರದೆನೋ ! ಯಾವ ಹಬ್ಬವು ಜಾತಿಜಾತಿಗಳ ಭೇದವನ್ನು ಅಳಿಸಿ ಹಿಂದೂಗಳೆಲ್ಲರೂ ಒಂದೇ ಎಂಬ ಭಾವನೆಯನ್ನು ದೃಢಪಡಿಸುವುದಕ್ಕಾಗಿ ಪೂರ್ವಜರಿಂದ ಪರಂಪರಾಗತವಾಗಿ ನಡೆದುಬಂದಿತ್ತೋ, ಅದೇ ಈಗ ಒಡಕನಂಥ ಒಂದು ವ್ಯಕ್ತಿಯ ಕೌಟಿಲ್ಯ ದಿಂದ ಜಾತೀಯತೆಯ ಭೂತವನ್ನು ಬಡಿದೆಬ್ಬಿಸುವುದಕ್ಕೆ ಸಾಧನವಾಯಿತು.

ಒಡಕಣ್ಣನಿಗೆ ಮಾತ್ರ ಹಿಗ್ಗಾಯಿತೆಂಬುದರಲ್ಲಿ ಸಂದೇಹವಿಲ್ಲ. ಮುಂಚಿ ತವಾಗಿ ಗೊತ್ತಾದಂತೆ ದ್ವಾದಸಿಯ ದಿವಸ ನಾಲ್ಕು ತಾಸು ರಾತ್ರಿಯ ಸುಮಾರಕ್ಕೆ ಬ್ರಾಹ್ಮಣ ಹುಡುಗರೆಲ್ಲರೂ ದೇಸಾಯರ ಓಣಿಯಲ್ಲಿ ಹಂದರ ಹಾಕುವುದಕ್ಕೆ ಒಟ್ಟುಗೂಡಿದರು. ಹಂದರಕ್ಕೆ ಬೇಕಾಗುವ ಕಂಬಗಳನ್ನು ಒಡಕಣ್ಣನು ಆಗಲೆ ಒದಗಿಸಿ ಬಿಟ್ಟದ್ದಾನೆ !ಹುಡುಗರು ಉಬ್ಬುಬ್ಬಿ ಗುದ್ದು ತೆಗೆದರು; ಕಂಬಗಳನ್ನು ನಿಲ್ಲಿಸಿದರು. ಹಾಹಾ ಎನ್ನುವುದರಲ್ಲಿ ಹಂದರ ಸಿದ್ಧವಾಯಿತು.

ಹಂದರದ ಎದುರಿಗೆ ತಿಳ್ಳಿಯ ಆಟವು ಆರಂಭವಾಯಿತು. ಒಡಕಣ್ಣನೂ ಅವನ ಸಂಗಡದವರೂ ಒಳ್ಳೇ ಹುಮ್ಮಸ್ಸಿನಿಂದ ಆಟಕ್ಕೆ ನಿಂತರು. ಆರು ತಾಸು ರಾತ್ರಿಗೆ ಆಟವು ಒಳ್ಳೇ ಭರಕ್ಕೆ ಬಂದಿತ್ತು. ತಿಳ್ಳಿಯ ಆಟದ ಅಬ್ಬರದ ದನಿಯನ್ನು ಕೇಳಿ ಗಿರಿಧರರಾಯರ ಮೊಮ್ಮಕ್ಕಳು ಚಡಪಡಿಸಿ, ಹೊಂಚು ಹಾಕಿ, ಕಾಮನ ಹಂದರಕ್ಕೆ ಓಡಿಬಂದರು. ಆಡುವವರ ರಭಸದಲ್ಲಿ ಇವ ರನ್ನಾರು ಕೇಳಬೇಕು ? ಇವರು ಹಾಗೆಯೆ ಮೋರೆಯೊಣಗಿಸಿಕೊಂಡು ನಿಲ್ಲ

ಬೇಕಾಯಿತು. ಮನೆಕಟ್ಟುವವರಿಗೂ ಹಾಯುವವರಿಗೂ ಹೆಜ್ಜೆಹೆಜ್ಜೆಗೆ ಜಗಳವೇಳುತ್ತಿತ್ತು. ಒಡಕಣ್ಣನು ಕುಶಲತೆಯಿಂದ ಅವೆಲ್ಲವನ್ನೂ ಮುರಿಯುತ್ತಾ ಏಳು ತಾಸು ರಾತ್ರಿಯವರೆಗೆ ಆಟವನ್ನು ಸಾಗಿಸಿದನು. ಅಷ್ಟು ಹೊತ್ತಿಗೆ ದಣುವಾದದ್ದರಿಂದ ಅವರು ತಿಳ್ಳಿಯನ್ನು ಬಿಟ್ಟು, ಹಂದರಕ್ಕೆ ಸೇರಿ ಇಸ್ಪೀಟಿಗೆ ಕೈಯಿಟ್ಟರು. ಈ ಆಟದಲ್ಲಿ ಮಾತ್ರ ಓಡಕಣ್ಣನು ಗಿರಿಧರರಾಯರ ಮೊಮ್ಮಕ್ಕಳನ್ನು ಸೇರಿಸಿಕೊಂಡನು. ಆಟಕ್ಕೆ ಸೇರದ ಉಡಾಳರ- ಒಡಕಣ್ಣನ ಉತ್ತೇಜನದಿಂದ ಕುಳ್ಳು ಕಟ್ಟಿಗೆಗಳನ್ನು ಕದಿಯಲಿಕ್ಕೆ ಹೊರಟರು.

ಅವರು ಗೌಳಿಗರ ಬಿಡಾರಕ್ಕೆ ಹೋಗಿ ಕುಳ್ಳುಗಳನ್ನು ಕದ್ದು ತಂದು, ಕಾಮನ ಹಂದರದ ಮುಂದೆ ಹಾಕಿ ಬೆಂಕಿಯಿಟ್ಟರು. ಎಷ್ಟೋಂ ಉಡಾಳರು ಕಟ್ಟಿಗೆಯ ದೊಡ್ಡ ದೊಡ್ಡ ಬೊಡ್ಡೆಗಳನ್ನೇ ಹೊತ್ತು ತಂದು ಅಗ್ನಿಗೆ ಆಹುತಿಕೊಟ್ಟು, ಅತ್ಯಂತ ಉತ್ಸಾಹದಿಂದ ಶಂಖವಾದ್ಯವನ್ನು ಪ್ರಾರಂಭಿಸ ಹತ್ತಿದರು. ಹುಡುಗರ ಸಾಹಸವನ್ನು ಒಡಕಣ್ಣನು ಮನಸ್ವೀ ಹೊಗಳಿದನು. ಒಂಬತ್ತುತಾಸು ರಾತ್ರಿಯ ಸುಮಾರಕ್ಕೆ ಕೈ ಬಾಯಿಗಳೆರಡೂ ದಣಿದ ಮೇಲೆ ಹುಡುಗರು ಹಂದರದಲ್ಲಿ ಹಾಸಿದ ಗುಡಾರದ ಮೇಲೆ ಒರಗಿಕೊಂಡರು. ಒಡಕಣ್ಣನು ಏನೂ ಅರಿಯದವನಂತೆ ತನ್ನ ಮನೆಗೆ ಹೋಗಿ ಮಲಗಿಕೊಂಡನು.

ಬೆಳಗಾಗುತ್ತಲೆ ಬಡಗೌಳಿಗರು ಎದ್ದು ತಮ್ಮ ಕುಳ್ಳಬಾನಗಳೆಲ್ಲ ಹಾಳಾದದ್ದನ್ನು ನೋಡಿ, ಹೊಟ್ಟೆಯುರಿದು ನಿಜವಾಗಿ ಶಂಖವಾದ್ಯಮಾಡಿದರು. ಅವರು ಹಾಲು ಮೊಸರು ಮಾರುವುದಕ್ಕೆಂದು ಬಂದಾಗ ಬ್ರಾಹ್ಮಣರ ಕಾಮನ ಹಂದರದೆದುರಿಗೆ ಬಿದ್ದ ಬೂದಿಯ ರಾಶಿಯನ್ನು ಕಂಡರು. ಬಡತನದಲ್ಲಿಯೆ ನಾವು ರಟ್ಟೆ ಮುರಿದು ಕೂಡಿಟ್ಟ ಬದುಕನ್ನು ಸುಧಾರಿಸಿದವರೆಂದುಕೊಳ್ಳುವ ಹಾರುವರೆ ಸುಟ್ಟುಹಾಕಿದರೆಂದು ವ್ಯಥೆಪಟ್ಟು, ಮುಯ್ಯಕ್ಕೆಮುಯ್ಯ ತೀರಿಸಬೇಕೆಂದು ಪಣತೊಟ್ಟರು.

ಅಂದು ರಾತ್ರಿಯಲ್ಲಿಯೆ ಗೌಳಿಗರು ಹುಲ್ಲಕಾಮನನ್ನು ಕೂಡಿಸಿದರು; ಮಧ್ಯರಾತ್ರಿಯಲ್ಲಿ ಓಣಿ ಓಣಿ ತಿರುಗುತ್ತಾ ಕುಳ್ಳು ಕಟ್ಟಿಗೆಗಳನ್ನು ಕದ್ದು ಸುಡುವ ಕ್ರಮವನ್ನೂ ಆರಂಭಿಸಿದರು. ಉಳಿದ ಪಂಗಡದವರೂ ಇದೇ

ಕ್ರಮವನ್ನು ಆಚರಿಸಬೇಕಾಯಿತು. ಹೀಗಾದ್ದರಿಂದ ಒಬ್ಬರ ಮೇಲೊಬ್ಬರು ತಪ್ಪು ಹೊರಿಸಿ ಪಾರಾಗುವುದಕ್ಕೆ ಅನುವು ದೊರೆಯಿತು. ಊರ ಜನರು ತಮ್ಮ ತಮ್ಮ ಕುಳ್ಳು ಕಟ್ಟಿಗೆಗಳನ್ನು ಕಾಯುತ್ತಾ ಹಿತ್ತಲಲ್ಲಿ ಮಲಗ ಬೇಕಾಯಿತು.

ಈ ಪ್ರಕಾರ ಬೊಮ್ಮೀಗೇರಿಯು ಹೋಳಿಯ ಹಾವಳಿಗೆ ಒಳಗಾದದ್ದು ಇದೇ ಮೊದಲು, ಕತ್ತೆಯಮೇಲೆ ಹತ್ತಿ ತಿರುಗುವುದು, ಕಳವು ಮಾಡುವುದು, ಕರ್ಕಶವಾದ ದುಮ್ಮದುಮ್ಮಿಯೆಂಬ ಭೀಭತ್ಸ ಪದಗಳನ್ನು ಹಾಡುವುದು ಮೊದಲಾದುವು ಯಥೇಚ್ಛವಾಗಿ ನಡೆದು, ಊರಲ್ಲಿ ಹೆಣ್ಣುಮಕ್ಕಳು ಹೊರ ಬೀಳದಂತಾಯಿತು. ಜಾತಿದ್ವೇಷವನ್ನೂ ಹೆಚ್ಚಿಸುವ ಮೇಲಾಟದ ಪದಗ ಳನ್ನು ಪರಸ್ಪರರು ಕಟ್ಟಿ ಹಾಡತೊಡಗಿದರು. ಕಾಮನ ಹಂದರಗಳು ಭಂಡರ ಭಂಡಾಟದ ಮಂದಿರಗಳಾದವು.

ಹುಣ್ಣಿವೆಯ ದಿವಸ ಕಾಮನ ಹಬ್ಬವು ಶಿಖರಕ್ಕೆ ಮುಟ್ಟಿತು. ಎಲ್ಲಿ ನೋಡಿದರಲ್ಲಿ ಹಲಗೆಗಳ ಕಣಕಣಾಟ, ಭೀಭತ್ಸಮಾತುಗಳ ಸುರಿಮಳೆ. ಹುಡುಗರು ಹೋಳಿಗೆಯ ಊಟವನ್ನು ಹೊಡೆದು, ಹೊಸ ಅರಿವೆಗಳನ್ನು ಹಾಕಿಕೊಂಡು, ಹಲಗೆಗಳನ್ನು ಬಾರಿಸುತ್ತಾ, ಹಿಂಡುಗಟ್ಟಿಕೊಂಡು ಕಾಮ ಗಳನ್ನು ನೋಡುವುದಕ್ಕೆ ಹೊರಟರು. ಇಂಥ ಚಿಕ್ಕಮಕ್ಕಳದೊಂದು ಗುಂಪು ಪೇಟೆಯಕಾಮ, ಗೌಡರ ಕಾಮುಗಳನ್ನು ನೋಡಿಕೊಂಡು ದೇಸಾಯರ ಓಣಿಗೆ ಬಂತು. ಅಲ್ಲಿದ್ದ ಕಾಮನನ್ನು ನೋಡಿ ಒಬ್ಬ ಉಲಕೋಚಿ ಬಾಲ ಕನು "ಇಲ್ಲಿ ಕಾಮ ಒಂದ ಐತಲೆ! ರತಿ ಇಲ್ಲೇಇಲ್ಲ. ಕಾಮಣ್ಣಾನೂ ಅಷ್ಟು ಚಂದಿಲ್ಲ" ಎಂದನು.

ಕಾಮನ ಹಂದರದಲ್ಲಿ ಕುಳಿತ ಕುಚೋದ್ಯಗಾರನೊಬ್ಬನು "ಇದು ಹುಲ್ಲಕಾಮ. ಇದರ ರತಿ ಜೊಯಿಸರ ಓಣ್ಯಾಗ ಕೂತದ" ಎಂದು ವ್ಯಂಗವಾಗಿ ನುಡಿದನು.

ಹುಡುಗರು ಶಂಖವಾದ್ಯವನ್ನು ಪುಟಿಸಿ, ಹಲಗೆಯನ್ನು ಬಡಿಯುತ್ತಾ ಕುಣಿಯುತ್ತಾ ರತಿಯನ್ನು ನೋಡುವ ಕುತೂಹಲದಿಂದ ಜೋಯಿಸರ

ಓಣಿಗೆ ಧುಮುಕಿದರು. ಅಲ್ಲಿ ಹೋಗಿ ನೋಡುತ್ತಾರೆ, — ಕಾಮನ ಹಂದರವೇ ಇಲ್ಲ ! ಹುಡುಗರು ನಿರಾಶರಾಗಿ ಲಕ್ಷ್ಮಣ ಜೋಯಿಸರ ಮನೆಯ ಮುಂದೆ ಹಾಯ್ದು ಹೊರಟರು. ಅವರು ಹಾಗೆ ನಾಲ್ಕು ಹೆಜ್ಜೆ ಹೋಗಿರಬಹುದು; ಅಷ್ಟರಲ್ಲಿ ಜೋಯಿಸರ ಪಡಸಾಲೆಯಲ್ಲಿ ಕಟ್ಟಿದ ಸುಂದರವಾದ ಮಂಟಪವು ಒಬ್ಬ ಬಾಲಕನ ಕಣ್ಣಿಗೆಬಿತ್ತು. ಕೂಡಲೆ ಆ ಹುಡುಗನು "ಎಲೇ ರತಿನ್ನ ಇಲ್ಲಿ ಒಳಗ ಕೂಡಿಸ್ಯಾರ, ನೋಡೋಣ ಬರ್ರಿಲೇ" ಎಂದು ಕೂಗಿಕರೆದನು.

ಹುಡುಗರೆಲ್ಲರೂ ಜೋಯಿಸರ ಅಂಗಳದಲ್ಲಿ ಹೊಕ್ಕರು. ನಿಜವಾಗಿಯೂ ಮಂಟಪದಲ್ಲಿ ತರುಣಿಯಾದ ಜೀವಂತ ರತಿಯೊಬ್ಬಳು ಕುಳಿತಿದ್ದಳು. "ಹೌದಲೆ, ಇದುರತಿ ಹೌದಲೆ" ಎಂದು ಕೂಗಿ, ಹುಡುಗರು ತಮ್ಮ ಹೋಳಿಹಬ್ಬದ ಕಾರ್ಯವನ್ನು ಆರಂಭಿಸಿದರು. ಎಷ್ಟೋ ದಿಟ್ಟಬಾಲಕರು ಮಂಟಪವನ್ನು ನೋಡಲು ಮನೆಯ ಒಳಗೇ ನುಗ್ಗಿದರು. ಅಲ್ಲಿ ಕೂಡಿದ್ದ ತರುಣಿಯರು ಅಚ್ಚರಿಗೊಂಡು, ಆ ಹುಡುಗರಿಗೆ ಬಾಯಿಗೆ ಬಂದಂತೆ ಬೈದು, ಮನೆಬಿಟ್ಟು ಹೊರಗೆ ಹೋಗಿರೆಂದು ಬೆದರಿಸಿದರು. ಹೋಳಿಹಬ್ಬದಲ್ಲಿ ಬೈಸಿಕೊಳ್ಳುವುದೇ ಭಾಗ್ಯೋದಯವೆಂದು ಭಾವಿಸಿಕೊಂಡ ಹುಡಗರು ಉಬ್ಬಿ ಒಳ್ಳೇ ಆವೇಶದಿಂದ ಹಲಗೆಗಳನ್ನು ಬಡಿಯುತ್ತಾ, ಬೊಬ್ಬೆಹೊಡೆಯಹತ್ತಿದರು.

ಮಂಟಪದಲ್ಲಿ ಕುಳಿತವಳು ರತಿಯಾಗಿರದೆ ಮೈನೆರೆದ ಗೌರಿಯೆಂದೂ ಅವಳಿಗೆ ಆರತಿ ಮಾಡುವುದಕ್ಕಾಗಿ ಸ್ತ್ರೀಯರೆಲ್ಲ ನೆರೆದಿದ್ದಾರೆಂದೂ, ಇವರಿಗೆ ತಿಳಿಸಿ ಹೇಳುವವರಾರು ? ಹೇಳಿದರೆ ಅವರನ್ನು ಕೇಳುವವರಾರು ? ಮಗಳಿಗೆ ಆರತಿಮಾಡಬೇಕೆಂದು ಉತ್ಸಾಹತಿಂದ ಕುಳಿತ ರುಕ್ಮಿಣೀಬಾಯಿಯವರ ಮನಸ್ಸಿಗೆ ಬಹಳ ವ್ಯಥೆಯಾಯಿತು. ತಾವು ಮಂಗಲಕಾರ್ಯ ಮಾಡುವಾಗ ಅಮಂಗಲವಾದ್ಯಗಳೂ, ಶಬ್ದಗಳೂ ತಮ್ಮ ಮನೆಯಲ್ಲಿ ನಡೆದದ್ದು ದುಶ್ಚಿಹ್ನವೆಂದು ಅವರು ಬಹಳ ಹಳಹಳಿ ಪಡಹತ್ತಿದರು. ಹುಡುಗರು ಒಂದೇ ಸವನೆ ಬೊಬ್ಬೆಹೊಡೆಯುತ್ತಿದ್ದರು. ಒಳಗೆ ಮಲಗಿದ ಲಕ್ಷ್ಮಣಜೋಯಿಸರು ಈ ಗದ್ದಲವನ್ನು ಕೇಳಿ ಹೊರಗೆ ಬಂದು, ಆರ್ಭಟಿಸಿ ಬಾಲಕರ ಹಿಂಡನು

ಹೊರಗಟ್ಟಬೇಕಾಯಿತು. ಹುಡುಗರು ಉಚ್ಚಕಂಠದಲ್ಲಿ ಹೋಳಿಯಪದಗಳನ್ನು ಹಾಡುತ್ತಲೆ ಹೋದರು.

ಒಡಕಣ್ಣನ ಅಧ್ವರ್ಯದಲ್ಲಿ ಆರಂಭವಾದ ಹೋಳಿಕಾಸತ್ರದ ಪೂರ್ಣಾಹುತಿಯು ಅಂದು ರಾತ್ರಿಯಲ್ಲಿ ಆಗತಕ್ಕದ್ದೆಂದು ಮೊದಲಿಗೇ ಗೊತ್ತಾಗಿತ್ತು. ಒಡಕಣ್ಣನು ಬಹು ದಕ್ಷತೆಯಿಂದ ಅದರ ಸಿದ್ಧತೆಯನ್ನೂ ಮಾಡಿದ್ದನು. ಸಂಜೆಯಾಗುತ್ತಲೆ ಹಂದರದ ಮುಂದೆ ಹಲಗೆಯ ಮೇಳದವರ ನರ್ತನಕ್ಕೆ ಆರಂಭವಾಯಿತು. ಕುರುಬರ ಓಣಿಯವರು ಒಂದು ಚಕ್ಕಡಿಯ ಹಳಿಗೇ ಚರ್ಮವನ್ನು ಬಿಗಿಸಿ ದೊಡ್ಡ ಹಲಗೆಯನ್ನು ಕಟ್ಟಿಸಿದ್ದರು. ಇಪ್ಪತ್ತೈದು ಸಣ್ಣಹಲಗೆಗಳ ಮೇಳದೊಂದಿಗೆ ಅದನ್ನು ಉರುಳಿಸಿ ಬಡಿಯುತ್ತಾ, ತಾಳಕ್ಕೆ ಸರಿಯಾಗಿ ತಮ್ಮ ವಾದ್ಯಘೋಷದ ಚಮತ್ಕಾರವನ್ನು ತೋರ್ಪಡಿಸಿದರು. ಒಡಕಣ್ಣನು ಅವರಿಗೊಂದು ಬೆಳ್ಳಿಯ ಕೈಯಾಳವನ್ನು ಕಾಣಿಕೆಯಾಗಿ ಕೊಟ್ಟನು. ಆ ಮೇಲೆ ಹೋಳಿಪದಗಳ ಮೇಳದವರ ಭೀಭತ್ಸ ಹಾಡುಗಳ ಮೇಲಾಟ ನಡೆಯಿತು.

ನಾಲ್ಕು ತಾಸು ರಾತ್ರಿಯ ಹೊತ್ತಿಗೆ ಯಥಾಕ್ರಮವಾಗಿ ತಿಳ್ಳಿಯಾಟವೂ, ಆರುತಾಸಿಗೆ ಹಂದರದಲ್ಲಿ ಇಸ್ಪೇಟಿನ ಆಟವೂ ನಡೆದುವು. ಒಡಕಣ್ಣನ ಪ್ರಮುಖರು ಹುಡುಗರನ್ನು ಹುರಿದುಂಬಿಸಿ ಕುಳ್ಳು ಕಟ್ಟಿಗೆಗಳ ಕಳವಿಗೂ ಕಳಿಸಿದರು. ತಮ್ಮ ಹೋಳಿಹಬ್ಬದ ಉತ್ಸಾಹವನ್ನೂ ಕಳ್ಳತನದ ಕೌಶಲ್ಯವನ್ನೂ ತೋರಿಸುವುದಕ್ಕೆ ಇದೇ ಸಮಯವೆಂದು ಕಳ್ಳಹುಡುಗರು ತಮ್ಮ ಕೋಲಾಹಲವನ್ನು ಆರಂಭಿಸಿದರು.

ಗೌಳಿಗರ ಬಸಪ್ಪನು ಕುಳ್ಳಬಾನವನ್ನು ಕಾಯಲಿಕ್ಕೆ ಹಿತ್ತಲಲ್ಲಿ ಹೊರಸಿನಮೇಲೆ ಒರಗಿದ್ದನು. ಅವನಿಗೆ ಹಾಗೆಯೆ ಗಾಢನಿದ್ರೆ ಹತ್ತಿಬಿಟ್ಟಿತ್ತು. ಎಂಟು ಜನ ಗಟ್ಟಿಗರು ಅವನು ಮಲಗಿದ ಹೊರಸಿನ ಬುಡಕ್ಕೆ ಅಲ್ಲಿಯೇ ಇಟ್ಟ ಗಳಗಳನ್ನು ಬಿಗಿದು ಅದನ್ನು ಸಿದಿಗೆಯಂತೆ ಹೊತ್ತುಕೊಂಡು ಹೋಗಿ, ಕುರುಬರ ಕಾಮನ ಹಂದರದ ಎದುರಿಗೆ ಒಗೆದು, ಭಯಂಕರವಾಗಿ ಬೊಬ್ಬೆ ಕುಟ್ಟಿ, ಓಡಿಹೋದರು.

ಬೊಬ್ಬೆಯ ಅಬ್ಬರಕ್ಕೆ ಬೆಚ್ಚಿಬಿದ್ದ ಬಸಪ್ಪನು ಎಚ್ಚತ್ತು ನೋಡಿದರೆ ಅಲ್ಲಿ ಒಬ್ಬಾನೊಬ್ಬರೂ ಇಲ್ಲ! ಅವನು ಗಾಬರಿಯಾಗಿ ಮನೆಗೆ ಬಂದು ನೋಡುವಷ್ಟರಲ್ಲಿ ಕುಳ್ಳುಬಾನವೆಲ್ಲಾ ಕಾಮನ ಅಗ್ನಿಗೆ ಆಹುತಿಯಾಗಿತ್ತು!

ಗಿರಿಧರರಾಯರು ದನದಮನೆ ಕಟ್ಟಿಸಲಿಕ್ಕೆಂದು ಕೊರೆಯಿಸಿ ಸಿದ್ಧ ಮಾಡಿಟ್ಟಿದ್ದ ಅಂಕಣದ ಸಾಮಾನುಗಳೆಲ್ಲವೂ ಅಗ್ನಿನಾರಾಯಣನಿಗೆ ಅರ್ಪಿತ ವಾದುವು. ತಿಪ್ಪಾಶಾಸ್ತ್ರಿಗಳ ಬಾವಿಯಗಡೆ ತೊಲೆ, ಕಂಬಗಳು ಪಾವಕ ನಲ್ಲಿ ಪಚನವಾದುವು. ಗಂಗಾಧರದೀಕ್ಷಿತರ ದನದ ಕೊಟ್ಟಿಗೆಯ ಬಾಗಿಲವು ಭಸ್ಮವಾಯಿತು. ಚನಬಸಪ್ಪನ ಚಕ್ಕಡಿಯಗಾಲಿಗಳು ಚಟಪಟನೆ ಉರಿದು ಹೋದುವು.

ಹೋಳಿಯ ಹಾವಳಿ ಇಷ್ಟಕ್ಕೆ ಮುಗಿಯಲಿಲ್ಲ. ಎಷ್ಟೋ ಜನರ ತಲೆಬಾಗಿಲಿಗೆ ಕುಳ್ಳು ಎಲುಬುಗಳ ತೋರಣಗಳನ್ನು ಬಿಗಿದರು. ಕಾಮನ ಪಟ್ಟಿಯನ್ನು ಕೊಡದವರ ಮನೆಯ ಮುಂದೆ ಹೇಸಿಗೆಯ ಗಡಿಗೆಗಳನ್ನು ಒಡೆದರು. ಮನೆಗಳ ಬಾಗಿಲ ಚಿಲಕಕ್ಕೆ ಹಂದಿ, ನಾಯಿ, ಕತ್ತೆಗಳನ್ನು ಕಟ್ಟಿದರು. ನಾಯಕರ ಸೇದುವ ಬಾವಿಯಲ್ಲಿ ಕೊಬ್ಬಟ್ಟನ್ನು ಸುರುವಿದರು. ಆ ಮೇಲೆ ಹಂದರದ ಮುಂದಿನ ಬೆಂಕಿಯನ್ನು ಆರಿಸಿ, ಇದ್ದಲಿ ಬೂದಿ ಗಳನ್ನು ಚೀಲದಲ್ಲಿ ತುಂಬಿ, ಹೊತ್ತುಕೊಂಡು ಹೋಗಿ, ಬಸೆಟ್ಟೆಪ್ಪನವರ ಬಾವಿಯಲ್ಲಿ ಚೆಲ್ಲಿದರು. ಚಕ್ಕಡಿಯ ಹಳಿಗಳನ್ನು ಕೆರೆಯಲ್ಲಿ ಮುಳುಗಿಸಿದರು. ಆ ಮೇಲೆ ಹೋಳಿಕಾಯಜ್ಞದ ಸ್ಥಳವನ್ನು ಸ್ವಚ್ಛಮಾಡಿ, ಅಲ್ಲಿ ನೂರಾರು ಕುಳ್ಳುಗಳ ಬೂದಿಯನ್ನು ಮಾತ್ರ ಹಾಕಿ, ಅವಭೃತಸ್ನಾನಮಾಡಿ, ಒಡಕ ಣ್ಣನೂ ಅವನ ಸಂಗಡಿಗರೂ ಏನನ್ನೂ ಅರಿಯದವರಂತೆ ತಮ್ಮ ತಮ್ಮ ಮನೆಗಳಿಗೆ ಹೋಗಿ ಮಲಗಿಕೊಂಡರು.

ಹುಣ್ಣಿವೆಯ ಮರುದಿನ ಬೆಳಗಾಗುತ್ತಲೆ ಬೊಮ್ಮಿಗೇರಿಯಲ್ಲಿ ಭಯಂಕ ರವಾದ ಬೊಬ್ಬಾಟ. ನಾಲ್ಕಾರು ಜನಕ್ಕೆ ನಾಯಿಕಚ್ಚಿವೆ; ಹಲವರಿಗೆ ಹಂದಿ ಹರಕೊಂಡಿವೆ; ಹತ್ತೆಂಟು ಮಂದಿಗೆ ಕತ್ತೆಗಳು ಒದ್ದಿವೆ. ಎಷ್ಟೋ ಜನರು ಮನೆಯ ಬಾಗಿಲ ಮುಂದೆ ಬರದಂತಾಗಿದೆ. ಬಾವಿಗೆ ಹೋದರೆ ಬರೀ ಬೂದಿ, ಕೊಬ್ಬಟ್ಟು!

ಈ ಬೊಬ್ಬಾಟವು ಊರಲ್ಲೆಲ್ಲಾ ಬಿರುಗಾಳಿಯಂತೆ ಭರದಿಂದ ಹಬ್ಬಿತು. ಊರ ಜನರೆಲ್ಲಾ ತಮ್ಮ ತಮ್ಮ ಮನೆಗಳಿಗೆ ಬಂದ ಗಂಡಾಂತಗಳನ್ನು ಶೋಧಿಸಹತ್ತಿದರು. ಗಿರಿಧರರಾಯರು ಹಿತ್ತಲಲ್ಲಿ ಹೋಗಿ ನೋಡುತ್ತಾರೆ-ಕೊರೆಯಿಸಿಟ್ಟ ಕಟ್ಟಿಗೆಯ ಸಾಮಾನುಗಳೆಲ್ಲ ಬಯಲಾಗಿವೆ! ಅವರು ಹೊತ್ತುಕೊಂಡ ದೋತರವನ್ನು ನೆತ್ತಿಗೆ ಸುತ್ತಿಕೊಳ್ಳುತ್ತಾ, ಒತ್ತರದಿಂದ ಕಾಮನ ಹಂದರಕ್ಕೆ ಬಂದರು. ಕಣ್ಣು ಕೆಂಪಡರಿವೆ; ಮೈ ಕೂದಲು ಮುಳ್ಳೆದ್ದಿವೆ; ಬಚ್ಚಬಾಯಿ ಅವಡುಗಚ್ಚಿದೆ. ಇವರು ಹೀಗಾಗಿದ್ದರೆ ಚನಬಸಪ್ಪನು ಪ್ರತ್ಯಕ್ಷ ವೀರಭದ್ರಾವತಾರವನ್ನು ತಾಳಿದ್ದನು. ಇವರನ್ನು ಕಂಡ ಕೂಡಲೆ "ಏನು ರಾಯರ‌ಽ, ಇದ಼ಽ ಏನು ಬ್ರಾಂಬರ ಬಲವಂತಿಕೆ? ಚಕ್ಕಡೀ ಸಾರಿಗಿಮಾಡಿ ಕೊಟ್ಟಿ ಹೊರಕೊಳ್ಳೋ ಬಡವನ ಚಕ್ಕಡೀಗಾಲಿ ಸುಟ್ಟು ಬೂದಿಮಾಡೋದ? ಊರಾಗ ನೀವು ಬಲಿಷ್ಠರಂತ ಹಿಂಗಮಾಡ ತೀರೋ ಏನು?" ಎಂದು ಅವರ ಮೇಲೆ ಹರಿಹಾಯ್ದನು.

ರಾಯರು, "ನಾ ಇಂಥಾ ಅಕೃತ್ಯಕ್ಕ ಆಸ್ಪದಕೊಡಾವಲ್ಲ. ಇಂಥಾ ಹೊಲಿಗೆಲಸ ಮಾಡುವರು ಬ್ರಾಹ್ಮಣರಲ್ಲ, ನೀಚ ಪಿಶಾಚಿಗಳು. ಏನು ಹೇಳಲಿ, ನಾ ಮನಿಕಟ್ಟಿಸಲಿಕ್ಕೆ ಕೊರೆಸಿಟ್ಟ ಕಟ್ಟಿಗೆ ಸಾಮಾನೆಲ್ಲಾ-" ಎಂದು ಹೇಳುತ್ತಿರುವಷ್ಟರಲ್ಲಿ ಗವಳಿಗರ ಬಸಪ್ಪನು ಬಂದು ತನ್ನ ಬವಣೆಯನ್ನು ಬಣ್ಣಿಸಲಾರಂಭಿಸಿದನು.

ಆ ಸಮಯಕ್ಕೆ ಪ್ರತ್ಯಕ್ಷ ನರಹರಿಯ ಅವತಾರವಾಗಿ ಭೀಮಸೇನಾಚಾರ್ಯರೂ ಅಲ್ಲಿಗೆ ಬಂದರು. ಬರಿಮೈಯಿಂದ ನಿಂತ ಗಿರಿಧರರಾಯರನ್ನು ನೋಡಿ ಅವರು, "ಏನು ದೇಶಪಾಂಡೇರ! ಊರಾಗೆಲ್ಲಾ ಪಿಶಾಚಿ ಕುಣೀಲಿಕ್ಕೆ ಹತ್ತಿದವಲ್ಲ, ಪಿಶಾಚಿ! ಊರಂಬೋದು ಸುಡಗಾಡಕ್ಕಿಂತ ಕಡೀಆತಲ್ಲ! ಎಂಜಲ ಪತ್ರೋಳೆಲ್ಲಾನೂ ನಮ್ಮ ತಲಬಾಗಿಲ ಮುಂದ ತಂದೊಗದಾರ ಆ ನೀಚರು. ಅನ್ನಾ ತಿಂಬೋರೇನು ಇಂಥಾ ಕೆಲಸ ಮಾಡಲಿಕ್ಕಿಲ್ಲ. ಕಾಮನ ಹಬ್ಬಂತ, ಹಬ್ಬ! ಇದಕ್ಕ಼ಽ ಮಾಡ್ಯಾರೇನು ಹಿರೇರು ಹಬ್ಬಾನ಼ಽ ಊರಾಗ ಹೇಳೋರು ಕೇಳೋರು ಯಾರೂ ಇಲ್ಲಧಾಂಗ ಆಗೇದ. ಬಹಳ ಮಾಡಿ ನಿಮ್ಮ ಮೊಮ್ಮಕ್ಕಳೂ ಇದರಾಗ ಕೂಡಿದ್ದಾರಾದೀತು" ಎಂದು ಗರ್ಜಿಸಿದರು.

"ಇಲ್ಲ ಆಚಾರ್ರ! ನಾವು ಕಾಮನ ಹಬ್ಬದ ಪಟ್ಟೀನೂ ಕೊಟ್ಟಿಲ್ಲಾ; ಹುಡಗರನೂ ಕಳಿಸಿಲ್ಲಾ. ಅದಕ್ಕಂತ್ರ ನಮ್ಮ ಮನೀ ಹಾಳಮಾಡ್ಯಾರ. ಈಗ ನಡೆದದ್ದು ಬರೇ ಹುಡುಗರ ಕೆಲಸಲ್ರಿಪಾ! ನಾಕಮಂದ್ಯಾಗ ಮೂಗ ಮ್ಯಾಲಮಾಡಿಕೊಂಡು ತಿರುಗೋರ್ರ ಇದನ್ನ ಮಾಡಿಧಾಂಗ ಕಾಣಿಸ್ತದ. ಗೌಳೇರ ಬಸಪ್ಪನ ಭವಣೀ ಕೇಳ್ರಿಲ್ಲಾ ತಿಳೀತದ."

"ಈ ಕಾಮನ ಹಂದರದಾಗ ಬಿದ್ದಾರಲ್ಲ! ಇವರ್ನ ನಾಕೇಟು ಥಳಿಸಿದರ ಎಲ್ಲಾನೂ ಹೊರಬೀಳ್ತದ."

ಆಚಾರ್ಯರು ಆವೇಶದಿಂದ ಹೋಗಿ ಹಂದರದಲ್ಲಿ ಮುಸುಕು ಹಾಕಿಕೊಂಡು ಬಿದ್ದವರನ್ನು ಒದ್ದು ಎಬ್ಬಿಸಿಯೇಬಿಟ್ಟರು. ಅವರ ಹಿಂದಿನಿಂದ ವೀರಭದ್ರಾವತಾರಿ ಚನ್ನಬಸಪ್ಪನೂ, ಕಾಲಭೈರವ ಗಿರಿಧರರಾಯರೂ ಧುಮುಕಿದರು. ಆದರೆ ಅಲ್ಲಿ ಯಾರಿದ್ದಾರೆ? ಹಿರಣ್ಯಕಶ್ಯಪನಂಥ ದಾನವರಿಲ್ಲ; ದಕ್ಷಪ್ರಜಾಪತಿಯಂಥ ದುರಭಿಮಾನಿಯಿಲ್ಲ. ಹತ್ತು ಹನ್ನೆರಡುವರ್ಷದ ನಾಲ್ಕಾರು ಚಿಕ್ಕ ಚಿಕ್ಕ ಬಾಲಕರು ಗಾಬರಿಯಾಗಿ ಅಳುತ್ತಾನಿಂತಿವೆ. ಅಳುವ ಹುಡುಗರನ್ನು ಕಂಡು ಅವತಾರಗಳು ತಣ್ಣಗಾದುವು.

ಗಿರಿಧರರಾಯರು ಹುಡುಗರನ್ನು ಸಂತೈಸಿ, "ತಮ್ಮಗಳಿರಾ, ನಿನ್ನೆ ರಾತ್ರಿ ಕಟ್ಟಿಗೀ ಯಾರ್ಯಾರು ತಂದು ಸುಟ್ಟರು?" ಎಂದು ಬಹುವಿನಯದಿಂದ ಕೇಳಿದರು. ಅದಕ್ಕೆ ಆ ಮಕ್ಕಳು ತಮಗೇನೂ ಗೊತ್ತಿಲ್ಲವೆಂದೂ ರಾತ್ರಿ ತಿಳ್ಳಿಯಾಟವನ್ನು ನೋಡಲಿಕ್ಕೆ ಬಂದಾಗ ನಿದ್ದೆಬಂದದ್ದರಿಂದ ಅಲ್ಲಿಯೇ ಮಲಗಿದರೆಂದೂ ಗದಗದನೆ ನಡುಗುತ್ತ ನುಡಿದರು.

ಅಷ್ಟರಲ್ಲಿ ಹೋಳಿಯ ಹಾವಳಿಯಿಂದ ಸಿಟ್ಟು ತಲೆಗೇರಿದ ಕೆಲವರು ತರುಣರು ಅಲ್ಲಿಗೆ ಬಂದು, ಕಾಮನ ಹಂದರಕ್ಕೆ ಕಟ್ಟಿದ ಗುಡಾರಗಳನ್ನು ಬಿಚ್ಚಿ, ಕಂಬಗಳನ್ನು ಕೀಳತೊಡಗಿದರು. ಈ ಗದ್ದಲವನ್ನು ಕೇಳಿ ಒಡಕಣ್ಣನು ಓಡಿಬಂದು, "ಎಲಾ ಎಲಾ! ಇದೇನು ಹಗಲದರೋಡಿ ನಡಿಸಿದಿರಿ? ಯಾಕಽ, ಕಟಾಂಜನದ ಮನೀವಳಗ ಕೂಡಬೇಕಂತ ಮಾಡೀರೋ ಏನು? ಬಲು ಎಚ್ಚರಿಕಿ! ಅವೆಲ್ಲಾ ನಮ್ಮ ಮನೀಸಾಮಾನು. ಕೆಡಿಸಿದಿರೀಽ ಅಂದ್ರ ನಿಮ್ಮ ಮ್ಯಾಲ ಫೌಜದಾರೀ ಖಟ್ಲೀನಽ ಮಾಡೇನು" ಎಂದು ಗುಡುಗು ಹಾಕಿದನು.

ಗಿರಿಧರರಾಯರು "ಹೋಳೀ ಹಬ್ಬಾ ಅಂದ್ರ ಮಂದೀ ಮನೀ ಹಾಳು ಮಾಡೋದೂ ಅಂತ ತಿಳಿದೀರೇನು? ಈ ಊರಾಗ ಇವತ್ತಿಂತಂಕಾ ಇಂಥಾ ಅನರ್ಥ ನಡೆದಿದ್ದಿಲ್ಲ. ಅಪಾ, ನಾವು ಹುಡುಗ್ರಿದ್ದಾಗ ಹೀಂಗೇನು ಮಾಡ್ಲಿಲ್ಲ; ಮತ್ತ ಮುದಕರಾಗೋತಂಕ ನೋಡಿದ್ದಿಲ್ಲ. ನಿಮ್ಮ ಕಾಲಕ್ಕ, ಒಂದು ವಿಚಿತ್ರಾನs ನಡದs ದ. ನಿಮ್ಮ ಕಾಮನಹಬ್ಬದ ಹಾವಳಿ ಊರೆಲ್ಲಾ ಹಬ್ಬೇದ. ಈ ವರ್ಷ ಮಂದೀಮನಿ ಸಾಮಾನು ಸುಟ್ಟಿರಿ ಮುಂದಿನ ವರ್ಷ ಊರಿಗೇನs ಬೆಂಕೀ ಹಚ್ಚತೀರಿ. ಎಂಥವರ ಮನೆತನದಾಗ ಎಂಥವರು ಹುಟ್ಟಿದ್ರೂ ಅಂದೆ! ಮಾಡೋದೇನಿನ್ನ! "ಏನಕೇನ ಪ್ರಕಾರೇಣ ಪ್ರಸಿದ್ಧ ಪುರುಷೋ ಭವ" ಅಂತ ನಡಿಸ್ಯಾರ s ತೀರಿತು" ಎಂದು ಮರ್ಮಭೇದಕ ವಾಗಿ ಮಾತಾಡಿದರು.

ಅದಕ್ಕೆ ಒಡಕಣ್ಣನು, "ರಾಯರ! ಸಿಟ್ಟಿನ ಭರದಾಗ ಸಿಕ್ಕಹಾಂಗ ಮಾತಾಡಬ್ಯಾಡ್ರಿ. ಸ್ವಲ್ಪ ವಿಚಾರ ಮಾಡ್ರಿ. ಇಲ್ಲಿ ಬರೇ ಹುಡುಗರು ಕೂಡಿಕೊಂಡು ಹುಲ್ಲ ಕಾಮನ್ನ ಇಟ್ಟಿರು. ಇದಕ್ಕ ಯಾವ ಹಿರೇರೂ ಕೂಡಿಲ್ಲಾ; ಪಟ್ಟೀ ಕೊಟ್ಟಿಲ್ಲಾ. ನಿಮ್ಮ ಮನಸಿಗೆ ಬರ್ಲಿಲ್ಲಾಂತ ತಿಳಿದು ನನ್ನ ಪಟ್ಟೀನೂ ನಾ ಇಸಗೊಂಡೇನಿ. ಮತ್ತ ನಮ್ಮನೀ ವಳಗಿನ ಗುಡಾರಾ ಗಳಾ, ಕೊಡೂ ಅಂತ ಹುಡುಗರು ಗಂಟs ಬಿದ್ರು. ಅಷ್ಟು ಮಾತ್ರ ನಾ ಕೊಟ್ಟೇನಿ. ಅಲ್ರೆಪಾ, ನೀವs ನೋಡ್ರಿ! ತೊಲೀ, ಕಂಬ, ಗಾಲಿ ತಂದು ಸುಡೋದು. ಸಣ್ಣ ಹುಡುಗರಿಗೆ ಸಾಧ್ಯ ಅದsನ? ಅಲ್ಲಿ ಸುಟ್ಟ ಜಾಗಾ ನಾರ ನೋಡ್ರಿ. ಅಲ್ಲೇನು ಹೆಚ್ಚು ಬೂದಿ ಇಲ್ಲಾ, ಇದ್ದಲಿಯಿಲ್ಲಾ. ಯಾವ ಕುಂಬ...ೂ.... ಮಕ್ಕಳು ರಾತ್ರಿ ಹೋಳೀ ಹಾಕ್ಯಾರೋ! ಅದೆಲ್ಲಾನೂ ಈ ಹುಡುಗರ ಮ್ಯಾಲೆ ತಂದ ಹಾಕ್ತೀರಿ. ನನಗಾರs ಈ ಅಪವಾದ ಹೊ ರೋದು ಯಾತಕ್ಕ ಬೇಕು? ಈ ಕಾಮನ್ನ ಇವತ್ತs ಸುಡಿಸಿಬಿಡುತ್ತೇನಿ. ಈ ಊರಾಗ ಇಟ್ಟಿದ್ದು ಇದೊಂದs ಕಾಮ ಅಲ್ಲ ಎಲ್ಲಾ ಕಾಮನ ಹಂದ್ರದ ಮುಂದೂ ಹೋಗಿ ನೋಡ್ರಿ. ಯಾರು ಅನಾಚಾರಾ ಮಾಡ್ಯಾರ ಅವರ ಮ್ಯಾಲೆ ಫೌಜದಾರಿ ಖಟ್ಲೀ ಮಾಡ್ರಿ. ಸುಮ್ಮನs ನಮ್ಮ ಮ್ಯಾಲ್ಯಾಕ ಹರಿ ಹಾಯ್ತೀರಿ?" ಎಂದು ಗಂಭೀರವಾಗಿ ನುಡಿದನು.

ಗಿರಿಧರರಾಯರಿಗಾಗಲಿ, ಚನಬಸಪ್ಪನಿಗಾಗಲಿ ತಮ್ಮ ಸಾಮಾನು ಸುಟ್ಟ ಚಿಹ್ನಗಳಾವೂ ಅಲ್ಲಿ ದೊರೆಯದ್ದರಿಂದ ನಿರುಪಾಯರಾಗಿ ಅವರು ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು.

ಬೊಮ್ಮಗೇರಿಯಲ್ಲೆಲ್ಲ ಈ ಹಾವಳಿಯ ಮಾತೇ ಮಾತು. ಬಣಜಿಗರು, ಗೌಳಿಗರು, ಕುರುಬರು ಒಬ್ಬರ ಮೇಲೊಬ್ಬರು ತಪ್ಪು ಹೊರಿಸಿ, ಜಾತಿನಿಂದೆಗೆ ಆರಂಭಿಸಿದರು. ಜಾತಿಮತ್ಸರದ ಕಿಡಿ ಚೆನ್ನಾಗಿ ಹೊತ್ತಿಕೊಂಡಿತು. ಬ್ರಾಹ್ಮಣರನ್ನು ಭೇದನೀತಿಯಿಂದಲೇ ಬೊಗ್ಗಿ ಬಡಿಯಬೇಕೆಂಬ ಒಡಕಣ್ಣನ ಮನೋಭಿಲಾಷೆಯು ಮರವಾಗಿ ಬೆಳೆಯತೊಡಗಿತು.

ಒಡಕಣ್ಣನಿಗೆ ಒಳಗೆ ಆನಂದವಾದರೂ, ಹೊರಗೆಮಾತ್ರ ಹುಡುಗರ ಮೇಲೆ ಹರಿಹಾಯ್ದು, ತಾನು ಕಾಮನ ಹಂದರಕ್ಕೆ ಕೊಟ್ಟ ಕಂಬ, ಗಳ, ಗುಡಾರಗಳನ್ನು ಹುಡುಗರ ಮೇಲೆ ಹೊರಿಸಿ ತನ್ನ ಮನೆಗೆ ಕಳಿಸಿದನು. ಮತ್ತು ಕಾಮನನ್ನು ಅಂದೇ ಸುಟ್ಟುಬಿಡಿರೆಂದೂ ಅವರಿಗೆ ಆಜ್ಞಾಪಿಸಿದನು.

ಹುಡುಗರೆಲ್ಲರೂ ಕೂಡಿ ಒಂದು ಹಂಡೆಯತುಂಬ ಓಕಳಿಮಾಡಿ, ಜೀಕಳಿತುಂಬಿ ಓಣಿಯಲ್ಲಿ ಹಾದಾಡುವ ಜನಕ್ಕೆಲ್ಲಾ ಉಗ್ಗತೊಡಗಿದರು. ಗೌರಿಯು ಮೈನೆರೆದುದರಿಂದ ಒಡಕಣ್ಣನು ಮೊದಲೆ ಓಕಳಿಯಿಂದ ವಿಭೂಷಿತನಾಗಿದ್ದನು. ಓಕಳಿಯ ಭಯವೇ ಅವನಿಗಿಲ್ಲವಾದ್ದರಿಂದ ಅವನು ಮನೆಯ ಮುಂದೆಯೇ ಕುಳಿತು, ಹಾಕಿದಷ್ಟು ಓಕಳಿಯನ್ನು ಹಾಕಿಸಿಕೊಂಡನು. ಅದರಿಂದ ಕ್ರೀಡೋನ್ಮತ್ತರಾದ ಹುಡುಗರು ಮನೆಮನೆಗೆ ಹೊಕ್ಕು ಓಕಳಿ ಉಗ್ಗಿ, ಬಡಿತಗಳನ್ನು ತಿಂದರು. ಓಣಿಯಲ್ಲಿ ತಿರುಗುವ ಬಣಜಿಗರಿಗೂ, ಮಹಮ್ಮದೀಯರಿಗೂ ಓಕಳಿಯನ್ನು ಚೆಲ್ಲಿದ್ದಕ್ಕಾಗಿ ಬ್ರಾಹ್ಮಣರ ಬಾಲಕರು ಬಡಿಗೆಯ ಪೆಟ್ಟುಗಳನ್ನು ಅನುಭವಿಸಿದರು. ಹೀಗೆ ಓಕಳಿಯ ಮಹಿಮೆಯಿಂದ ಮತ್ತರಾದ ಹುಡುಗರು ನಿಜವಾಗಿಯೂ ಬೊಬ್ಬೆ ಹೊಡೆಯುತ್ತಾ ಕಾಮನನ್ನು ಸುಟ್ಟರು.

ಕಾಮನ ಹಬ್ಬದ ಕೋಲಾಹಲವು ಕಾಮನೊಡನೆ ಈ ಬೊಮ್ಮಗೇರಿಯ ಶಾಂತತೆಯನ್ನು ಸಟ್ಟುಹಾಕಿ, ಜಾತಿಜಾತಿಗಳ ಬೊಬ್ಬೆಯೆಬ್ಬಿಸಿ ಹೊರಟು ಹೋಯಿತು.

# ೨. ಗೃಹಸ್ಥ

ಇಂದು ಗೌರಿಯು ಮೈನೆರೆದು ಮೂರನೆಯ ದಿವಸ ಕಾಮದಹನದಿಂದ ಹೋಳಿಯ ಹಾವಳಿಯೂ ಅಡಗಿದೆ. ಹೆಂಗಳೆಯರು "ಹಸಿಗೋಸಿಗೆ"ಯ ಸಾಮುಗ್ರಿಗಳೊಂದಿಗೆ ಜೋಯಿಸರ ಮನೆಗೆ ಬರುತ್ತಿದ್ದಾರೆ. ರುಕ್ಮಿಣೀಬಾಯಿಯವರು ಬಂದ ಬಂದ ಮುತ್ತೈದೆಯರನ್ನೆಲ್ಲ ಸತ್ಕರಿಸಿ, ಅವರ ಗೋಸಿಗೆಗಳನ್ನು ಸ್ವೀಕರಿಸಿ ಆನಂದದಿಂದ ಮಗಳಿಗೆ ಆರತಿ ಮಾಡುತ್ತಿದ್ದಾರೆ. ಅಷ್ಟರಲ್ಲಿ ತಮ್ಮ ಮನೆಯ ಕೆಲಸಗಿತ್ತಿಯ ಮೇಲೆ ಮಿಂದೂಟದ ಸಾಮುಗ್ರಿಗಳನ್ನು ಹೊರಿಸಿಕೊಂಡು, ಒಡಕಣ್ಣನ ಅತ್ತಿಗೆಯನ್ನೂ ಕೆಲವು ತರುಣಿಯರನ್ನೂ ಮುಂದೆಮಾಡಿಕೊಂಡು, ವಾದ್ಯ ವೈಭವದೊಂದಿಗೆ ಚಂದ್ರಾವತಿಬಾಯಿಯವರು ಜೋಯಿಸರ ಮನೆಗೆ ಬಂದರು.

ರುಕ್ಮಿಣೀಬಾಯಿಯವರು ಬಂದ ಬೀಗರನ್ನು ಮುಂದೆಕರೆದು ಅವರನ್ನು ಹಾಸಿದ ಜಮಖಾನೆಯ ಮೇಲೆ ಕುಳ್ಳಿರಿಸಿದರು. ಮನೋಹರವಾದ ಮಂಟಪದ ಮಧ್ಯದಲ್ಲಿ ಸಣ್ಣ ಮಂಚದ ಮೇಲೆ ಸಮಸ್ತ ವಸ್ತ್ರಾಭರಣಗಳಿಂದ ಭೂಷಿತಳಾಗಿ ಪ್ರತ್ಯಕ್ಷರತಿಯಂತೆ ಕುಳಿತ ಗೌರಿಗೆ ಆರುತಿಯನ್ನು ಮಾಡಿ ಆನಂದಪಟ್ಟ ಹೆಂಗಳೆಯರು ಚಂದ್ರಾವತಿಬಾಯಿಯವರೆದುರಿಗೆ ಅವಳ ರೂಪಲಾವಣ್ಯಗಳನ್ನು ಹೊಗಳ ತೊಡಗಿದರು. ಅದಕ್ಕೆ ಇವರೇನ್ನ ಬೇಕು? "ಹುಡುಕ ಬಂದ್ರ ಹಂದಿ ಸಹಿತ ಚಂದಕಾಣತಾವ. ಮಣ್ಣ ಮುದ್ದಿಗೆ ವಸ್ತ್ರಾವಡವೀ ಇಟ್ರೆ ಅವೂ ಎದ್ದ ಕಾಣಸ್ತಾವ. ಈಕಿ ಏನು? ಏನೋ ಸರಾಸರಿ ಇದ್ವಾಳ ತೀರಿತು" ಎಂದು ಕವಡುಗಂಟಿಕ ನುಡಿಗಳನ್ನಾಡಿ, ಮೇಲೆ ಝಗ ಝಗ ಒಳಗೆ ಭಗ ಭಗ ವಿರುವ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಅದಕ್ಕೆ ಆ ಹೆಂಗಸರು "ತಮ್ಮ ಮಕ್ಕಳನ್ನ, ಸೊಸೆಂಧಿರನ್ನ, ತಾವ ಯಾರು ಹೊಗಳತಾರೆವ್ವಾ ನೀವು ಹಾಂಗ ಅಬೋದ ಸೈ" ಎಂದು, ಅವರ ದೊಡ್ಡಿಸ್ತನವನ್ನು ಹೊಗಳಿದರು.

ಅಂದು ರಾತ್ರಿ ಒಡಕಣ್ಣನು ಜೋಯಿಸರನ್ನು ತಮ್ಮ ಮನೆಗೆ ಕರೆಯಿಸಿಕೊಂಡನು, ಮೈನೆರೆದ ಹದಿನಾರನೇದಿನ ಪ್ರಶಸ್ತ ಮುಹೂರ್ತವೆಂದೂ ಅಂದು ಫಲಶೋಭನವನ್ನು ಮಾಡಬೇಕೆಂದೂ ಜೋಯಿಸರು ಹೇಳಿ

ಒಡಕಣ್ಣಿನನ್ನು ಒಪ್ಪಿಸಿದರು. ಜೋಯಿಸರು ಒಳಗೆ ತಮ್ಮ ತಂಗಿಯ ಬಳಿಗೆ ಹೋಗಿ ಫಲಶೋಭನದ ಮುಹೂರ್ತ ನಿರ್ಧರಿಸಿದ್ದನ್ನು ತಿಳಿಸಿದರು. ಚಂದ್ರಾವತಿ ಬಾಯಿಯವರು ಒಮ್ಮೆಲೇ ತಮ್ಮ ವಾಕ್ಪ್ರವಾಹವನ್ನು ಹರಿಬಿಟ್ಟರು.

" ನೀನು ಲಗ್ನದಾಗ ನಮ್ಮ ಮರ್ಯಾದೀ ತಕ್ಕ ಹಾಂಗ ಪರೋಪಚಾರ ಕೊಡಲಿಲ್ಲ. ಮುಂದ ಆಳೀತನ ಬೀಗತನ ಯಾವುದೂ ಮಾಡಲಿಲ್ಲ. ನಮ್ಮವರು ನಮ್ಮವರು ಅಂದಕೋತs ಎಲ್ಲಾನೂ ದುಂಡು ಸುರಳೀ ಸುತ್ತಿ ಒಗದು ಬಿಟ್ಟಿ. ಇದರ ದಶಿಂದ ನಿನ್ನ ಆಳಿಯಾ ನಿನ್ನ ಮ್ಯಾಲ ಸಿಟ್ಟ ಬೆಂಕಿ ಆಗ್ಯಾನ. ನಾವೆಷ್ಟು ಸಮಾಧಾನಾ ಹೇಳಿದ್ರೂ ಅವನ ಸಿಟ್ಟು ಇಳೀವಲ್ಲದು. ಆದಕ್ಕs ಈ ಶೋಭನ ಪ್ರಸ್ತದಾಗಾದ್ರೂ ಆದಷ್ಟು ನೆಟ್ಟಗ ಮುಟ್ಟಸು. ಈಗಿನ ಹುಡುಗರು ಬಹಳ ಎಟ್ಟಿ; ಅವರು ಯಾರ ಮಾತೂ ಕೇಳೋದಿಲ್ಲ. ನಮ್ಮ ಅಣ್ಣಾ ಅಂತ ನಿನಗೊಂದ ಗುಟ್ಟಿನ ಮಾತ ಹೇಳತೇನಿ, ಕೇಳು. ಈಗ ಒಂದು ಸಾವಿರ ರೂಪಾಯಿ ಸಾಮಾನಾ ನೀ ತಂದರ ನಿನ್ನ ಮಗಳ ಬಾಳ್ವಿ ಸುಸೂತ್ರ ನಡೀತದ. ಇಲ್ಲದ್ದs ಇದ್ದರ ನನ್ನ ಕಡೀ ಮಾತಿಲ್ಲಾ."

" ತಂಗೀ ನೀನs ಹೀಂಗ ಅಂದಮ್ಯಾಲ ನಾ ಏನ ಮಾಡಬೇಕು. ಲಗ್ನದ ಕಾಲಕ್ಕ ನಾ ಏನೂ ವಂಚನೀ ಮಾಡಿಲ್ಲ ಸಾವಿರ ರೂಪಾಯಿ ವರದಕ್ಷಿಣೀ ಗೊತ್ತುಮಾಡಿದ್ದು ಎರಡು ಸಾವಿರಕ್ಕ ಹತ್ತಿತು. ನಾ ಬಡವಾ ಮ್ಯಾಲೆ ನಾಕ ಮಂದಿ ಹೆಣ್ಣಮಕ್ಕಳಿದ್ದಾರ ಹೀಂಗಿದ್ರೂ ನಾ ಲಗ್ನದಕಾಲಕ; ಏನೂ ಜೀನತನಾ ಮಾಡಿಲ್ಲ— ಈಗಾದ್ರೂ ಮಾಡೋದಿಲ್ಲ. ನನ್ನ ಯೋಗ್ಯತಾ ಇದ್ದಷ್ಟು ಕೊಡತೇನಿ. ದೇವರು ನಿಮಗೂ ಏನೂ ಕಡಿಮಿ ಮಾಡಿಲ್ಲಾ. ಹಳೇ ಸಂಬಂಧದಾಗ ಮನಸ್ತಾಪಾ ಮಾಡಕೊಳ್ಳೋ ಬ್ಯಾಡ್ರಿ"

ಅಣ್ಣನ ದೈನ್ಯೋಕ್ತಿಗೆ ಚಂದ್ರಾವತಿಬಾಯಿವರು ಉತ್ತರ ಕೊಡಲೆ ಬಂದಿತು.

" ಹೆಣ್ಣ ಹಡದು ಹೀಂಗ ನೆರಳಿದರ ಯಾರು ಕೇಳತಾರಪಾ ? ಹೆಣ್ಣು ಕೊಟ್ಟ್ಯೋ, ಬೆನ್ನುಕೊಟ್ಟ್ಯೋ ಅಂತಾರ. ಇದ್ದ ಹೊಲಾ ಮನೀ ಒತ್ತೀ

ಹಾಕಬೇಕು, ಅಳಿಯನ್ನ ಸಮಾಧಾನಾ ಮಾಡಬೇಕು. ನೀ ನಮ್ಮ ಅಣ್ಣಾ ಅಂತ ಒಳಗಿನ ಮಾತು ತಿಳಿಸಿದೆ. ನನಗಾರಿ ಈ ಒಣಾ ಉಸಾಬ್ಯ ಯಾತಕ್ಕ ಬೇಕು? ನೀ ಭಲಾ, ನಿನ್ನ ಅಳಿಯಾ ಭಲಾ. ಬೇಕಾದ್ದು ಮಾಡಿಕೊಳ್ರಿ. ನಾ ನಡುವ ಬರೋಕೆಲ್ಲ."

"ತಂಗೀ, ನೀ ಹಾಂಗ ಮಾತಾಡಿದರ ನಾ ಕೇಳೋದಿಲ್ಲ. ಕುಡಗೋಲು ಕುಂಬಳಕಾಯಿ ನಿನ್ನ ಕೈಯಾಗ ಕೊಟ್ಟೇನಿ. ಅಡ್ಡಾರ ಹೆಚ್ಚು, ಉದ್ದಾರ ಹೆಚ್ಚು" ಲಕ್ಷ್ಮಣ ಜೋಯಿಸರು ಅಲ್ಲಿಂದ ಹೊರಟು ಹೋದರು.

ಫಾಲ್ಗುಣ ವದ್ಯ ಚತುರ್ದಶಿಯ ದಿನ ಒಡಕಣ್ಣಾನ ಮನೆಯಲ್ಲಿ ಸಂಭ್ರಮವೇ ಸಂಭ್ರಮ. ಫಲಶೋಭನಪ್ರಸ್ತವೆಂದರೆ ಸಾಮಾನ್ಯವೇನು? ಉಂಡಿಯ ಊಟಕ್ಕೆ ಊರೊಳಗಿನ ಬ್ರಾಹ್ಮಣ ಸುವಾಸಿನಿಯರಿಗೆಲ್ಲ ಆಮಂತ್ರಣ. ಮನೆಯ ಮುಂದೆ ಹಂದರ ಹಾಕಿದೆ; ತಳಿರು ತೋರಣಗಳಿಂದ ಸಿಂಗರಿಸಿದ್ದಾರೆ. ಒಡಕಣ್ಣಾನ ಪುರೋಹಿತರು " ವಧೂ ವಧೂ " ಎಂದು ಗಡಿಬಿಡಿ ಮಾಡುತ್ತಿದ್ದಾರೆ.

ಕೂಡಿದ ಹೆಂಗಳೆಯರೆಲ್ಲ ವಾದ್ಯಘೋಷದ ವೈಭವದೊಡನೆ ಜೋಯಿಸರ ಮನೆಗೆ ಹೋಗಿ, ಗೌರಿಯನ್ನು ಉತ್ಸವದಿಂದ ಕರೆತಂದರು. ಗೌರಿಯೊಂದಿಗೆ ಒಡಕಣ್ಣಾನಿಗೆ ಮಂಗಲ ಸ್ನಾನವಾಯಿತು. ಅವರಿಬ್ಬರನ್ನೂ ಮಣೆಯ ಮೇಲೆ ಕೂರಿಸಿ ಪುರೋಹಿತರು ವೈದಿಕರೊಂದಿಗೆ ಪುಣ್ಯಾಹವಾಚನವನ್ನು ಪೂರ್ಣಮಾಡಿ ಭುವನೇಶ್ವರೀ ಶಾಂತಿಯನ್ನೂ ಇತರ ವಿಧಾನಗಳನ್ನೂ ಮಾಡಿಸಿದರು. ಆ ಮೇಲೆ ನಡೆಯಿತು ಉಡುಗೊರೆಯ ಸಮಾರಂಭ.

ಲಕ್ಷ್ಮಣ ಜೋಯಿಸರು ಸಪತ್ನೀಕರಾಗಿ ಬಂದು. ಅಳಿಯನನ್ನು ಆಶೀರ್ವದಿಸಿ, ಮಗಳಿಗೆ ಜರದ ಸೀರೆ ಕುಪ್ಪಸಗಳನ್ನೂ ಅಳಿಯನಿಗೆ ಜರದಂಚಿನ ದೋತರ ರುಮಾಲಗಳನ್ನು ಉಡುಗೊರೆಯಾಗಿ ಕೊಟ್ಟರು. ಒಡಕಣ್ಣಾನು ಉರಿಮೊಗಮಾಡಿ, ಅವುಗಳನ್ನು ಸ್ವೀಕರಿಸಲಿಲ್ಲ; ಹೇಳಲಿಕ್ಕೆ ಬಂದ ಹಿರಿಯರ ಮೇಲೆಯೆ ಹರಿಹಾಯ್ದನು. ಅಷ್ಟರಲ್ಲಿ ಮುತ್ತೈದೆಯರು ಮಂಗಲಾರತಿಯನ್ನು ಮಾಡಲು, ಅವನು ಎದ್ದು ದೇವರಮನೆಯ ಕಡೆಗೆ ಹೊರಟು ಹೋದನು.

ಕೂಡಿದ ವೈದಿಕರು ಸುಮ್ಮನಿದ್ದಾರೆಯೆ? ಒಬ್ಬರೆಂದರು "ಏನು ಶಾಸ್ತ್ರಿಗಳೇ ನೀವು ಬರೀ ಭುವನೇಶ್ವರಿ ಶಾಂತಿ ಮಾಡಿಸಿದಿರಿ, ಗ್ರಹಶಾಂತಿ ಆಗಲೇ ಇಲ್ಲ?" ಒಡಕಣ್ಣನ ಪುರೋಹಿತರು "ಪ್ರಯೋಗಕಾರರು ಭುವನೇಶ್ವರೀ ಶಾಂತೀ ಒಳಗ ನವಗ್ರಹ ಶಾಂತೀ ಹೇಳಿಲ್ಲರೀ" ಎಂದು ತಟ್ಟನೆ ಮಾರ್ನುಡಿದರು. ಮತ್ತೊಬ್ಬ ಮಾರ್ಮಿಕರು, "ಅವರು ಕೇಳಿದ್ದು ನವಗ್ರಹ ಶಾಂತಿ ಅಲ್ಲ. ದಶಮಗ್ರಹದ ಶಾಂತಿ ಇದಕ್ಕ ಶಾಂತೀನೇ ಇಲ್ಲ. ಆದಿತ್ಯಾದಿ ಗ್ರಹಾಃ ಸರ್ವೇಥಾ ತುಷ್ಯಂತಿ ದಾನತಃ | ಸರ್ವಸ್ವೇಪಿ ನತುಷ್ಟೇತ ಜಾಮಾತಾ ದಶಮೋಗ್ರಹಃ ||" ಎಂದು ಸಂಸ್ಕೃತ ಶ್ಲೋಕವನ್ನು ಹೇಳಿ ತಮ್ಮ ಪಾಂಡಿತ್ಯವನ್ನು ಪ್ರಕಟಿಸಿದರು. ಇದೆಲ್ಲಾ ತಮಗೆ ಯಾಕೆ ಬೇಕು? ತಾಂಬೂಲ ದಕ್ಷಿಣೆಗಳು ದೊರೆತದ್ದರಿಂದ ಎಲ್ಲರೂ ತಮ್ಮ ತಮ್ಮ ಮನೆಯ ಹಾದೀಹಿಡಿದರು

ಗೌರಿಯು ದೇವರಿಗೂ ಬ್ರಾಹ್ಮಣರಿಗೂ ನಮಸ್ಕರಿಸಿ, ಒಳಗೆ ಬಂದು ತನ್ನ ಅತ್ತೆಯವರಿಗೂ, ತಾಯಿಗೂ ವಂದಿಸಿದಳು. ಚಂದ್ರಾವತೀ ಬಾಯಿಯವರು ರುಕ್ಮಿಣೀ ಬಾಯಿಯವರನ್ನು ವಕ್ರದೃಷ್ಟಿಯಿಂದ ನೋಡಿ, "ನಿಮಗೇನು ಮಾನ ಇಲ್ಲ, ಮರ್ಯಾದಿ ಇಲ್ಲ. ನಾಲ್ಕಮಂದೀ ಒಳಗ ನಮ್ಮ ಮರ್ಯಾದೀ ಕಳದಿರಿ. ನಮ್ಮ ಒಡಕಣ್ಣ ನಿಮ್ಮ ಉಡುಗೋರೀ ತಿರುಗಿ ಬಿಟ್ಟರೂ ನಿಮಗೆ ನಾಚಿಕೆ ಬರಲಿಲ್ಲ. ದುಡ್ಡಿಗೇ ಪ್ರಾಣಕ್ಕೊಟ ಗಂಟ್ರು. ಪಂಚಾಂಗ ಹೇಳಿ ದುಡ್ಡು ಕೇಳವ್ರಿಗೆ ವತನದಾರರ ಮಾನಮರ್ಯಾದೀ ಹ್ಯಾಂಗ ತಿಳದಾವು? ನಿಮ್ಮ ಹಾಸಿಗಿದ್ದಷ್ಟು ಕಾಲು ಚಾಚಬೇಕು. ನಿಮ್ಮಂಥವರು ವತನದಾರರ ಸಂಬಂಧಾನಃ ಮಾಡಬಾರದಾಗಿತ್ತು. ನಾಳೆ ಮಗಳು ಮನೀ ಹಿಡಿದು ಕೂತಾಳು ಅಂಬೋ ಎಚ್ಚರ ಸಹಿತ ನಿಮಗಿಲ್ಲ." ಎಂದು ಒಳ್ಳೆಯ ದರ್ಪದಿಂದ ಕರ್ಕಶವಾಗಿ ನುಡಿದರು.

ರುಕ್ಮಿಣೀಬಾಯಿಯವರು "ನನ್ನಮ್ಯಾಲ ಯಾಕ 'ಹರಿಹಾಯ್ತೀರೀ? ಅವರೇನು ನಿಮಗೆ ಹೊರಗಿನವರಲ್ಲ. ಮಗಳ ದಸಿಂದ ಹೊಲಾಮನೀ ಮಾರಿ ಬಿಡವಲ್ಲರು. ನಾ ಏನು ಬ್ಯಾಡಾ ಅಂತೇನೆ? ದೊಡ್ಡವರ ಸಂಬಂಧಾ ಮಾಡಿದಮ್ಯಾಲ ಬಂದದ್ದೆಲ್ಲಾ ಅನುಭೋಗಿಸಃಬೇಕು. ಒಲ್ಲೇ ಅಂದ್ರ ಕೇಳ್ತದಃ?" ಎಂದು ಸಣ್ಣದನಿಯಿಂದ ನುಡಿದು, ಕಣ್ಣೀರು ಸುರಿಸುತ್ತ ತಮ್ಮ ಮನೆಗೆ ತೆರಳಿದರು.

ಅವರು ಅತ್ತರೇನು ? ಊರೊಳಗಿನ ಬ್ರಹ್ಮವೃಂದವೆಲ್ಲ ಒಡಕಣ್ಣನ ಮನೆಗೆ ಭೋಜನಕ್ಕೆ ಬರಹತ್ತಿತು. ಒಡಕಣ್ಣನ ಪುರೋಹಿತರು ಸುವಾಸನಿಯರೊಂದಿಗೆ ಬಿಗರೆನ್ನು ಭೋಜನಕ್ಕೆ ಕರೆಯಲು, ಜೋಯಿಸರ ಮನೆಗೆ ಬಂದರು. ಲಕ್ಷ್ಮಣ ಜೋಯಿಸರು "ದೌಹಿತ್ರ ಸಂತಾನವಾಗುವ ವರೆಗೆ ನಾವಿಬ್ಬರೂ-ಅಳಿಯನ ಮನೆಯಲ್ಲಿ ಊಟಮಾಡುವದಿಲ್ಲ"ವೆಂದು ನೆವಹೇಳಿ, ತಮ ಆಪ್ತೇಷ್ಟರನ್ನು ಮಾತ್ರ ಊಟಕ್ಕೆ ಕಳುಹಿಕೊಟ್ಟರು. ಊಟದ ಸಮಾರಂಭವು ವೈಭವದಿಂದ ನಡೆಯಿತು. ಬಂದವರೆಲ್ಲ ಬುಂದೆಯ ಉಂಡೆಯನ್ನು ಯಥೇಷ್ಟವಾಗಿ ತಿಂದು, ತಾಂಬೂಲ-ದಕ್ಷಿಣೆಗಳನ್ನು ತೆಗೆದುಕೊಂಡು, ಹೊಟ್ಟೆಯ ಮೇಲೆ ಕೈಯಾಡಿಸುತ್ತಾ ಹೊರಟುಹೋದರು. ಲಕ್ಷ್ಮಣ ಜೋಯಿಸರು, ರುಕ್ಮಿಣೀಬಾಯಿಯವರೂ ನಿರಾಹಾರಿಗಳಾಗಿ, ಚಿಂತಾಗ್ನಿಗೆ ತಮ್ಮ ರುಧಿರವನ್ನು ಆಹುತಿ ಕೊಟ್ಟರು.

ಅಂದು ಸಾಯಂಕಾಲಕ್ಕೆ ಹೆಣ್ಣುಮಕ್ಕಳು ಹಿಂಡುಗಟ್ಟಿಕೊಂಡು, ಜೋಯಿಸರ ಮನೆಗೆ ಬರಹತ್ತಿದರು. ರುಕ್ಮಿಣೀಬಾಯಿಯವರು, ತಮ್ಮ ಮನೋವೇದನೆಗಳನ್ನೆಲ್ಲ ಒಳಗೆ ಹತ್ತಿಕೊಂಡು, ತಾವು ಅಳಿಯನಿಗೆ ಕೊಡುವುದಕ್ಕಾಗಿ ತರಿಸಿದ ಒಡವೆಗಳನ್ನೆಲ್ಲ ಬಂದಬಂದವರಿಗೆ ತೋರಿಸಹತ್ತಿದರು. ಅವುಗಳನ್ನು ನೋಡಿದ ಹೆಂಗಳೆಯರು, " ಈ ಪಲ್ಲಂಗ ಬಹಳ ಮಾಟ ಅದ. ಕುತನೀ ಗಾದಿ ಏನಥೆಂದ ಅದನ್ರೆ! ಈ ಶಕಲಾತಿಗೆ ಮೂವತ್ತರ ಮ್ಯಾಲೆ ಬಿದ್ದಿರಬಹುದು. ಯಾಕ್ರೆವ್ವಾ ? ಬೆಳ್ಳೀ ಡಬ್ಬಿ, ತಾಟು, ಕುಂಕುಮದ ಕರಡಿಗಿ- ಎಲ್ಲಾ ಕೂಡಿ ಮುನ್ನೂರು ರೂಪಾಯಿ ಮ್ಯಾಲೆ ಮುಟ್ಟದ್ದೀತು. ಎಲ್ಲಾ ಬಹಳ ಚಲೋ ಅವ " ಎಂದು ಹೊಗಳಹತ್ತಿದರು. ಅದಕ್ಕೆ ರುಕ್ಮಿಣೀಬಾಯಿಯವರು, " ನಾವೇನು ದೇಸಾಯ್ರಲ್ಲ, ದೇಶಪಾಂಡೇರಲ್ಲ. ಬಡ ವೈದಿಕ ಭ್ರಾಂಬರು. ದೊಡ್ಡ ವತನದಾರರ ಸಂಬಂಧಾ ಮಾಡಿಕೊತೇವಿ. ಇವೆಲ್ಲಾ ಸಾಮಾನಕ್ಕ ಕೂಡಿ ಐನೂರು ರೂಪಾಯಿ ಮ್ಯಾಲ ಹಿಡಿದದ. ನಾವು ನಮ್ಮ ಯೋಗ್ಯತಾ ಮೀರಿ ಮುಟ್ಟಿಸಿಕೊಡತೀವಿ ಅದ್ರೇನೆವ್ವಾ ? ದೇಸಾಯ್ರಿಗೆ ಇವೆಲ್ಲಾನೂ ಕಾಲಕಸಾ ಆಗಿ ಹೋಗತಾವ. ಪುಣೇಚಟನದ ಕಾಲಕ್ಕೂ ನೀವ್ಯಾ ನೋಡಲಿಲ್ಲ? ಐವತ್ತು ರೂಪಾಯಿ ವಸ್ತ್ರಾ ಕೊಟ್ರೂ

ಬಿಸಾಡಿ ಒಗದು ಬಿಟ್ರು. ಬೇಕಾದವರು ಬೇಕಾದ್ದು ಅನ್ನಲಿ ನಾವು ಕೊಡೋ ಅಷ್ಟು ಕೊಡುತೇವಿ ” ಎಂದು ಉಸುರ್ಗರೆದರು.

ಅಷ್ಟರಲ್ಲಿ ಮೂರು ತಾಸು ರಾತ್ರಿಯಾದ್ದರಿಂದ ಅವರು ಅಳಿಯನಿಗೆ ಕೊಡತಕ್ಕ ಸಾಮಾನುಗಳನ್ನೆಲ್ಲ ಆಳಿನಮೇಲೆ ಹೊರಿಸಿಕೊಂಡು, ತಮ್ಮ ಪರಿವಾರದೊಂದಿಗೆ ಒಡಕಣ್ಣನಮನೆಗೆ ವಾದ್ಯಘೋಷದೊಡನೆ ಹೋದರು. ಅಲ್ಲಿ ಉರುಟಣಿಗೆಂದು ವನಿತೆಯರನೇಕರು ಕೂಡಿದ್ದರು. ಒಡಕಣ್ಣನ ಪಡಸಾಲೆಯ ಕೋಣೆಯನ್ನು ಅಲಂಕರಿಸಿ, ಮಾಡತಕ್ಕ ಸಿದ್ಧತೆಯನ್ನೆಲ್ಲಾ ಮಾಡಿ ಮುಗಿಸಿ, ಉರುಟಣೆಗಾಗಿ ಒಡಕಣ್ಣನನ್ನು ಕರೆಯಕಳುಹಿದರು. ಒಡಕಣ್ಣನು ಬಂಗಾರದ ಕಂಠಿಯಸರವನ್ನು ತಂದು ತನ್ನ ಕೊರಳಲ್ಲಿ ಹಾಕಿದಮೇಲೆಯೆ ತಾನು ಉರುಟಣಿಗೆ ಬರುವವನೆಂದು ಹೇಳಿಕಳುಹಿದನು. ರುಕ್ಮಿಣೀಬಾಯಿಯವರು ಈ ಸುದ್ದಿಯನ್ನು ತಮ್ಮ ಮನೆಯವರಿಗೆ ಮುಟ್ಟಿಸಿದರು.

ಲಕ್ಷ್ಮಣ ಜೋಯಿಸರು ಉಸುರ್ಗರೆದು, ಒಳಗೆಹೋಗಿ, ಒಂದುನೂರು ರೂಪಾಯಿಗಳನ್ನು ತಂದು, ತಮ್ಮ ಪುರೋಹಿತರ ಸಂಗಡ ಕೊಟ್ಟು ಕಳುಹಿದರು. ಪುರೋಹಿತರು ಭರದಿಂದ ಬಂದು, ಎಲೆ ಅಡಕೆಗಳೊಂದಿಗೆ ಆ ನೂರು ರೂಪಾಯಿಗಳನ್ನು ಒಡಕಣ್ಣನ ಮುಂದೆ ತಂದಿಟ್ಟರು. ಆದರೆ ಅಳಿಯದೇವರು ರೂಪಾಯಿ ತುಂಬಿದ ತಾಟನ್ನು ಎಡಗಾಲಿಂದ ಒದೆದು, ಕಣ್ಣು ಕೆಂಪಗೆ ಮಾಡಿ, ಕಟಕಟನೆ ಹಲ್ಲುಕಡಿಯುತ್ತಾ, “ ನಾ ಏನು ದೇಶಾವರ ಬೇಡಲಿಕ್ಕೆ ಬಂದ ಬ್ರಾಹ್ಮಣ ಅಲ್ಲ. ಇದನ್ನ ತಿರುಗಿ ಒಯ್ದು ಆ ತಿರುಕಗs ಕೊಡಿರಿ ” ಎಂದು ತಲೆ ತಿರುಗಿ ನುಡಿದರು. ಅದಕ್ಕೆ ಆ ಬಡ ಬ್ರಾಹ್ಮಣನು ಹೆದರಿ, ಹರಹಿದ ರೂಪಾಯಿಗಳನ್ನೆಲ್ಲಾ ಆರಿಸಿಕೊಂಡು, “ ಲಕ್ಷ್ಮಿಗೆ ಅಪಮಾನ ಮಾಡಿದ ಈ ಅಶಿಕ್ಷಿತ ವೇತನದಾರರಿಗೆ ಕ್ಷಿಪ್ರದಲ್ಲಿಯೇ ಭಿಕ್ಷೆಬೇಡುವ ಹೊತ್ತು ಬರುವದು ” ಎಂದು ಉದ್ರೇಕದಿಂದ ನುಡಿದು ಜೋಯಿಸರ ಮನೆಗೆ ತೆರಳಿದನು.

ಈ ಗೊಂದಲದಲ್ಲಿಯೆ ಐದು ತಾಸು ರಾತ್ರಿಯಾಯಿತು. ಉರುಟಣಿಗೆಂದ ಬಂದ ಊರೊಳಗಿನ ಹೆಣ್ಣುಮಕ್ಕಳು ಬೇಸತ್ತು, ಒಬ್ಬೊಬ್ಬರೇ ತಮ್ಮ

ತಮ್ಮ ಮನೆಯ ಹಾದಿ ಹಿಡಿದರು. ಸ್ವಲ್ಪ ಹೊತ್ತಿನಲ್ಲಿಯೆ ವನಿತೆಯರ ವೃಂದವು ಬಯಲಾಯಿತು. ಪಾಪ! ರುಕ್ಮಿಣೀಬಾಯಿಯವರು ಏನು ಮಾಡಿಯಾರು ? ಚಂದ್ರಾವತೀ ಬಾಯಿಯವರ ಬಳಿಗೆ ಬಂದು "ಆರುತಾಸು ರಾತ್ರಿ ಆತು; ವಲ್ಲಭರಾಯರು ಬರಲೊಲ್ಲರು ನೀವಾದರೂ ಹೋಗಿ ಕರಕೊಂಡು ಬರಬೇಕು." ಎಂದು ಬಹು ವಿನಯದಿಂದ ಹೇಳಿಕೊಂಡರು.

ಚಂದ್ರಾವತಿ ಬಾಯಿಯವರು, "ಉಡುಗೋರೀ ಕಾಲಕ್ಕ ತಿರುಕರಿಗೆ ಕೊಡೋ ಎರಡು ಹರಕ ಅರವೀಕೊಡುಲಿಕ್ಕೆ ಬಂದಿರಿ. ಈಗ ಒಂದು ಕಂಠೀ ಸರಾ ಕೊಡೇಬೇಕು ಅಂತ ಅಳಿಯಾ ಕೇಳಿದರ ನೂರು ರೂಪಾಯಿ ತಂದಿಟ್ರಿ. ಮಂದೀ ಒಳಗ ಯಾರ ಮರ್ಯಾದೀ ಕಳಿಯಬೇಕಂತ ಮಾಡಿರಿ ? ಮಗ ಳನ್ನ ಮನ್ಯಾಗ ಇಟಗೊಂಡು ಕೂಡಬೇಕೂ ಅಂತ ನೀವೇ ಮಾಡಿಧಾಂಗ ಕಾಣತದ. ನಾ ಹೇಳಿದರ ಅವಾ ಕೇಳ್ತಾನೇ ನಿಮ್ಮ ಮನಸಿಗೆ ಬಂಧಾಂಗ ಮಾಡ್ರಿ. ನಾ ಏನು ಅವನ್ನ ಕರೀಲಿಕ್ಕೆ ಹೋಗಾಕೆಲ್ಲ" ಎಂದು ನಿಷ್ಠುರ ವಾಗಿ ನುಡಿದರು.

ಆಗ ರುಕ್ಮಿಣೀ ಬಾಯಿಯವರು, "ನಿಮ್ಮ ಸೊಸಿನ್ನ ಮನಿಗೆ ಒಪ್ಪಿಸೇವಿ. ಕೊಟ್ಟ ಹೆಣ್ಣು ಕುಲಕ್ಕ ಹೊರತಂತ ನಾಯೇನು ಮಗಳನ್ನ ಮನಿಗೆ ಕರ ಕೊಂಡು ಹೋಗೋದಿಲ್ಲ. ನಿಮ್ಮ ಇಷ್ಟ ಇದ್ಧಾಂಗ ಮಾಡ್ರಿ. ಆರತೀಮಾಡಿ ಸಿಗೊಳ್ಳದಿದ್ದರ ಇಲ್ಲ. ಇನ್ನ ನಮ್ಮ ಮನೀಗೆ ನಾವು ಹೋಗತೇವಿ" ಎಂದು ಎದ್ದು ನಿಂತರು.

ಈ ಸಂವಾದವನ್ನು ಕೇಳುತ್ತಿದ್ದ ಒಡಕಣ್ಣನು ಒಳಗೆ ಬಂದು, "ಆತು,- ಎಲ್ಲಾ ಸ್ವರೂಪ ತಿಳಧಾಂಗ ಆತು. ನಮ್ಮದಾಧ್ರೂ ಏನು ಹೋತು ? ಕೂಲಿ ಇಲ್ಲದೇ ಒಂದು ಆಳು ಸಿಕ್ಕಿತು. ಈಗ ಯಾಕ ನಿಮ್ಮ ಸಂಗತಿ ಒಟಾ ಗುದ್ದಾಟೇ ಮುಂದಕ ನಮ್ಮ ಕೈಯಾಗ ಇದ್ಧಾಂಗ ಮಾಡಿದ್ರ ತೀರೀತು. ನಾಯೇನು ಉಟ್ಟಗಿಟ್ಟ ಮಾಡಿಸಿಗೊಂಬಾವಲ್ಲ. ಆರತೀ ಅಷ್ಟು ತಿವದು ನಿಮ್ಮ ಮನೀಗೆ ನೀವು ನಡೀರಿ" ಎಂದು ಗದ್ದರಿಸಿದನು.

ರುಕ್ಮಿಣೀಬಾಯಿಯವರು ತಮಗಾದ ಸಂತಾಪವನ್ನೆಲ್ಲಾ ನುಂಗಿ ಕೊಂಡು, ಒಡಕಣ್ಣನನ್ನೂ, ಗೌರಿಯನ್ನೂ ಹಾಸಿಗೆಯ ಮೇಲೆ ಕುಳ್ಳಿರಿಸಿ.

ಆರತಿಮಾಡಿ, "ಅಯ್ಯೋ ಹುಲಿಯುಗವಿಯಲ್ಲಿ ಹರಿಣಿಯನ್ನು ಇರಿಸಿ ಹೋಗಲಿ ವಲ್ಲ" ಎಂದು ಮನದಲ್ಲಿ ಮಿಡುಕುತ್ತಾ ಮನೆಯ ಮಾರ್ಗಹಿಡಿದರು.

ಫಲಶೋಭನ ಪ್ರಸ್ತದಲ್ಲಿ ಲಕ್ಷ್ಮಣ ಜೋಯಿಸರಿಂದ ಒಂದು ಸಾವಿರ ರೂಪಾಯಿಗಳನ್ನಾದರೂ ಎತ್ತಬಹುದೆಂದು ಒಕಡಣ್ಣನು ಯೋಚಿಸಿದ್ದನು. ತನ್ನ ಯೋಚನೆ ಕನಸಿನ ಮಂಡಿಗೆಯಾದದ್ದನ್ನು ಕಂಡು ಅವನ ಪಿತ್ತ ನೆತ್ತಿ ಗೇರಿತು. ಅವನು ಕೋಣೆಯ ಕದವನ್ನು ಗಟ್ಟಿಯಾಗಿ ಹಾಕಿ, ಹಾಸಿಗೆಯ ಮೇಲೆ ಕುಳಿತ ಗೌರಿಯನ್ನು ಎಡಗಾಲಿಂದ ಒಡೆದು ನೆಲಕ್ಕೆ ಉರುಳಿಸಿದನು. ಗೌರಿಯು ತನಗಾದ ದುಃಖವು ಬಾಯಿಂದ ಹೊರಬೀಳಬಾರದೆಂದು ಸೀರೆಯ ಸೆರಗನ್ನು ಬಾಯಲ್ಲಿ ತುರಕಿಕೊಂಡು, ನೆಲದ ಮೇಲೆ ಒರಗಿದಳು.

ಗೌರಿಯು ಪಲಂಗಮೇಲಿಂದ ಬಿದ್ದ ಶಬ್ದವು ಹೊರಗಿನ ಹೆಂಗಳೆಯರಿಗೆ ಕೇಳದಿರಲಿಲ್ಲ. ಕರುಳು ಕರಗಿ, ಅವರು ಒಳಗೆ ನಡೆದ ಅನರ್ಥವನ್ನು ನೋಡತಕ್ಕ ಹಂಚಿಕೆಗಳನ್ನು ಹುಡುಕಹತ್ತಿದರು. ಆ ಕೋಣೆಗೆ ಆಳೆತ್ತರದ ಮೇಲೆ ಒಂದು ಸಣ್ಣ ಕಿಡಿಕೆಯಿತ್ತು. ಅದನ್ನು ಒಬ್ಬ ಚಾಣಾಕ್ಷೆಯು ನೋಡಿ, ತನ್ನ ಹತ್ತರವಿದ್ದ ಮತ್ತೊಬ್ಬಳಿಗೆ ಸನ್ನೆಮಾಡಿ ತೋರಿಸಿದಳು. ಅದು ಬಹಳ ಎತ್ತರವಿದ್ದುದರಿಂದ ಅದರಲ್ಲಿ ಇಣುಕಿ ನೋಡುವುದು ಸಾಧ್ಯವಿದ್ದಿಲ್ಲ. ಏನನ್ನಾದರೂ ಎತ್ತರವಾಗಿ ಇಟ್ಟುಕೊಂಡು, ಅದರ ಮೇಲೆ ಹತ್ತಿನಿಲ್ಲಬೇಕೆಂದರೆ, ಅಲ್ಲಿ ಯಾವ ಸಾಧನಗಳೂ ಇದ್ದಿಲ್ಲ. ಗಟ್ಟಿಮುಟ್ಟಾದ ಹೆಣ್ಣುಮಗಳೊಬ್ಬಳು ತಾನು ಬಗ್ಗಿನಿಂತು, ಉಳಿದವರಿಗೆ ತನ್ನ ಮೇಲೆ ಹತ್ತಿ ನೋಡಿರೆಂದು ಸನ್ನೆಯಿಂದ ಸೂಚಿಸಿದಳು. ಕೂಡಲೆ ಒಬ್ಬ ಚಪಲೆಯು ಅವಳ ಬೆನ್ನಮೇಲೆ ಹತ್ತಿ, ಕಿಟಕಿಯಲ್ಲಿ ಇಣುಕಿ ನೋಡತೊಡಗಿದಳು. ಹಾಸಿಗೆಯಲ್ಲಿ ಬಿದ್ದು ಹೊರಳಾಡುತ್ತಿದ್ದ ಒಡಕಣ್ಣನಿಗೆ, ಹೊರಗೇನೋ ಸುಳಿದಹಾಗೆನಿಸುತ್ತಿದ್ದರಿಂದ, ಅವನು ತಟ್ಟನೆ ಎದ್ದುಬಂದು ಬಾಗಿಲನ್ನು ತೆರೆದನು.

ಬಗ್ಗಿನಿಂತ ತರುಣಿಯು ಗಾಬರಿಯಾಗಿ ಹಿಂದೆಸರಿದಳು; ಮೇಲೆ ನಿಂತು ಚಪಲೆಯು ಆಧಾರತಪ್ಪಿ ನೆಲಕ್ಕೆಬಿದ್ದಳು; ಅವಳಿಗೆ ಬಲವಾದ ಪೆಟ್ಟು ಹತ್ತಿ ಖವಳಿಬಂದಿತು. ಉಳಿದವರು ನಡುಮನೆಯಲ್ಲಿ ಹೋಗಿ ಅಡಗಿಕೊಂಡರು.

ಒಡಕಣ್ಣನು ಹೊರಗೆ ಬಂದು ನೋಡುತ್ತಾನೆ; ತಮ್ಮ ಅತ್ತಿಗೆಯು ಎಚ್ಚರತಪ್ಪಿ ಬಿದ್ದಿದ್ದಾಳೆ! ಅವಳ ಮೊಳಕಾಲುಗಳಿಗೆ ಬಲವಾದ ಪೆಟ್ಟು ತಗುಲಿದೆ; ಹಣೆಯೊಡೆದು ನೆತ್ತರು ಚಿಮ್ಮುತ್ತಿದೆ. ಕೂಡಲೆ ಒಡಕಣ್ಣನು ಕೋಣೆಯೊಳಗೆ ಹೋಗಿ, ತುಂಬಿದ ತಂಬಿಗೆಯೊಳಗಿನ ನೀರನ್ನು ತಂದು, ಅವಳ ನೆತ್ತಿಗೆ ಬಡಿಯುತ್ತ ಚಂದ್ರಾವತಿಬಾಯಿಯವರನ್ನು ಕೂಗಿದನು. ನಡುವನೆಯಲ್ಲಿದ್ದ ತರುಣಿಯರು ದೀಪಹಚ್ಚಿಕೊಂಡು, ಹೊರಗೆ ಬಂದರು. ಒಬ್ಬಳು ಬಿದ್ದವಳ ಹಣೆಯಿಂದ ರಕ್ತವು ಚಿಮ್ಮದಂತೆ ಗಟ್ಟಿಯಾಗಿ ಹಿಡಿದಳು; ಮತ್ತೊಬ್ಬಳು ಸಕ್ಕರೆಯನ್ನು ತಂದು ಆ ಗಾಯಕ್ಕೆ ತುಂಬಿದಳು. ಕೆಲವರು ಕಾಲುಗಳಿಗೆ ಬಿಸಿಬೂದಿಯನ್ನು ತಿಕ್ಕಹತ್ತಿದರು. ಮತ್ತೆ ಕೆಲವರು ಬೀಸಣಿಗೆಗಳಿಂದ ಗಾಳಿ ಹಾಕತೊಡಗಿದರು. ಹೀಗೆ ಅರ್ಧ ತಾಸಿನ ಉಪಚಾರವಾದಮೇಲೆ, ಎಚ್ಚರತಪ್ಪಿ ಬಿದ್ದ ತರುಣಿಯು ಚೇತರಿಸಿಕೊಂಡು ಎದ್ದು ಕುಳಿತಳು. ಅವಳನ್ನು ಎತ್ತಿಕೊಂಡು ಹೋಗಿ ನಡುಮನೆಯಲ್ಲೊಂದು ಮೆತ್ತನೆಯ ಗಾದಿಯಮೇಲೆ ಮಲಗಿಸಿದರು.

ಒಡಕಣ್ಣನು ಕೋಣೆಯೊಳಗೆ ಹೋದವನೆ, ಅಲ್ಲಿಯೆ ನೆಲದಮೇಲೆ ಮುದ್ದೆಯಾಗಿ ಬಿದ್ದುಕೊಂಡು ಗೌರಿಗೆ ಚೆನ್ನಾಗಿ ಗುದ್ದಿ, "ಕರಿಗಾಲವಳೇ, ನಿನ್ನದಶಿಂದ ಇಷ್ಟೆಲ್ಲಾ ಅನರ್ಥ ಆದದ್ದು. ನೀ ಇಲ್ಲಿ ಬ್ಯಾಡ, ನಡಿಹೊರಗ" ಎಂದು ಅವಳನ್ನು ಚಂಡುಹಿಡಿದು ಹೊರಕ್ಕೆ ದಬ್ಬಿದನು. ಗೌರಿಯು ನಡುಗುತ್ತ ನಡುಮನೆಗೆ ಬಂದು ಒಂದು ಮೂಲೆಯಲ್ಲಿ ಮುದುಡಿಕೊಂಡು ಕುಳಿತಳು. ಚಂದ್ರಾವತಿಬಾಯಿಯವರು ಅವಳನ್ನು ದುರುಗಟ್ಟಿಕೊಂಡು ನೋಡಿ," "ಛೀ, ಖೋಡೀ! ನಿನ್ನ ಕಾಲಗುಣಾ ನೋಡು. ಮನಿವಳಗ ಕಾಲಿಟ್ಟ ದಿವಸಾನs ರಕ್ತಹರಿಸಲಿಕ್ಕೆ ಹತ್ತೀದಿ. ನೀವೊಬ್ಬಾಕಿ ಮಾರಿ, ಪಿಶಾಚಿ ಗಂಟು ಬಿದ್ಧಾಂಗ ಆಗೇದ. ನಮ್ಮಮನೀ ಹಾಳಮಾಡ್ಲಿಕ್ಕೇ ಬಂದೀದೆಲ್ಲs" ಎಂದು ಗೌರಿಯ ಸೋಟಿತಿವಿದರು. ಗೌರಿಯು ನಿರುತ್ತರಳಾಗಿ ಕುಸುಗುಟ್ಟುತ್ತ ಕುಳಿತುಬಿಟ್ಟಳು.

ಕೂಡಿದವರಿಗೆಲ್ಲ ನಿದ್ದೆ ಬಲವಾಗಿ ಬಂದದ್ದರಿಂದ ಅವರೆಲ್ಲ ಅಲ್ಲಿಯೆ ಗುಡಾರದಮೇಲೆ ಒರಗಿದರು. ಚಂದ್ರಾವತಿಬಾಯಿಯವರು ಒಡಕಣ್ಣನ ಕೋಣೆಗೆ ಬಂದು ಬಾಗಿಲ ಹಾಕಿಕೊಂಡು, ಬೆಳತನಕ ಕುಚುಕುಚು ಮಾತಾ

ಡುತ್ತಾ ಕುಳಿತುಕೊಂಡರು. "ಏನು ಅನರ್ಥ!" ಎಂದು ಒಡಕಣ್ಣನ ಬಳಗದವರಿಗೇ ಅಸಹ್ಯವೆನಿಸಿತಂತೆ.

## ೩. ಮೊದಲತುತ್ತು.

ಒಡಕಣ್ಣನ ಮನೆಯಲ್ಲಿ ನಡೆದ ಸಂಗತಿಗಳು ಲಕ್ಷ್ಮಣಜೋಯಿಸರಿಗೆ ಸಂಪೂರ್ಣವಾಗಿ ತಿಳಿದಿರಲಿಲ್ಲ. ರುಕ್ಮಿಣೀಬಾಯಿಯವರು ತಮಗಾದ ಕಷ್ಟಕ್ಕೆ ಪತಿಯನ್ನೂ ಪಾಲುಗಾರರನ್ನಾಗಿ ಮಾಡಿಕೊಳ್ಳುವುದು ವಿಹಿತವಲ್ಲವೆಂದು ಭಾವಿಸಿ, ಜೋಯಿಸರ ಮುಂದೆ ಏನನ್ನೂ ಹೇಳಲಿಲ್ಲ. ಉಳಿದ ಹೆಂಗಳೆಯರೂ ನಡೆದದ್ದನ್ನು ಹೇಳುವುದಕ್ಕೆ ಹೆದರಿ, ಸುಮ್ಮನಿದ್ದರು. ಆದರೆ ಜೋಯಿಸರ ಪುರೋಹಿತನು ಮಾತ್ರ ಒಡಕಣ್ಣನ ಮದಾಂಧತೆಯನ್ನು ಮನಬಂದಂತೆ ಹಳಿದು, ಜೋಯಿಸರಿಗೆ ಅವರ ರೂಪಾಯಿಗಳನ್ನು ತಂದು ಕೊಟ್ಟು ಹೋಗಿದ್ದನು. ಇನ್ನೊಂದು ನೂರು ರೂಪಾಯಿಗಳನ್ನು ಕೊಟ್ಟರೆ ಅಳಿಯನು ಸಂತುಷ್ಟನಾದಾನೆಂದು ಭಾವಿಸಿ, ಜೋಯಿಸರು ಬೆಳಗಾಗುತ್ತಲೆ ಎರಡು ನೂರು ರೂಪಾಯಿಗಳನ್ನು ಕಟ್ಟಿಕೊಂಡು, ತಾವೇ ಒಡಕಣ್ಣನ ಮನೆಗೆ ಬಂದರು.

ಒಡಕಣ್ಣನಿನ್ನೂ ಎದ್ದಿದ್ದಿಲ್ಲ. ಅವರು ಅಲ್ಲಿಯೆ ಹಾಸಿದ ಗುಡಾರದ ಮೇಲೆ ಕುಳಿತರು. ಅಷ್ಟರಲ್ಲಿ ಗೌರಿಯು ಒಳಗಿನಿಂದ ಬಂದು ನಮಸ್ಕರಿಸಿದಳು. ಅವಳ ಬಾಡಿದ ಮುಖವನ್ನು ನೋಡಿ ಜೋಯಿಸರಿಗೆ ಬಹಳ ಕಳವಳವಾಯಿತು. ಮನದಲ್ಲಿ ಮಿಡುಕುತ್ತಾ ಅವರು ಅಲ್ಲಿಯೆ ಕುಳಿತರು. ಎರಡು ತಾಸು ಹೊತ್ತು ಏರಿದ ಮೇಲೆ ಒಡಕಣ್ಣನು ಕೋಣೆಯಿಂದ ಹೊರಬಿದ್ದು, ಮುಖತೊಳೆದುಕೊಂಡು ಬಂದನು. ಜೋಯಿಸರು ತಾವು ತಂದ ಹಣವನ್ನು ಅವನೆದುರಿಗೆ ಸುರುವಿ, ಇಂದಿನ ಮರಿದಂಡಲವನ್ನು ಸಾಂಗ ಮಾಡಬೇಕೆಂದು ಹೇಳಿಕೊಂಡರು. ಬಂದ ರೂಪಾಯಿಗಳನ್ನೇಕೆ ಬಿಡಬೇಕೆಂದು ಒಡಕಣ್ಣನು ಅವುಗಳನ್ನು ತೆಗೆದುಕೊಂಡು "ಹೂಂ" ಎಂದನು.

ಅಂದು ಮಧ್ಯಾಹ್ನ ಬೀಗರಿಗೆಲ್ಲ ಹೋಳಿಗೆಯ ಊಟವಾಯಿತು. ಸಾಯಂಕಾಲ ಉರುಟಣಿಗೆ ರುಕ್ಮಿಣಿಬಾಯಿಯವರು ಹೋಗಲೊಪ್ಪಲಿಲ್ಲ.

ಆದರೆ ಲಕ್ಷ್ಮಣಜೋಯಿಸರು, ಅಳಿಯನನ್ನು ಸಮಾಧಾನಪಡಿಸಿ ಎಲ್ಲವನ್ನೂ ಸರಿಮಾಡಿ ಬಂದಿರುವೆಂದು ಹೇಳಿದ್ದರಿಂದ, ಅವರು ನಿರ್ವಾಹವಿಲ್ಲದೆ ಕೆಲವು ತರುಣಿಯರೊಡನೆ ಉರುಟಣಿಗೆ ಬಂದರು. ಆದರೆ ಒಡಕಣ್ಣನು ಮತ್ತೆ ಕಂಠಿಯಸರದ ಮಾತನ್ನೇ ಮುಂದೆ ಮಾಡಿ ಉರುಟಣೆಗೆ ಚಕ್ರಹಾಕಿದನು. ಅವರು ಬಂದಹಾದಿಗೆ ಸುಂಕವಿಲ್ಲೆಂದು ಮನೆಗೆ ಹಿಂದಿರುಗಿ ಬಂದರು. ಮರು ದಿನ ಒಡಕಣ್ಣನು ಕಳುಮೂಟವನ್ನೂ ಮಾಡಿಸಲಿಲ್ಲ. ರುಕ್ಮಿಣೀಬಾಯಿಯ ವರು "ಹಡೆದವರೇನು ಹಣೆಯಬರೆಹ ಬರೆಯುವುದಿಲ್ಲ"ವೆಂದು ನಿರ್ಧರಿಸಿ ನಿಶ್ಚಿಂತರಾಗಿದ್ದರು.

ಗೌರಿಯು ತನಗಾದ ಅಪಮಾನವನ್ನೂ, ದುಃಖವನ್ನೂ ತಾಯಿ ಗಾಗಲಿ, ಗೆಳತಿಯರಿಗಾಗಲಿ ಎಂದೂ ಹೇಳಲಿಲ್ಲ. ಬಂದ ಎರಡುಗಳಿಗೆಲ್ಲ ಎದೆಗೊಟ್ಟು ನಿಂತಳು. ಅವಳು ಸಿಟ್ಟುಸೆಡಕುಗಳನ್ನು ಮಾಡಲಿಲ್ಲ. ಅತ್ತೆಯು ಹೇಳಿದ ಕೆಲಸಗಳನ್ನೆಲ್ಲಾ ಮಾಡುತ್ತಾ, ಪತಿಸೇವೆಮಾಡಿ ಸತಿಯು ಜನ್ಮವನ್ನು ಸಾರ್ಥಕಗೊಳಿಸಬೇಕೆಂದು ಅವಳ ಬಯಕೆ. ಆದರೆ ಅವಳಿಗೆ ಆ ಸುಯೋ ಗವು ಎಂದೂ ಲಭಿಸಲಿಲ್ಲ. ಅಡಿಗೆ, ನೀರು ಮೊದಲಾದ ಮನೆಕೆಲಸಗಳೆಲ್ಲಾ ಗೌರಿಗೆ; ಒಡಕಣ್ಣನೊಡನೆ ಚಕ್ಕಂದದಿಂದ ಕಾಲಕಳೆಯುವದು ಚಂದ್ರಾ ವತಿಬಾಯಿಯವರ ಹಕ್ಕು. ಗೌರಿಯು ಕೈತಪ್ಪಿ ಕೆಲಸಕೆಡಿಸಿದಾಗ ಮಾತ್ರ ಆಕೆಗೆ ಪತಿದೇವನ ಹಸ್ತಸ್ಪರ್ಶವಾಗಲಿ, ಪಾದಸ್ಪರ್ಶವಾಗಲಿ ಆಗುತ್ತಿತ್ತು. ಅವಳು ಬೆಳಗಿನಿಂದ ಮಲಗುವವರೆಗೆ ಸತತವಾಗಿ ದುಡಿಯುವದಕ್ಕೆ ಹಿಂಜ ರಿಯಲಿಲ್ಲ; ಕತ್ತಲೆಯ ಕೋಣೆಯಲ್ಲಿ ಒಬ್ಬಳೆ ಮಲಗಲಿಕ್ಕೂ ಹೆದರಲಿಲ್ಲ. ಅತ್ತೆಯು ಬಯ್ಯುವ ಬಯ್ಗಳೆಲ್ಲವೂ ಆಶೀರ್ವಾದಗಳೆಂದೇ ಅವಳು ಭಾವಿಸಿ ದಳು. ಮನೆಯಲ್ಲಿ ನಡೆಯುತ್ತಿರುವುದೆಲ್ಲಾ ತಿಳಿಯುತ್ತಿದ್ದರೂ ಆಕೆ ಕುರು ಡಿಯಂತೆ, ಕಿವುಡಿಯಂತೆ, ಮೂಕಿಯಂತೆ ಇದ್ದಳು. ದಿನಾಲು ಭಕ್ತಿಯಿಂದ ಗೌರಿಯನ್ನು ಪೂಜೆಸಿ, "ಈ ಜನ್ಮನೀಗಿಸು" ಎಂದು ಬೇಡಿಕೊಳ್ಳುತ್ತಿದ್ದಳು.

ಮೊದಲಗಿತ್ತಿಯನ್ನು ಅತ್ತೆಯ ಮನೆಯಲ್ಲಿಯೆ ಎಷ್ಟು ದಿನ ಬಿಡು ವುದು? ತವರು ಮನೆಯವರು ಬಂದು ಕರೆದೊಯ್ಯಬೇಡವೆ? ಲಕ್ಷ್ಮಣ ಜೋಯಿಸರು ಬಂದರು; ಮಗಳನ್ನು ಮನೆಗೆ ಕಳಿಸಿಕೊಡಿರೆಂಬ ಬಿನ್ನಹ

ವನ್ನೂ ಮಾಡಿಕೊಂಡರು. ಒಡಕಣ್ಣನ ಮಂತ್ರಕ್ಕೆ ಮತ್ತೊಂದು ಸುಯೋಗ ದೊರೆದಂತಾಯಿತು. ಕೂಡಲೆ ಅವನು "ನೀವು ಪ್ರಸ್ತದಾಗ ನನ್ನ ಮರ್ಯಾದಿ ಕಳದಿರಿ. ನಮ್ಮ ಯೋಗ್ಯತಾಕ ಸರಿಯಾಗಿ ಮುಟ್ಟಿಸಲಿಲ್ಲ. ಈಗ ಒಂದು ಸಾವಿರ ರೂಪಾಯಿ ಕೊಡ್ರಿ. ಆಕೀನ್ನ ನಿಮ್ಮನೀಗೆ ಕಳಿಸ್ತೀನಿ. ಇಲ್ಲಾಂದ್ರ ಆಕೇನ್ನ ಕರಕೊಂಡು ಹೋಗ್ರಿ, ತಿರುಗಿ ಕಳಿಸಬ್ಯಾಡ್ರಿ. ಯಾವುದು ಬೇಕು ಹೇಳ್ರಿ?" ಎಂದು ದರ್ಪದಿಂದ ನುಡಿದನು. ಲಕ್ಷ್ಮಣಜೋಯಿಸರೇ ನಂದಾರು? "ಅಷ್ಟು ದುಡ್ಡು ಕೊಡೋ ಯೊಗ್ಯತಾನೂ ನನಗಿಲ್ಲ. ಮಗಳ್ನ ಬಾಳುವೆಗೇಡು ಮಾಡೋದೂ ನನಗ ಬೇಕಾಗಿಲ್ಲ. ನಿಮಲ್ಲೇ ಇರಲೊಲ್ಲ ಳ್ಯಾಕ" ಎಂದು ತಮ್ಮ ಮನೆಗೆ ಹೊರಟು ಬಂದು, ಪಡಸಾಲೆಯ ಕೋಣೆ ಯಲ್ಲಿ ಬಿದ್ದುಕೊಂಡರು.

ಅವರಿಗೆ ಚಿಂತೆತೊಡಗಿತು. ಇರುಳು ಕಂಡಬಾವಿಯಲ್ಲಿ ಹಗಲು ಹಾರಿದೆನಲ್ಲಾ ಎಂಬ ಪಶ್ಚಾತ್ತಾಪವು ಅವರನ್ನು ಹರಿದು ತಿನ್ನತೊಡಗಿತು. ಒಡಕನು ನರಪಿಶಾಚಿಯೆಂದು ತಿಳಿದೂ ತಿಳಿದೂ ಅವನಿಗೆ ಮಗಳನ್ನು ಕೊಟ್ಟು, ಉರಿಯುವ ಅಗ್ನಿಯನ್ನು ಉಡಿಯಲ್ಲಿ ಹಾಕಿಕೊಂಡಹಾಗಾಯಿತು. ಸ್ವತಃ ತಮ್ಮ ತಂಗಿ! ಆದರೇನು ಹುಳಿಯಸಂಸರ್ಗದಿಂದ ಹಾಲು ಮೊಸರಾಗಿ ಬರುಬರುತ್ತ ಜೊಟಜೊಟನಾರುವುದಿಲ್ಲವೆ? ಇಂಥವರಿಗೆ ಕರುಣೆಯೆಲ್ಲಿಂದ ಬರಬೇಕು? ಹೆರವರ ಹೆಣ್ಣುಮಕ್ಕಳನ್ನು ಪೀಡಿಸುವುದೇ ಇವರಿಗೆ ಪರಮಾ ನಂದ. ಜೋಯಿಸರಚಿಂತೆ ಬಲವಾಯಿ: "ನನ್ನ ಗೌರಿಯನ್ನೇನು ಇವರಿಗೆ ಮಾರಲಿಕ್ಕೆ ಕೊಟ್ಟಿರುವೆನೆ? ಮೂರುಸಾವಿರ ರೂಪಾಯಿಗಳನ್ನು ಕೊಟ್ಟು, ಮೇಲೆ ಅನೇಕ ವಸ್ತ್ರಾಭರಣಗಳನ್ನಿಟ್ಟರೂ ಈ ನರಪಿಶಾಚಿಗಳು ತೃಪ್ತರಾಗ ಲಿಲ್ಲ. ಹದಿನಾಲ್ಕು ವರ್ಷಗಳವರೆಗೆ ಅಕ್ಕರತೆಯಿಂದ ಸಾಕಿಸಲಹಿದ ಮಗ ಳನ್ನು, ವತ್ಸದಮಬ್ಬಿಗೆಬಿದ್ದು, ರಕ್ಕಸನ ದವಡೆಯಲ್ಲಿ ನೂಕಿದೆ! ಹಣ್ಣೆಂಬ ಭ್ರಾಂತಿಯಿಂದ ಕಂಡವನ್ನು ಮುಟ್ಟಿಸಿದ ಹೊನ್ನೆಯ ಹುಳದಂತೆ ನನ್ನ ಸ್ಥಿತಿಯಾಯಿತು. ಮನೆಗೆ ಹೋದರೂ ಮಗಳ ಮುದ್ದುಮುಖವನ್ನು ನಾನು ನೋಡಲಿಲ್ಲ."

ಒಡಕನಿಗೆ ಮಗಳನ್ನು ಕೊಡಬೇಕೆಂದಾಗ ತಮ್ಮ ಪತ್ನಿಯು ಕೊಡ ಬೇಡಿರೆಂದು ಸೆರಗೊಡ್ಡಿಬೇಡಿಕೊಂಡ ಚಿತ್ರವು ಅವರ ಕಣ್ಣೆದುರಿಗೆ ಮೂಡಿತು.

ತಮ್ಮ ಹೆಂಡತಿಯ ಮಾತಿಗೆ ಬೆಲೆಕೊಡಪದೆ, ಆ ಸಾಧ್ವಿಯನ್ನು ತಾವು ಹೀಯಾಳಿಸಿ ನುಡಿದದ್ದನ್ನೂ ನೆನಸಿಕೊಂಡರು. ಆಗ ತಮಗೇನು ಬುದ್ಧಿಭ್ರಂಶವಾಗಿತ್ತು? ವಿನಾಶಕಾಲದ ವಿಪರೀತ ಬುದ್ಧಿಯೆ ಅದು. ಆಗ ಬಾರದುದು ಆಗಿಹೋಯಿತು. ಕಳೆದುಕೊಂಡು ಹುಡುಕಿದರೆ ಉಪಯೋಗ ವೇನು? ಒಡಕಣ್ಣನ ಕ್ರೌರ್ಯವನ್ನು ನೆನಸಿಕೊಂಡು ಅವರ ಮೈ ಜುಮ್ಮೆಂದಿತು. ಗೌರಿಯ ಗತಿಯೇನು? ಆದರೆ ಮರುಕ್ಷಣವೆ ಮನಸ್ಸಿಗೊಂದು ಸಮಾಧಾನ. ತಮ್ಮ ಗೌರಿ ಮಹಾಸ್ವಾಭಿ. ತಮ್ಮ ಮನೆತನದ ಮರ್ಯಾದೆಗೆ ಎಂದೂ ಕುಂದು ತರುವವಳಲ್ಲ ಪ್ರಸಂಗಬಂದರೆ ಪ್ರಾಣವನ್ನು ಕೂಡ ಕೊಟ್ಟಾಳು.

ಈ ಸಮಾಧಾನ ಹಿಂದೆಯೆ ಭಯ: ವತನದ ಅಹಂಕಾರಕ್ಕೂ, ವರದಕ್ಷಿಣೆಯ ದುರಾಶೆಗೂ ಬಿದ್ದ ಒಡಕಣ್ಣನು ಗೌರಿಯನ್ನು ಸರಿಪರಿಯಾಗಿ ಕಾಡದೆ ಬಿಟ್ಟಾನೆಯೆ? ಮಗಳಿಗಾಗುವ ಯಮಯಾತನೆಯನ್ನು ಜೋಯಿಸರು ಊಹಿಸಿ, ನಡುಗಿದರು. ಊಹಿಸುತ್ತಾ ಊಹಿಸುತ್ತಾ "ಇಂಥ ಸ್ಥಿತಿಯಲ್ಲಿ ನನ್ನ ಮಗಳು ಜೀವಂತವಿರುವುದು ಶಕ್ಯವಿಲ್ಲ"ವೆಂದರು. ಅದೊ! ಗೌರಿ ಅವರೆದುರಿಗೆ ಬಂದು ನಿಂತಳು—ಅವಳು ಮೃತ್ಯುವಿನ ಮಾರ್ಗವನ್ನು ಪ್ರತೀಕ್ಷಿಸುತ್ತಿದ್ದಾಳೆ!

ಜೋಯಿಸರಿಗೆ ಎಚ್ಚರವುಳಿಯಲಿಲ್ಲ. "ಇಂದಿಗೆ ಮಗಳ ಋಣ ಹರಿಯಿತು. ಅವಳು ಸತ್ತಳೆಂದು ಸ್ನಾನಮಾಡುತ್ತೇನೆ" ಎಂದು ಎದ್ದರು; ಹುಚ್ಚೆದ್ದು ಹರಿಯತೊಡಗಿದರು.

ರುಕ್ಮಿಣೀಬಾಯಿಯವರು "ಹೀಂಗ್ಯಾಕ ಹುಚ್ಚರಹಾಂಗ ಮಾಡ ತೀರಿ? ಅರುತಾಸಾತು. ಅಡಿಗಿ ಆಗೇದ, ಸ್ನಾನಕ್ಕ ಏಳ್ರಿಲ್ಲ. ಆಕಿ ಏನು ಎರಡನೇಪವರ ಮನ್ಯಾಗಿಲ್ಲ, ತನ್ನ ಗಂಡನ ಮನ್ಯಾಗ ಇದ್ದಾಳ. ಅಲ್ಲೇ ಸತ್ತರ ಸರತಿಮುಟ್ಟಿತು. ಒಣಾ ಚಿಂತೀಮಾಡಿ ಯಾಕ ಸೊರಗತೀರಿ? ಬಂದದ್ದು ಬರಲಿ. ಅನುಭೋಗಿಸಬೇಕು." ಎಂದು ಎಚ್ಚರಿಸಿದರು.

ಲಕ್ಷ್ಮಣಜೋಯಿಸರು ಮೆಚ್ಚಿಬಿದ್ದರು. ತಮ್ಮ ಮನಸ್ಸಿನಲ್ಲಿದ್ದದ್ದು ಇವಳಿಗೆ ಹೇಗೆ ತಿಳಿಯಿತು? ಅವರು ತಮ್ಮ ಪತ್ನಿಯ ಮುಖವನ್ನು ನೋಡಿ

ದರು. ಇಂತಹ ಸಾಧ್ವಿಯ ಹೊಟ್ಟೆಯಲ್ಲಿ ಹುಟ್ಟಿ, ಈಕೆಯಿಂದಲೆ ಸತೀತ್ವದ ಶಿಕ್ಷಣವನ್ನು ಪಡೆದವಳು ಗೌರಿ, ಅವಳ ಬಗ್ಗೆ ಚಿಂತಿಸುವುದೇಕೆ? ಸರಿ, ಜೋಯಿಸರಿಗೆ ಏನೋ ಒಂದು ಬಗೆಯ ಸಮಾಧಾನವೆನಿಸಿತು. ಅವರು ಸ್ನಾನಕ್ಕೆ ಹೊರಟರು.

ಲಕ್ಷ್ಮಣಜೋಯಿಸರ ಭಯವೇನು ಕಾಲ್ಪನಿಕವಾಗಿದ್ದಿಲ್ಲ. ಅವರು ಗೌರಿಯನ್ನು ಕರಿಯಲಿಕ್ಕೆ ಬಂದು, ಮಡ್ಡು ಕೊಡಲಿಕ್ಕೆ ಹಿಂಜರಿದು ಹೋದದ್ದನ್ನು ಕಂಡು ಒಡಕಣ್ಣಾನು ಕಿಡಿಕಿಡಿಯಾದನು. ಹಂಗಿನ ಮಾತು ಗಳಿಂದ ಗೌರಿಯನ್ನು ಪೀಡಿಸುವುದಕ್ಕೆ ಆರಂಭವಾಯಿತು. ಚಂದ್ರಾವತಿ ಬಾಯಿಯವರೂ ತನ್ನ ಅತ್ತೆಯ ಅಧಿಕಾರವನ್ನು ನಡೆಯಿಸತೊಡಗಿದಳು. ಗೌರಿಯ ಸ್ಥಿತಿಯನ್ನು ವರ್ಣಿಸಬೇಕೆ? ಮೈಮುರಿ ದುಡಿತ, ಹಳಸಿದ ತಂಗಳು ಅನ್ನ. ಮುಂಗಾರ ಮಳೆಯ ರಭಸದಿಂದ ಬರುವ ಬಯ್ಗುಳೊಂದಿಗೆ, ಬಡಿಗೆಯ ಬಡಿತಗಳು. ಮುಟ್ಟಾದ ಮೂರು ದಿನಗಳಂತೂ ಅವಳಪಾಡು ಯಾತಕ್ಕೂಬೇಡ. ಹುಡುಗರ ಕೈಯಲ್ಲಿ ಸಿಕ್ಕ ಜೀರಂಗಿ ಹುಳುವಿನಂತೆ ಅವಳ ಸ್ಥಿತಿಯಾಯಿತು.

ಇಷ್ಟಾದರೂ ಗೌರಿಯು ಎದೆಗೆಡಲಿಲ್ಲ. ಅವಳ ಧೈರ್ಯ ಅಂತಹದು ಯಾರ ಮೇಲಾದರೂ ಹರಿಹಾಯ್ದಳೆ? ಸಿಟ್ಟು-ಸೆಡಕು ಮಾಡಿದಳೆ? ದೇವರು ಅವಳಿಗೆ ಅನಂತವಾದ ಸೈರಣೆಯನ್ನು ಕರುಣಿಸಿದ್ದನೆಂದು ಕಾಣುತ್ತವೆ. ತಾಯಿ ಕಲಿಸಿದ ಪಾಠವನ್ನು ಅವಳು ಮರೆಯಲಿಲ್ಲ. ನಿತ್ಯ ಪ್ರದೋಷ ಕಾಲದಲ್ಲಿ ಗೌರಿಪೂಜೆಮಾಡಿ, ಒಪ್ಪೊತ್ತೆ ಊಟಮಾಡಿ, ಹುಲ್ಲಚಾಪೆಯ ಮೇಲೆ ಮಲಗಹತ್ತಿದಳು. ತನ್ನ ಎಲ್ಲ ವಸ್ತ್ರಾಭರಣಗಳನ್ನೂ ಒಡಕಣ್ಣಾನು ವಶಕ್ಕೊಪ್ಪಿಸಿ, ತಂದೆಯ ಮನೆಯಿಂದ ತಂದ ಹಳೆಯಬಟ್ಟೆಗಳನ್ನೆ ಉಟ್ಟು, ವಿರಕ್ತಳಂತೆ ಇರತೊಡಗಿದಳು.

ಹೀಗೆ ಚಾತುರ್ಮಾಸ್ಯದಲ್ಲಿ ಎರಡು ತಿಂಗಳು ಕಳೆದುವು. ಇದನ್ನು ಕಂಡು ಅತ್ತೆಗೆ ಕರುಣೆಯಾಗಲಿಲ್ಲ, ಹೇಸಿಗೆ ಹುಟ್ಟಿತು. ಚಂದ್ರಾವತಿ ಬಾಯಿಯವರು ಕಾಲಮೇಲೆ ಕಾಲುಹಾಕಿಕೊಂಡು ಎಲೆಯಡಕೆಗಳನ್ನು ಮೆಲಕಾಡಿಸುತ್ತಾ ಕುಳಿತಾಗ ಒಂದುದಿನ “ಥೂ, ಖೋಡೀ! ಎಂದರು.

ಗೌರಿಯು ವಿಧೇಯಳಾಗಿ ಕಿವಿಗೊಟ್ಟು ನಿಂತಳು. ಅವರು ಮುಂದರಿಸಿದರು. "ನೀ ಏನು ಗಂಡನ ಸಂಗತಿ ಬಾಳೇವ ಮಾಡ್ತೀದಿ! ನಿನ್ನ ಕಂಡರ ನಿನ್ನಗಂಡ ಬೆಂಕಿಆಗತಾನ ಕತ್ತಿನಾಯಿಕಿಂತ ಕಡೀ ಆದ ನಿನ್ನ ಭವಣಿ.

ಗೌರಿಗೆ ಇದೇನು ಹೊಸಮಾತಲ್ಲ. ಅವಳು ಸುಮ್ಮನೆ ನಿಂತದ್ದನ್ನು ಕಂಡು ಅವರು ದನಿಯೆತ್ತಿದರು; "ಆದರೂ ನೀ ಇನ್ನೂ ಜೀವಂತ ಇದ್ದೀಯಲ್ಲಾ ಅಂತೀನಿ! ನೀ ಸತ್ತರ ಯಾವ ರಾಜ್ಯ ಹಾಳಾಗೋದು? ಊರಾಗ ಇಷ್ಟು ಮಂದಿ ಸಾಯತಾರ ನೀ ಯಾಕ ಸಾಯಬಾರದು?"

ಗೌರಿ ಬಾಯಿ ತೆರೆಯುತ್ತಿದ್ದಳೊ ಇಲ್ಲವೊ ಅಷ್ಟರಲ್ಲಿ ಮತ್ತೆ "ನೀ ಯಾಕ ಸತ್ತೀಯಪ್ಪಾ! ನಮ್ಮ ಮನೆತನಾ ಹಾಳಮಾಡಲಿಕ್ಕೇ ಬಂದೀದಿ. ನಮ್ಮ ಬತಕಣ್ಣಾಗ ಒಂದು ಇದೇ ಗಂಟುಬಿದ್ಧಂಗ ಆಗೇದ. ನೀ ಸತ್ತರ ತನ್ನ ಮನಸಿಗೆ ಬಂದ ಚೆಲೋ ಹೆಣ್ಣು ಲಗ್ನಮಾಡಿಕೋತಾನ, ಮ್ಯಾಲೆ ಸಾಕಾರು ಸಾವಿರ ರೂಪಾಯಿ ಸಿಗತಾವs ನಮ್ಮ ಮನೆತನಾ ನಿಂದರತದs ಲಗೂ ಸಾಯಬಾರದs? ಯಾಕ ಇಟ್ಟೀಯ ಜೀವಾ?" ಎಂದು ಶಪಿಸಹತ್ತಿದರು.

ಅಂದಿನವರೆಗೆ ಅತ್ತೆಯವರೆದುರಿಗೆ ಮರುಮಾತಾಡದ ಗೌರಿಗೆ ಈಗ ತಡೆಯಲಾರದ ಉದ್ರೇಕ ಬಂದು, "ನಾ ಏನು ಸಾವಿಗೆ ಹೆದರಿಲ್ಲ. ಆ ಯಮ ದೇವರು ಕರೀಲಿಕ್ಕೆ ಯಾವಾಗ ಬಂದಾನೋ ಅಂತ ಹಾದಿ ನೋಡಿಕೋತ ಕೂತೇನಿ. ಈ ಭೂಮೀಮ್ಯಾಲಿದ್ದು ನಾ ಸುರಕೊಂಬೋ ಭಾಗ್ಯಾನೂ ಅಷ್ಟs ಆದ. ಎಲ್ಲಾದರೂ ಕೆರಿಭಾವೀ ಹಾರೂವರ ಅಧೋಗತಿ ಆಗತದ ಅಂತ ಬಿಟ್ಟೇನಿ. ಅವರ ಕಡಿಂದ ನನ್ನ ಕುತಿಗೀ ಕೊಯಿಸಿರಿ ಅಂದ್ರ ನನಗ ಮುಕ್ತಿ ಆದೀತು. ದಯಮಾಡಿ ಅಷ್ಟು ಮಾಡಿಸಿ ಬಿಡ್ರಿ" ಎಂದು ನುಡಿದು ಬಿಟ್ಟಳು.

"ಮೆತ್ತಗಿನ್ನ ಕಳ್ಳಿ! ಒಳ್ಳೇ ಯುಕ್ತಿ ಹೇಳ್ತೀಯಲ್ಲ! ನೀ ಸತ್ತರೂ ಮಂದಿಗೆ ಅರಿಷ್ಟ ತಪ್ಪಬೇಕಂತ ಮಾಡೀಯೇನು? ಯಾದಾರ ಒತನಾ ನೀಗಿಹಿಡಿದೀ. ಇಷ್ಟು ನಿಯಮಾ ಮಾಡತೀದಿ, ಧಾರಣೀಪಾರಣೀ. ಚಾಂದ್ರಾಯಣೆ ನೀ ಯಾಕ ಮಾಡಬಾರದು? ಅವನ್ನ ಮಾಡಿದೀ ಅಂದರ

ಈ ಚಾತುರ್ಮಾಸ್ಯ ಹೋಗೋದ್ರಾಗ ಜನ್ಮ ಸೀಗತೀದಿ" ಎಂದು ಚಂದ್ರಾ ಪತೀಬಾಯಿಯವರು ಉಪಹಾಸ್ಯ ಮಾಡಿದರು.

"ಅತ್ತೆವರ್ರ, ನನಗ ಆ ವ್ರತಾ ಹ್ಯಾಂಗ ಮಾಡಬೇಕೋ ಗೊತ್ತಿಲ್ಲ. ನೀವು ದಯಮಾಡಿ ಉಪದೇಶಮಾಡಿದರ, ಅದನ್ನೂ ಮಾಡ್ತೇನಿ!!

"ವೈದಿಕ ಭ್ರಾಂಬರ ಮನ್ಯಾಗ ಹುಟ್ಟೇದಿ, ಈ ವ್ರತಾ ಗೊತ್ತಿಲ್ಲ? ಆತು. ನಾನs ಹೇಳ್ತೇನಿ, ಕೇಳು. ಒಂದು ದಿವಸ ನಿರಾಹಾರ ಮಾಡಿ, ಒಂದು ದಿನ ಒಪ್ಪೊತ್ತು ಉಂಬೋದs ಧಾರಣಿ ಪಾರಣಿ ಅಮಾಸೀ ಮರು ದಿನ ನಿರಾಹಾರ ಮಾಡಿ, ಮರುದಿನ ಚಂದಪ್ಪನ್ನ ಕಂಡು ಒಂದು ತುತ್ತು ಉಣಬೇಕು. ಮರುದಿವಸ ಎರಡು ತುತ್ತು— ಹೀಂಗ ಹುಣ್ಣಿವಿತನಕ ತುತ್ತು ಏರಿಸಬೇಕು. ಮುಂದ ದಿನಾ ಒಂದು ತುತ್ತು ಕಡಿಮಿ ಮಾಡಿಕೋತ ಅಮಾಸಿಗೆ ನಿರಾಹಾರ ಮಾಡಬೇಕು. ಇದಕ್ಕ ಚಾಂದ್ರಾಯಣಿ ಅಂತಾರ. ಹ್ಯಾಂಗೂ ಉಪವಾಸ ಬೀಳಲಿಕ್ಕೆ ನೀ ಗಟ್ಟಿ ಇದ್ದೀದಿ. ಇವೆರಡೂ ಮಾಡು"

ಗೌರಿಯು ಸಮಸ್ತ ಪಾಪಗಳನ್ನು ಸುಟ್ಟು ಬೂದಿಮಾಡುವ ಸದ್ವ್ರತಗಳನ್ನು ಅತ್ತೆಯವರಿಂದ ಅರಿತು ತಾನು ಧನ್ಯಳಾದೆನೆಂದುಕೊಂಡಳು. ತನ್ನ ಸತೀತ್ವವು ಸಫಲವಾಗುವ ಸಮಯವು ಸಮೀಪಿಸಿತೆಂದು ಆಕೆಗೆ ನಿಶ್ಚಯವಾಯಿತು. ತನ್ನ ಮರಣದಿಂದಲೆ ತನ್ನ ಪತಿಗೆ ಹಿತವಾಗುವುದಂತೆ. ಹಾಗಾದರೆ ಮರಣಕ್ಕೆ ಅನುಕೂಲವಾದ ಈ ವ್ರತಗಳನ್ನು ಮರುದಿನವೆ ಆರಂಭಿಸಬಾರದೇಕೆ?

ತನ್ನ ನಿಶ್ಚಯದ ಮೇರೆಗೆ ಇವಳು ವ್ರತವನ್ನು ಕೈಕೊಂಡಳು. ಒಂದು ತಿಂಗಳಲ್ಲಿ ಧಾರಣಿಪಾರಣಿಯನ್ನು ಮುಗಿಸಿ, ಆಶ್ವೀನಶುದ್ಧಪ್ರತಿಪದೆಯಿಂದ ಚಾಂದ್ರಾಯಣಿ ವ್ರತವನ್ನೂ ಆರಂಭಿಸಿದಳು. ವ್ರತದ ಪರಿಣಾಮವಾಗಿ ಆಕೆ ಕೃಶಳಾಗುತ್ತ ಬಂದಳು. ಆದರೆ ಮನೆಗೆಲಸಗಳನ್ನು ಬಿಡಲಿಲ್ಲ. ಆಶ್ವೀನವದ್ಯ ದ್ವಾದಸಿಗೆ ಅವಳು ಬಹಳ ನಿರ್ಜೀರ್ಣಳಾದಳು. ಮುಖದಲ್ಲಿ ಕಾಂತಿಯಿದ್ದರೂ, ಮೈಯಲ್ಲಿ ಎಲುವು ತೊಗಲುಗಳೆರಡೇ ಇದ್ದಂತೆ ಕಾಣತೊಡಗಿತು. ಬರುಬರುತ್ತ ಏಳುವುದೂ ಕುಳಿತುಕೊಳ್ಳುವುದೂ ಕೂಡ ಕಷ್ಟವಾಯಿತು. ಚತುರ್ದಶಿಯ ದಿನವಂತೂ ಅವಳು ಒಂದು ಮೂಲೆಯಲ್ಲಿ ಬಿದ್ದುಕೊಂಡವಳು ಏಳಲಿಲ್ಲ. "ಮನೆಗೆಲಸ ತಪ್ಪಿಸೋದಕ್ಕs ನೀ ನಿಯಮಾ

ಿಡಿದು ಮೂಲ್ಯಾಗ ಬಿದ್ದಿರೋದು" ಎಂದು ಚಂದ್ರಾವತಿಬಾಯಿಯವರು ಂಗಿಸಹತ್ತಿದರು.

ಅಮಾವಾಸ್ಯೆಯ ದಿನ. ಗೌರಿಯ ಚಾಂದ್ರಾಯಣಿ ವ್ರತದ ಉದ್ಯಾ ನೆ ಇಂದೇ ಆಗಬೇಕು. ಮೂರು ತಾಸು ಹೊತ್ತು ಏರಿದೆ; ಸೂರ್ಯ ಂಬದಲ್ಲಿ ಚಂದ್ರಮನು ಸಂಪೂರ್ಣವಾಗಿ ಐಕ್ಯನಾಗಿದ್ದಾನೆ. ಗೌರಿಯು ಗ್ಗಿದ ದನಿಯಿಂದ "ಅತ್ತೆಯವರೇ, ನನಗೆ ಅವರ ಪಾದದರ್ಶನ ಾಡಿಸಿ ಉದ್ಯಾಪನಿ ಮಾಡಿಸಿರಿ" ಎಂದು ಬಹು ದೈನ್ಯದಿಂದ ನುಡಿ ಳು. ಚಂದ್ರಾವತಿಬಾಯಿಯವರು ಹೊರಗೆಹೋಗಿ,ಒಡಕಣ್ಣನನ್ನು ಲ್ಲಿಗೆ ತರೆತಂದರು. ಗೌರಿಯು ಹೊಟ್ಟೆ ಹೊಸೆಯುತ್ತ ಬಂದು, ಪತಿಯ ಾದಗಳನ್ನು ಗಟ್ಟಿಯಾಗಿ ಹಿಡಿದು, ಕಣ್ಣೀರಿಂದ ಪಾದಪ್ರಕ್ಷಾಲನೆ ಮಾಡಿ, ನ್ನ ಹಣೆಯ ಕುಂಕುಮವನ್ನೇ ಆ ಪಾದಗಳಿಗೆ ಸವರಿ, ತಲೆಯಿಟ್ಟು ನಮ ್ಕರಿಸಿ, ಒಂದು ದೀರ್ಘವಾದ ನಿಟ್ಟುಸಿರನ್ನು ಬಿಟ್ಟಳು. ತನ್ನ ಬಾಲ್ಯದ ತಿಯಾದ ಚಂದ್ರಮನನ್ನು ಹುಡುಕಿಕೊಂಡು ಅವಳ ಜೀವ ಸೂರ್ಯಮಂ ಡಲಕ್ಕೆ ಹಾರಿತು.

ಒಡಕಣ್ಣನು ಗಾಬರಿಯಾಗಿ ಗೌರಿಯ ರಟ್ಟೆಯನ್ನು ಹಿಡಿದೆತ್ತಿದನು. ಅವನಿಗೆ ಹೊಳೆಯಿತು. ಇಬ್ಬರೂ ಕೂಡಿ ನಿರ್ಜೀವವಾದ ಆ ದೇಹವನ್ನೂ ಡಸಾಲೆಯಲ್ಲಿ ಹಾಕಿದರು. ಬಾಯಿಯವರಾಗಲಿ, ಒಡಕಣ್ಣನಾಗಲಿ, ಡುಗಿದರೆ? ಕಣ್ಣೀರು ಸುರಿಸಿದರೆ? ಅವರು ಧೈರ್ಯಶಾಲಿಗಳು.

ಹಾಹಾ ಎನ್ನುವುದರಲ್ಲಿ ಬೊಮ್ಮಗೇರಿಯಲ್ಲೆಲ್ಲಾ ಗೌರಿಯ ಮರಣ ಾರ್ತೆಯು ಹಬ್ಬಿಬಿಟ್ಟಿತು. ಊರಜನರು ಗೌರಿಯ ಗುಣವರ್ಣನೆ ಮಾಡುತ್ತಾ ಒಡಕಣ್ಣನ ಕಠೋರ ಹೃದಯಕ್ಕೆ ಕಲ್ಲೊಡೆಯಹತ್ತಿದರು. ಲಕ್ಷ್ಮಣ ಜೋಯಿಸರೂ, ರುಕ್ಮಿಣೀ ಬಾಯಿಯವರೂ ಕಳವಳಪಟ್ಟರೂ ಶವ ರ್ಶನಕ್ಕೆ ಸಹ ಬರಲಿಲ್ಲ; ಸತಿಯರ ಸಹನಶೀಲತೆಯ ಒರೆಗೆ ನಿಂತು ಗೌರಿಯು ಸದ್ಗತಿಹೊಂದಿದಳು, ನಮ್ಮ ಚಿಂತಾಗ್ನಿ ಇಂದು ಶಾಂತವಾ ಯಿತು ಎಂದು ಅವರು ಭಾವಿಸಿದರು.

## ೪. ಮೊದಲಗಿತ್ತಿ

ಗೌರಿಯು ಮೃತ್ಯುದೇವತೆಗೆ ತುತ್ತಾಗಿ ಹತ್ತು ದಿವಸ ಸಹ ಮುಗಿದಿರ ಿಲ್ಲ; ಅಷ್ಟರಲ್ಲಿ ವರಾರ್ಥಿಗಳು ಒಡಕಣ್ಣನ ಮನೆಗೆ ಎಡತಾಕಹತ್ತಿದರು.

ವರನ ವತನದ ಯೋಗ್ಯತೆಯು ಸವಾಲಿಗೆ ತೊಡಗಿತು. ವರಪಕ್ಷದವರು ವರದಕ್ಷಿಣೆ ಆರುಸಾವಿರ ರೂಪಾಯಿಗಳೆಂದರು. ಸವಾಲು ಸುರುವಾದದ್ದು ಎರಡು ಸಾವಿರದಿಂದಾದರೂ, ಅದು ಏರುತ್ತೇರುತ್ತ ನಾಲ್ಕು ಸಾವಿರಕ್ಕೆ ಮುಟ್ಟಿತು. ಒಡಕಣ್ಣನ ಗುಣಶೀಲಗಳನ್ನರಿವರು ಸವಾಲಿಗೆ ಹಿಂಜರಿದರು. ಆದರೆ ಧನಕನಕವತನಗಳಿಗೇ ಮಹತ್ವಕೊಟ್ಟವರು ಮುಂದರಿದರು. ಒಡಕಣ್ಣನಿಗೆ ಬೇಕಾದದ್ದು ವರದಕ್ಷಿಣೆ. ಕನ್ನಿಕೆಯ ರೂಪಗುಣಶೀಲಾದಿಗಳನ್ನು ತೆಗೆದುಕೊಂಡು ಏನು ಮಾಡುವದು? ವಿವಾಹವು ದ್ರವ್ಯಸಂಪಾದನೆಯ ಒಂದು ಸಾಧನವೆಂದೆ ತಿಳಿದವನು ಪ್ರೇಮಕ್ಕೆ ಬೆಲೆ ಕೊಟ್ಟಾನೆಯೆ? ಕಾಲಚಕ್ರದ ಗತಿಯಿಂದ "ಸರ್ವೇ ಗುಣಾಃಕಾಂಚನಮಾಶ್ರಯಂತೇ" ಎಂಬ ತತ್ವವೇ ಜನತೆಯಲ್ಲಿ ಹರಡಿ, ಇಂತಹ ಖಲಪುರುಷರಿಗೇ ಬೆಲೆ ಬಂದ ಕಾಲದಲ್ಲಿ ಒಡಕಣ್ಣಾವಗೇನು ಕೊರತೆ? ಲಕ್ಷ್ಮೀಪುರದ ದೇಶಪಾಂಡೆ ಗಂಗಾಧರರಾಯರು ನಾಲ್ಕು ಸಾವಿರ ರೂಪಾಯಿ ವರದಕ್ಷಿಣೆಯನ್ನೂ, ವರೋಪಚಾರವನ್ನೂ ಕೊಡುವುದಕ್ಕೆ ಸಿದ್ಧರಾಗಿ. ಒಡಕಣ್ಣನ ಮನೆಗೆ ಬಂದರು. ಬರದೇನು ಮಾಡಿಯಾರು? ಪಾಪ! ಇಂದುಮತಿ ಅವರ ಏಕಮಾತ್ರ ಪುತ್ರಿ. ಸಾದುಗಪ್ಪಿನ ಬಣ್ಣ, ಮೈಲಿಕಲೆಗಳ ಮುಖ, ತೆರೆಬಾಯಿ, ಸಣ್ಣಕಣ್ಣು — ಹೀಗೆ ಮಗಳ ರೂಪವಿದ್ದುದರಿಂದ ಸ್ವಲ್ಪ ಹೆಚ್ಚು ವರದಕ್ಷಿಣೆಯನ್ನಾದರೂ ಕೊಟ್ಟು ಅನ್ನವಸ್ತ್ರಗಳಿಷ್ಟ ಮನೆಗೆ ಅವಳನ್ನು ಕೊಡಬೇಕೆಂಬ ಹಂಬಲ ಅವರದು. ತಿನ್ನುವ ಬಾಯಿಗೆ ಹುಣ್ಣು ಹುಟ್ಟಿದರೆ ಅನ್ನವೆಷ್ಟಿದ್ದರೇನೆಂಬುದು ಅವರಿಗೆ ಹೊಳೆಯಲ್ಲ.

ಒಡಕಣ್ಣನು ಧೂರ್ತನು. ಇದಕ್ಕೂ ಹೆಚ್ಚು ವರದಕ್ಷಿಣೆ ಬರುವುದಿಲ್ಲೆಂಬುದನ್ನು ಅರಿತು, ಆವನು ಕನ್ನಿಕೆಯನ್ನು ನೋಡಲಿಕ್ಕೆ ಸಹ ಹೋಗದೆ "ನೀವು ದೊಡ್ಡ ಮನೆತನದವರು. ಮುಂದಾದರೂ ನಮಗೆ ಹೆಚ್ಚಿಗೆ ಮುಟ್ಟಿಸಿಕೊಡುವವರು. ನಿಮ್ಮ ಬಗ್ಗೆ ನನಗೆ ಸಂಶಯವಿಲ್ಲ. ಈಗ ಒಪ್ಪಿದೆ." ಎಂದು ದೊಡ್ಡ ಮಾತಾಡಿ, ಲಗ್ನದ ನಿಶ್ಚಯ ಮಾಡಿಕೊಂಡನು, ಬಳಿಕ ಹನುಮಾಪುರಕ್ಕೆ ಹೋಗಿ ತನ್ನ ಕುತಂತ್ರಪ್ರಭಾವದಿಂದ ಒಂದು ಸಾವಿರ ರೂಪಾಯಿ ಲಗ್ನದ ಪಟ್ಟಿಯನ್ನು ಮತ್ತೆ ಎತ್ತಿದನು. ಫಾಲ್ಗುಣ ಮಾಸದಲ್ಲಿ ಒಡಕಣ್ಣನ ದ್ವಿತೀಯ ವಿವಾಹವಾಯಿತು. ಮುಂದೆ ಅಳಿಯತನಕ್ಕೆ ಹೋಗಿ

ಒಂದು ಗೋಪಿನ ಸರವನ್ನು ಸಂಪಾದಿಸಿದನು. ಆ ಮೇಲೆ ಫಲಶೋಭನ ಪ್ರಸ್ತದಲ್ಲಿ ಒಂದು ಸಾವಿರ ರೂಗಾಯಿಗಳನ್ನೂ, ಮೇಲೊಂದು ಕಂಠಿಯ ಸರವನ್ನೂ ಪಡೆದನು. ಗಂಗಾಧರರಾಯರು ತಮ್ಮ ಒಬ್ಬಳೇ ಮಗಳಾದ ಇಂದುಮತಿ ಸುಖದಿಂದರಲೆಂಬ ಹಂಬಲದಿಂದ ತಮ್ಮ ವತನವನ್ನು ಒತ್ತಿ ಹಾಕಿಯಾದರೂ ಅಳಿಯನ ಇಚ್ಛೆಗಳನ್ನೆಲ್ಲ ಪೂರ್ಣಗೊಳಿಸಿದರು. ಈ ಮದುವೆಯಿಂದ ಒಡಕಣ್ಣನಿಗೆ ಒಟ್ಟು ಏಳು ಸಾವಿರ ರೂಪಾಯಿಗಳ ಗಳಿಕೆಯಾಯಿತು. ಗೌರಿಯ ಮರಣದಿಂದ ಹಡೆದವರ ಹೊಟ್ಟೆಯುರಿದರೆ ಕೈಹಿಡಿದವನಿಗೆ ಧನಸಂಪಾದನೆಯಾಯಿತು.

ಇಂದುಮತಿಗೆ ಅತ್ತೆಯಮನೆಗೆ ಬಂದ ಕೂಡಲೆ "ಗಂಗೆ"ಯೆಂಬ ಹೆಸರಾಯಿತು. ತಂದೆಯ ಮನೆಯಲ್ಲಿ ಚಕ್ಕಂದದಿಂದ ಬೆಳೆದ ಹುಡಿಗೆ. ಒಬ್ಬಳೇ ಮಗಳೆಂಬ ಮಮತೆಯಿಂದ ಅವಳ ತಾಯಿಯು ಅವಳಿಗೆ ಯಾವ ಮನೆಗೆಲಸವನ್ನೂ ಹಚ್ಚಿದ್ದಿಲ್ಲ. ಚೆನ್ನಾಗಿ ಓದಲಿಕ್ಕೂ ಬರೆಯಲಿಕ್ಕೂ ಕಲಿಸಿದ್ದರು. ಸಣ್ಣ ಸಣ್ಣ ಕತೆಗಳನ್ನು ಕಲ್ಪಿಸಿ ಹೇಳುವುದರಲ್ಲಿ ಆಕೆ ಬಲು ಜಾಣೆಯಂತೆ. ಆದರೇನು? ಅತ್ತೆಯ ಮನೆಯಲ್ಲಿ ಅಡುಗೆ ಮಾಡಬೇಡವೇ? ಆಕೆಗೆ ದಿಗಿಲು; ಅಡುಗೆ ಹೇಗೆ ಮಾಡಬೇಕು? ಅತ್ತೆಯವರನ್ನು ಕೇಳಿದಳು. ಚಂದ್ರಾವತಿಬಾಯಿಯವರು ಸುಮ್ಮನಿದ್ದಾರೆಯೇ? "ಹದಿನೈದು ವರ್ಷದ ಥಡಿವಿ ಆಗೇದಿ ಒಂದು ಅನ್ನಾ ಸಾರು ಪಲ್ಯ. ಇಷ್ಟು ಮಾಡೋದು ಗೊತ್ತಿಲ್ಲ? ತವರುಮನ್ಯಾಗ ಏನು ಕಲಿತೀದಿ? ಬರೇ ಗಂಡರಾವಿ ಆಗಿ ಮೆರೆದೀ ಕಾಣಸದ. ಅಡಿಗಿ ಬಾರದ ಹೆಂಗಸೂ, ಓದು ಬಾರದ ಗಂಡಸೂ ಇದ್ದರೂ ಸತ್ತಹಾಂಗs ಸಾಲಿ ಕಲ್ತಾಳಂತ ಸಾಲೀ! ಇಂಥಾ ಕಲ್ತ ಹೆಣ್ಣು ಮಾಡಕ್ಯೋಬ್ಯಾಡೋ ಅಂತ ಬಡಕೊಂಡೆ ಅವಾ ಯಾಕ ಕೇಳ್ಯಾನು? ನನ್ನ ಹಣೇಬಾರ. ಅವಳ ಕಾಲಕ್ಕ ಒಂದು ಥರ ಆತು. ಸೀ ಆಕೀಕಿಂತ ಹೆಚ್ಚಿನಾಕಿ ಬಂದೀದಿ. ನಿಮ್ಮಪ್ಪ ಮೋಸಾ ಮಾಡಿ ನನ್ನ ಮನ್ಯಾಗ ತುರುಕಿ ಹೋಗ್ಯಾನ ನಿನ್ನ, ಇನ್ನೇನು ಮಾಡೋದು ಎಲ್ಲಾ ನಾನs ಕಲಿಸಬೇಕಾತು."

ಅತ್ತೆಯವರು ಉಸಿರು ತೆಗೆದುಕೊಂಡು, ಆಕ್ಸಸದಿಂವ ಪಾಠ ಹೇಳಿಕೊಡತೊಡಗಿದರು. "ಎಸರ ನೀರಾಗ ಬ್ಯಾಳೀ ಹಾಕಿ, ಒಲೀ ಮ್ಯಾಲೆ ಬಡದು

ಉರೀ ಹಚ್ಚು. ಅದಕ್ಕಷ್ಟು ಹುಳಿ, ಉಪ್ಪು, ಖಾರ, ಬೆಲ್ಲಾ ಒಗದು ಮಳ್ಳಿಸು, ಸಾರು ಆಗತದ ಈ ತಪ್ಪೇಲ್ಯಾಗ ಅರಪಾವು ಅಕ್ಕಿ ಹಾಕಿಡು."

ಇಷ್ಟು ಹೇಳಿ ಒಡಕಣ್ಣನೊಡನೆ ಹರಟಿಕೊಚ್ಚುವುದಕ್ಕಾಗಿ ಅವರು ಹೊರಗೆ ಹೋದರು. ಗಂಗೆಯು ಅಡುಗೆಗೆ ತೊಡಗಿದಳು. ಅನ್ನಕ್ಕಿಟ್ಟು ಊದುಗೊಳವೆಯಿಂದ ಒಲೆಯನ್ನು ಊದುತ್ತ ಕುಳಿತಳು. ಹೊಗೆಯಿಂದ ಕಣ್ಣು ಕೆಂಪಾಗಿ, ದಳದಳನೀರು ಸುರಿಯತೊಡಗಿದವು' ತನ್ನ ತಾಯಿ ತನಗೆ ಕೆಲಸ ಹೇಳಿದಾಗ ತಾನು ತಪ್ಪಿಸಿಕೊಂಡು ಓಡಿಹೋಗುತ್ತಿದ್ದದ್ದು, ತಾಯಿ ತಿಳಿಸಿ ಹೇಳಿದರೆ ಕಿವಿಗೊಡದಿದದ್ದು ಅವಳ ಮನಸ್ಸಿನ ಮೇಲೆ ಬರೆ ಯೆಳದಂತೆ ಮೂಡಿ, ಆಕೆ ಮಿಡುಕಿದಳು ಹಿಂದಿನದನ್ನೆಲ್ಲಾ ನೆನಸಿಕೊಳ್ಳುತ್ತಾ ಎಷ್ಟು ಹೊತ್ತು ಕುಳಿತಿದ್ದಳೊ ಯಾರಿಗೆ ಗೊತ್ತು? ಎಚ್ಚರಗೊಂಡು ನೋಡುವಾಗ ಅನ್ನದ ತಪ್ಪೇಲಿಯು ಉಕ್ಕಿ ಒಲೆಯೊಳಗಿನ ಬೆಂಕಿಯನ್ನೆಲ್ಲ ಆರಿಸಿ ಬಿಟ್ಟಿತ್ತು. ಗಾಬರಿಯಾಗಿ ಆಕೆಯು ಮತ್ತೆ ಹೊತ್ತಿಸಿ ಉರಿಮಾಡಿದಳು. ಕಲ್ಲುಗಡಿಗೆಯೊಳಗಿನ ನೀರೂ ಎಸರು ಬಂದಿರಬಹುದೆಂದು ಬೇಳೆಯನ್ನು ಸುರುವಿದಳು. ಅದರಲ್ಲಿ ಹುಳಿ, ಬೆಲ್ಲ, ಉಪ್ಪು, ಕಾರಗಳನ್ನೂ ಹಾಕಿದಳು. ಆ ಮೇಲೆ ಒಲೆಯ ಮೇಲೆ ಪಾತೇಲಿಯನ್ನಿಟ್ಟು ಒಗ್ಗರಣೆ ಹಾಕಿ ಬದನೆಯ ಕಾಯಿಯ ಹೋಳುಗಳನ್ನು ಸುರುವಿ, ಉಪ್ಪು, ಕಾರ ಮೊದಲಾದುವನ್ನೂ ಹಾಕಿದಳು. ಅದಕ್ಕೆ ನೀರು ಬೀಳದ್ದರಿಂದ ಅದು ಹೊತ್ತಿಹೋಯಿತು. ನೆನೆಗುದಿಗೆ ಬಿದ್ದ ಅನ್ನವು ಆಗಲೆ ಅಂಜಕ್ಕಿಯಾಗಿತ್ತು. ಹುಳಿ ಮೊದಲಾದವನ್ನು ಹಾಕಿದ್ದರಿಂದ ಬೇಳೆ ಬೇಯದೆ ಹಾಗೇ ಉಳಿದವು ಅಡುಗೆಯಾಯಿತೆಂದು ಗಂಗೆಯು ಅವು ಮೂರನ್ನೂ ಇಳಿಸಿ, ಉಸ್ಸೆಂದು ಒಲೆಯ ಮುಂದೆ ತಲೆಬಗ್ಗಿಸಿ ಕುಳಿತುಕೊಂಡಳು.

ದೇಸಾಯರ ಆಶ್ರಿತ ಬ್ರಾಹ್ಮಣನು ದೇವರ ಪೂಜೆಯನ್ನು ಮಾಡಿ, ಒಡಕಣ್ಣನನ್ನು ಸ್ನಾನಕ್ಕೆಬ್ಬಿಸಿದನು. ಚಂದ್ರಾವತಿಬಾಯಿಯವರು ಒಳಗೊಂದು ಮಣೆ ಹಾಕಿ "ಸಂಧ್ಯಾವಂದನಕ ಇಡು" ಎಂದು ಸೊಸೆಗೆ ಹೇಳಿದರು. ಏನು ಇಡಬೇಕೆಂಬುದನ್ನು ತಿಳಿಯಲಾರದೆ ಗಂಗೆಯು ಅತ್ತೆಯ ಮುಖವನ್ನು ನೋಡುತ್ತಾ ನಿಂತುಬಿಟ್ಟಳು. ಚಂದ್ರಾವತಿಬಾಯಿಯವರು "ಭಟ್ಟರಃ ನೋಡಿದಿರಾ ನಮ್ಮ ಸೊಸೀ ಪಾಂಡಿತ್ಯ! ಬಣ್ಣಾ ತೊಳದ ಕೆಂಡ;

ಮಾರೀ ನೋಡಿದರ ದೋಸೆ; ಮ್ಯಾಲೆ ಅರಹುಚ್ಚಿ. ಇದು ನನಗೊಂದು ಇದಿ ಗಂಟುಬಿದ್ಹಾಂಗಾಗೇದ. ನನ್ನ ಹಣೇಬಾರ.” ಎಂದು ಹಣೆಹಣೆ ಬಡಿದುಕೊಂಡರು. ಆಶ್ರಿತ ಬ್ರಾಹ್ಮಣನೇ ಸಂಧ್ಯಾವಂದನೆಯ ಉಪಕರಣಗಳನ್ನು ಇಟ್ಟನು. ಒಡಕಣ್ಣನು ಸ್ನಾನಮಾಡಿ, ಒಳಗೆ ಬಂದನು. ಮಣೆಯ ಮೇಲೆ ಉಟ್ಟುಕೊಳ್ಳುವುದಕ್ಕೆ ಧೋತರವೇ ಇಲ್ಲ! ಅವನು ಸಿಟ್ಟಿಗೆದ್ದು ಗಂಗೆಯ ಕೆನ್ನೆಗಳ ಮೇಲೆ ಎರಡೇಟು ಕೊಟ್ಟನು. ಅವಳು ಅಲ್ಲಿಯೆ ಅಳುತ್ತ ಕುಳಿತಳು.

ಬಳಿಕ ಒಡಕಣ್ಣನು ತಾನೇ ಧೋತರವನ್ನು ಎಳೆದು ಉಟ್ಟುಕೊಂಡು ವಟಗುಟ್ಟುತ್ತ ಸಂಧ್ಯಾವಂದನೆ ಮುಗಿಸಿದನು. ಅಷ್ಟರಲ್ಲಿ ಚಂದ್ರಾವತಿಬಾಯಿಯವರು ಮೈತೊಳೆದುಕೊಂಡು ಬಂದರು. ಬ್ರಾಹ್ಮಣನು ಎಲೆ ಹಾಕಿ ಗಂಧಾಕ್ಷತೆ ತೀರ್ಥಗಳನ್ನು ಕೊಟ್ಟನು. ಅತ್ತೆಯವರು “ಮುಗ್ಗಲಗೇಡೀ! ಯಾಕ ಮೂಲಿ ಹಿಡಿದು ಕೂತೀದಿ? ಏಳು. ಉಪ್ಪು ತುಪ್ಪ ಹಾಕು.” ಎಂದರು. ಗಂಗೆಯು ಎಲೆಯ ಬಲದುದಿಗೆ ಉಪ್ಪನ್ನೂ ಎಡಕ್ಕೆ ತುಪ್ಪವನ್ನೂ ಹಾಕಿದಳು. ಚಂದ್ರಾವತಿಬಾಯಿಯವರು ಬಾಯಿ ತೆರೆದರು. “ನೋಡಿದ್ಯಾ ಹೇಣ್ತಿ ಜಾಣತನ? ಮೂಲೆ ನಾಕೆತ್ತಾ ಕಲತಾಳಂತ! ಯಾವ ಮಾಸ್ತರ ಕಲಿಸ್ಯಾನೋ, ಯಾ ಸಾಹೇಬ ಈಕಿನ್ನ ಪಾಸು ಮಾಡ್ಯಾನೋ ದೇವರಿಗೇ ಗೊತ್ತು. ಅಡಿಗೀ ಗತಿ ಏನೇನಾಗೇದೋ ಇನ್ನೂ!”

ಅಡುಗೆಯನ್ನು ನೋಡಿ ಅವರ ಸಿಟ್ಟು ನೆತ್ತಿಗೇರಿತು. “ಇಕಾ ನಿನ್ನ ಹೇಣ್ತಿ ಅಡಿಗೀ ಮಾಡ್ಯಾಳ ನೋಡಪಾ. ಉಣ್ಣು, ಬಡಸ್ತಾಳ ಭವಣಿ” ಎಂದು ಅಂಜಕ್ಕಿ ಅನ್ನ, ಕರಿನೀರು ಸಾರು, ಹೊತ್ತಿಹುರಕಡಲೆಯಾದ ಪಲ್ಯಗಳನ್ನು ಒಡಕಣ್ಣನ ಮುಂದೆ ಇಟ್ಟುಬಿಟ್ಟರು. ಒಡಕಣ್ಣನು ಅಲ್ಲಿಯೆ ಇದ್ದ ಮಡಿಗೋಲಿನಿಂದ ಗಂಗೆಯನ್ನು ಥಳಿಸಿ, ಬಾಸಾಳುಗಳನ್ನು ಎಬ್ಬಿಸಿದನು. ಚಂದ್ರಾವತಿಬಾಯಿಯವರು “ಆಗಲಿ ಈಕೀ ಪಾದ್ಯ ಇನ್ನಿಷ್ಟು ನೆಟ್ಟಗಾಗಲಿ ಯಾರ ಮನೀ ಹಾಳಮಾಡಲಿಕ್ಕೆ ಬಂದೀದಿ?” ಎನ್ನುತ್ತ ಒಡಕಣ್ಣನನ್ನು ಹುರಿದುಂಬಿಸಹತ್ತಿದರು. ಗಂಗೆಯು ಕೆಟ್ಟ ದನಿಯಿಂದ ಚೀರುತ್ತ ಅಲ್ಲಿಯೇ ಬಿದ್ದುಕೊಂಡಳು. ಆಶ್ರಿತ ಬ್ರಾಹ್ಮಣನು ನಡುವೆ ಒಂದು ಪ್ರೈಸ್ಯೋಕ್ತಿ

ಯಿಂದ ಹೇಳಿಕೊಂಡದ್ದರಿಂದ ಒಡಕಣ್ಣನು ಹೊಡೆಯುವುದನ್ನು ಬಿಟ್ಟು, ಸಿಡುಕಿನಿಂದ ಕೋಣೆಯೊಳಗೆ ಹೋಗಿ ಮಲಗಿಕೊಂಡನು. ಭಟ್ಟರು ಅಡುಗೆ ಮಾಡಲಿಕ್ಕೆ ಬಂದು ಕುಳಿತರು. ಚಂದ್ರಾವತಿಬಾಯಿಯವರು ಅವರನ್ನು ಎಬ್ಬಿಸಿ, "ದುಡದು ದುಡದು ಸಾಯಬೇಕಂತ ನನ್ನ ಹಣೇಬರದಾಗ ಬರದದ" ಎಂದು ಆಕ್ರೋಶದಿಂದ ನುಡಿಯುತ್ತಾ ಒಲೆಯ ಮುಂದೆ ಕುಳಿತರು.

ಅಡುಗೆಯಾದ ನಂತರ ತಾವು ಮೂವರೂ ಉಂಡು, ಗಂಗೆಗೆ "ನೀ ಮಾಡಿಟ್ಟೀಯಲ್ಲಾ- ಆ ಪಕ್ವಾನ್ನ ಉಣ್ಣು ಅದನ್ನ ಚೆಲ್ಲಿದಿ ಅಂದ್ರ ನಿನ್ನ ತಲೀ ಒಡದೇನು" ಎಂದು ಹೇಳಿ, ನಡುಮನೆಯಲ್ಲಿ ಹಾಸಿಕೊಂಡು ಮಲಗಿದರು. ಗಂಗೆಯು ಗಂಡನ ಎಲೆಯಲ್ಲಿ ತಾನು ಮಾಡಿದ ಅನ್ನಸಾರುಗಳನ್ನು ಹಾಕಿಕೊಂಡು ಊಟಕ್ಕೆ ಕುಳಿತಳು. ಅತ್ತೆಯ ಆಕ್ರೋಶದಿಂದ ಅವಳ ಅಂತಃಕರಣವೂ ಗಂಡನ ಬಡಿತದಿಂದ ಅವಳ ದೇಹವೂ ಬಹಳ ಹಣ್ಣಾಗಿದ್ದವು. ಆದರೂ ಬಹಳ ಹಸಿವಾಗಿದ್ದರಿಂದ ಅನ್ನವನ್ನು ಬಾಯಿಯಲ್ಲಿ ಹಾಕಿಕೊಂಡಳು. ಅದು ಅವಳ ಗಂಟಲಲ್ಲಿ ಇಳಿಯಲಿಲ್ಲ. ಇಂಥ ಕದನ್ನವನ್ನು ಅವಳೆಂದೂ ತಿಂದವಳಲ್ಲ. ನೀರು ಕುಡಿದು ಆ ತುತ್ತನ್ನು ನುಂಗಿದಳು. ಚಿಕ್ಕಂದಿನಲ್ಲಿ ತನ್ನ ತಾಯಿ ಹಾಲುಮೊಸರು ಹಾಕಿ ಮಿದುವಾದ ಅನ್ನವನ್ನು ಪ್ರೀತಿಯಿಂದ ಬಡಿಸಿದಾಗ ತಾನೊಮ್ಮೆ ಅದನ್ನು ಎಡಗಾಲಿಂದ ಒದೆದುಬಿಟ್ಟಿದ್ದಳು. ಆಗ ಅನ್ನಕ್ಕೆ ಮಾಡಿದ ಅಮರ್ಯಾದೆಯಿಂದಲೆ ಇಂದು ಕೂಳಿಲ್ಲದೆ ಕೊರಗುವ ಹಾಗಾಗಿರಬೇಕು. ನಗುತ್ತ ಮಾಡಿದ ಕರ್ಮದ ಫಲವನ್ನು ಅಳುತ್ತ ಉಣ್ಣಬೇಕಲ್ಲವೆ? ಎಂದು ಚಡಪಡಿಸುತ್ತ ಎಲೆಯಿಂದೆದ್ದಳು.

ಅಂದು ರಾತ್ರಿ ಸಹ ಅವಳು ಅದೇ ಅನ್ನವನ್ನು ಉಣ್ಣಬೇಕಾಯಿತು. ಅದೇನೆ ಇರಲಿ, ಅಂದಿನಿಂದ ಅಡುಗೆಯ ಕೆಲಸ ಮಾತ್ರ ಆಕಗೆ ತಪ್ಪಿತು. ಅದಕ್ಕೆ ಬದಲಾಗಿ ಮೇಲಿನ ಕೆಲಸಗಳೆಲ್ಲ ಅವಳ ಪಾಲಿಗೆ ಬಂದುವು. ಒಬ್ಬಳೇ ನೀರು ಜಗ್ಗಿ ಅವಳ ಕೈಕೆಂಪಡರಿದವು. ಮುಸುರೆಯನ್ನು ಚೆನ್ನಾಗಿ ತಿಕ್ಕದ್ದರಿಂದ ಅಡಿಗೆಯ ಸವುಟಿನ ಪೆಟ್ಟುಗಳೂ, ಕಸವನ್ನು ಬಿಟ್ಟದ್ದಕ್ಕೆ ಕಸ

ಬರಿಗೆಯ ಏಟುಗಳೂ ಬೀಳತೊಡಗಿದುವು. ದಿನಾಲು ಹೊತ್ತಿದ ಅನ್ನವನ್ನೂ, ತಳದಲ್ಲಿ ಉಳಿದ ಸಾರನ್ನೂ ಉಣ್ಣಬೇಕಾಯಿತು. ಮೊದಮೊದಲು ಊಟ ಹೋಗಲಿಲ್ಲ. ಆದರೆ ಹೊಟ್ಟೆಯು ಕೇಳುವುದೆ? ಎರಡು ದಿನ ಉಪವಾಸ ಬಿದ್ದ ಮೇಲೆ ಅದೇ ರುಚಿ ಹತ್ತತೊಡಗಿತು. ಆದರೆ ಹೊಟ್ಟೆ ಮಾತ್ರ ತುಂಬುತ್ತಿರಲಿಲ್ಲ;

ಎರಡು ತಿಂಗಳಲ್ಲಿ ಗಂಗೆಯ ಪುಷ್ಟ ಶರೀರವು ಯಷ್ಟಿಯಾಯಿತು. ಆದರೇನು? ಅವಳು ಭಾರತೀಯ ಸಾವಿತ್ರಿ, ದ್ರೌಪದಿ, ಸೀತೆಯರ ಕಷ್ಟದ ಮುಂದೆ ತನ್ನ ಕಷ್ಟಗಳೇನು ಎಂದುಕೊಂಡಳು.

ಆಷಾಢ ಮಾಸವು ಅರ್ಧಹೋಗಿರಬಹುದು. ಬೊಮ್ಮಗೇರಿಯಲ್ಲಿ ಎಲ್ಲಿ ನೋಡಿದರೂ ತವರೂರಿಗೆ ಹೋಗುವ ಹೆಂಗಳೆಯರ ಸುಳಿದಾಟವೆ ಸುಳಿದಾಟ ಹೊಸದಾಗಿ ಅತ್ತೆಯ ಮನೆಗೆ ಬಂದ ವಧುಗಳು ತವರೂರ ಕಡೆಗೇ ದೃಷ್ಟಿಯಿಟ್ಟು ದಿನಗಳ ಎಣಿಕೆ ಮಾಡುತ್ತಿರುವ ಕಾಲವಿದು. ನಾಗರಪಂಚಮಿ ಬೇರೆ ಬರುತ್ತಲಿದೆ. ಗಂಗೆಗೆ ಹೇಗಾಗಬೇಡ? ಅಂದು ರಾತ್ರಿ ಅವಳಿಗೆ ನಿದ್ದೆ ಹತ್ತಲಿಲ್ಲ. ನಡುಮನೆಯ ಒಂದು ಮೂಲೆಯಲ್ಲಿ ತನ್ನಷ್ಟಕ್ಕೆ ತಾನೆ ಮಲಗಿದ್ದಳು. ಹೊರಗಿನ ಕತ್ತಲೆಯು ಅವಳ ಹೃದಯದಲ್ಲಿಯೂ ನುಗ್ಗುತ್ತಿತ್ತು. ತಾನು ಚಿಕ್ಕಂದಿನಲ್ಲಿ ಕಳೆದ ಸುಖಮಯ ಜೀವನವನ್ನು ನೆನಸಿಕೊಂಡಳು. ತನ್ನ ಪಾಡು ಈಗ ನಾಯಿನರಿಗಳಿಗೂ ಕೀಳಾದ ಪಾಡಾಯಿತಲ್ಲ! ಕತ್ತಲೆ, ಕದನ್ನ, ಬಯ್ಗುಳು, ಮೇಲೆ ಬಡಿಗೆಯ ಪೆಟ್ಟುಗಳು, ದಿನದಿನಕ್ಕೂ ತಾನು ಕೊರಗುತ್ತಾ ಹೋಗುತ್ತಿರಬೇಕಾದರೆ ತನಗೆ ಕ್ಷಯವೆ ಕೂಡಿರಬೇಕು! ಅಲ್ಲದೆ ಮತ್ತೇನು? ಆ ವಿಚಾರದಿಂದ ಅವಳ ಮೈ ಜುಮ್ಮೆಂದಿತು.

ಈ ರೋಗದಿಂದ ಸೊರಗಿ ಸೊರಗಿ ಸಾಯಬೇಕು! ಅದಕ್ಕಿಂತ ಅವಳು ಒಮ್ಮೆಲೆ ಎದ್ದು ಕುಳಿತಳು. "ಇಂದೇ ಯಾಕೆ ಜೀವಕಳೆದುಕೊಳ್ಳಬಾರದು!" ಎಂಬ ಯೋಚನೆ ಹಠಾತ್ತಾಗಿ ಅವಳೆದುರಿಗೆ ಬಂದು ನಿಂತಿತು. ಗಂಡನಿಗೂ ಅತ್ತಿಗೂ ಸುಖವಾಗುತ್ತದೆ. ಹೆತ್ತವರಿಗೆ ದುಃಖವಾದೀತು. ಆದರೆ ನನ್ನ ಸ್ಥಿತಿಯನ್ನು ಕಣ್ಣಾರೆ ಕಂಡು ದುಃಖಿಗಳಾಗಿ ಕೊರಗುವುದಕ್ಕಿಂತ ನಾನು ಸತ್ತ ದುಃಖದಿಂದ ಹತ್ತೆಂಟು ದಿನ ಮರುಗುವುದು ಹೆಚ್ಚೆ? "ಸರಿ ನಾಳಿನ ದಿನ" ಎಂದು ನಿರ್ಧರಿಸಿದಳು.

ಈ ವಿಚಾರದಲ್ಲಿ ಅವಳಿಗೆ ಬೆಳತನಕ ಕಣ್ಣಿಗೆ ಕಣ್ಣು ಹತ್ತಲಿಲ್ಲ. ಬೆಳಗಿನ ಜಾವದಲ್ಲಿ ತುಸು ಮಬ್ಬು ಹತ್ತಿತು. ಅದರಲ್ಲೂ ಒಂದು ಕನಸು; ಮುದುಕ ಬ್ರಾಹ್ಮಣನೊಬ್ಬನು ತಲೆದಿಂಬಿನ ಹತ್ತಿರ ಬಂದು ಕುಳಿತು, "ತಂಗೀ! ಆತ್ಮಹತ್ಯವು ಅಧೋಗತಿಗೆ ಕಾರಣ" ಎಂದ ಹಾಗಾಯಿತು ಆ ಮೇಲೆ ಯಾರೋ ಚೆನ್ನಾಗಿ ಒದೆದರು. ಒದೆಯ ಬಲಕ್ಕೆ ಎಚ್ಚರವಾಗಿ ನೋಡಿದರೆ ಚಂದ್ರಾವತಿಬಾಯಿಯವರು!

ಕನಸಿನ ಅರ್ಥವೇನೊ ಗಂಗೆಗೆ ಸ್ಪಷ್ಟವಾಗಲಿಲ್ಲ. ಅಂದು ನಾಲ್ಕು ತಾಸಿಗೆ ಮನೆಯ ಮುಂದೊಂದು ಸವಾರಿಯ ಚಕ್ಕಡಿ ಬಂದು ನಿಂತಿತು; ಗಂಗಾಧರರಾಯರು ಮಗಳನ್ನು ಕರೆಯಲಿಕ್ಕೆ ಬಂದಿದ್ದರು.

## ೫. ಗಂಗಾಧರರಾಯರು

ಅವರು ಬಂದಾಗ ಒಡಕಣ್ಣನು ಮನೆಯಲ್ಲಿರಲಿಲ್ಲ. ಅವರು ಒಳಗೆ ಬಂದು ಪಡಸಾಲೆಯಲ್ಲಿ ಕುಳಿತುಕೊಂಡರು. ಅಡುಗೆಯ ಮನೆಯಲ್ಲಿ ಗಂಗೆಯ ಮೇಲೆ ಚಂದ್ರಾವತಿಬಾಯಿಯವರು ಗುಡುಗು ಸಿಡಿಲುಗಳಿಂದ ಕೂಡಿದ ಜಡಿಮಳೆಯಂತೆ ಬಯ್ಗಳನ್ನು ಸುರಿಸುತ್ತಿದ್ದರು. ಗಂಗಾಧರರಾಯರ ಕಣ್ಣಲ್ಲಿ ನೀರೂರಿತು. ಅಷ್ಟರಲ್ಲಿ ಒಡಕಣ್ಣನು ಬಂದು, ಮೋರೆ ತಗ್ಗಿಸಿಕೊಂಡು ಕುಳಿತ ಮಾವಂದಿರನ್ನು ಕಂಡು, ಹಾಗೆಯೇ ಒಳಗೆ ಧಾವಿಸಿ, ಚಂದ್ರಾವತಿಬಾಯಿಯವರಿಗೆ ಸೂಚನೆ ಮಾಡಿದನು. ಬಾಯಿಯವರು ತಮ್ಮ ಸೊಸೆಗೆ ಬಯ್ದ ಬಯ್ಗಳ ಅರ್ಥವಿವರಣೆಯನ್ನು ಅವಳ ಮುಂದೆ ಹೇಳಿ, ಆ ವಿಷಯದ ಉಪಸಂಹಾರ ಮಾಡಿದರು. ಒಡಕಣ್ಣನು ಲಗುಬಗೆಯಿಂದ ಹೊರಗೆ ಬಂದು ಗಂಗಾಧರರಾಯರಿಗೆ ನಮಸ್ಕಾರ ಮಾಡಿದನು; ಮೇಲೆ ಲೋಡಿಗೆ ಕುಳಿತುಕೊಳ್ಳಬೇಕೆಂದು ವಿಜ್ಞಾಪನೆ ಮಾಡಿಕೊಂಡನು; ಹಾಗೆಯೆ ಹೊರಗೆ ಹೋಗಿ ಮಾವನವರ ಎತ್ತುಗಳನ್ನು ಕೊಟ್ಟಿಗೆಯಲ್ಲಿ ಕಟ್ಟಿಸಿ, ಹಸಿಹುಲ್ಲನ್ನು ಹಾಕಿಸಿದನು.

ಅಷ್ಟರಲ್ಲಿ ಚಂದ್ರಾವತಿಬಾಯಿಯವರ ಅಪ್ಪಣೆಯ ಮೇರೆಗೆ ಗಂಗೆಯು ತಂದೆಯಿದ್ದಲ್ಲಿಗೆ ಬಂದು ನಮಸ್ಕರಿಸಿದಳು. ರಾಯರಿಗೆ ಒಂದು ಕ್ಷಣ ಮಗಳ ಗುರುತೇ ಹತ್ತಲಿಲ್ಲ. ತಮ್ಮ ಇಂದುವಿಗೆ ಖಗ್ರಾಸಗ್ರಹಣ ಹಿಡಿದುದನ್ನು ಕಂಡು ಅವರು ಉಸುರ್ಗರೆದರು, ಗಂಗೆಯು ಮೋರೆ ತಗ್ಗಿಸಿಕೊಂಡು ಒಳಗೆಹೋದಳು.

ಒಡಕಣ್ಣನ ಹೇಳಿಕೆಯ ಮೇರೆಗೆ ಅವರ ಆಶ್ರಿತ ಬ್ರಾಹ್ಮಣನ ಮಗನಾದ ಭೀಮನೂ ಊಟಕ್ಕೆ ಬಂದನು. ಮಾವನವರು ಬಂದ ಸುದ್ದಿಯನ್ನು ತನ್ನ ಸಂಗಡದ ಜನಕ್ಕೆಲ್ಲಾ ತಿಳಿಸಿ ಒಡಕಣ್ಣನು ಮನೆಗೆ ಬರುವ ಹೊತ್ತಿಗೆ ಅಡುಗೆ ಸಿದ್ಧವಾಗಿತ್ತು. ಊಟದ ಸಂಭ್ರಮ ವಿಶೇಷವಾಗಿತ್ತು. ಆಶ್ರಿತ ಬ್ರಾಹ್ಮಣನು ಬಾಳೆ ಎಲೆ ಹಾಕಿದನು. ಗಂಗೆಯು ಹೊಸ ಸೀರೆ ಕುಪ್ಪಸಗಳನ್ನು ತೊಟ್ಟುಕೊಂಡು ಬಂದು, ಮೇಲಿನ ಪದಾರ್ಥಗಳನ್ನು ಬಡಿಸಿದಳು; ಅತ್ತೆಯವರು ಅಡುಗೆಯನ್ನು ಬಡಿಸಿದರು. ಬೀಗರಿಗಾಗಿ ಶೇವಿಗೆಯ ಖೀರು ಹಪ್ಪಳ ಸಂಡಿಗೆ ಸಿದ್ಧವಾಗಿದ್ದುವು. ದೇವರನಾಮಗರ್ಜನೆ ಮಾಡಿ ಎಲ್ಲರೂ ಭೋಜನಕ್ಕೆ ಆರಂಭಿಸಿದರು

ಅರ್ಧ ಊಟವಾದ ಮೇಲೆ ಚಂದ್ರಾವತಿಬಾಯಿಯವರು "ನಿಮ್ಮ ಮಗಳಿಗೆ ಒಂದು ತಿಂಗಳ ಹಿಂದೆ ಕೆಟ್ಟ ಜ್ವರ ಬಂದವು. ಮೊನ್ನೆ ಅಮಾಂಶ ಆತುಗೀಂಗಾಗಿ ಆಕಿ ಬಹಳ ಸೊರಗಿದ್ಲು; ಈಗ ನೆಟ್ಟಗಿದ್ದಾಳ ಆದರ ಈಕಿ ಬಹಳ ಹಟಮಾರಿ; ಔಷಧ ಕುಡಿಯೋದಿಲ್ಲ. ನಿಮ್ಮ ಮನಿ ಒಳಗ ಸ್ವೇಚ್ಛಿ ಬೆಳದಾಕಿ, ಈಕಿಗೆ ಯಾವ ಮನೆಗೆಲಸಾನೂ ಬರೂದಿಲ್ಲ. ಒಲೀ ಮುಂದ ಕೂತರ ಮುಳುಮುಳು ಅಳತಾಳ. ಸೊಸಿ ಮನಿಗೆ ಬಂದರೂ ನನ್ನ ಭವಣಿ ತಪ್ಪಲಿಲ್ಲ" ಎಂದು ಉಸಿರ್ಗರೆದರು.

ಆಗ ಒಡಕಣ್ಣನು "ಒಬ್ಬ ಆಡಿಗೆಯವನ್ನ ಇಟುಗೋಬೇಕಂತ ಎರಡು ತಿಂಗಳ ಹುಡಿಕಿದೆ. ಹಳ್ಳಿ ಅಂತ ಯಾರೂ ಒಪ್ಪಲೊಲ್ಲರು. ಏನು ಮಾಡೋದು? ನಾ ಒಬ್ಬಂಟಿಗ. ಊರುಬಿಟ್ಟು ಹೋಗೋದು ನನ್ನಿಂದಾಗೂದಿಲ್ಲ. ದೇಶಪಾಂಡೇಯವರು ಒಬ್ಬ ಅಡಿಗೆಯವನ್ನ ಗೊತ್ತುಮಾಡಿಕೊಟ್ಟರ ನಮ್ಮ ಮ್ಯಾಲ ಬಹಳ ಉಪಕಾರ ಆಗತದ" ಎಂದು ವ್ಯಂಗ್ಯವಾಗಿ ನುಡಿದನು

ಗಂಗಾಧರರಾಯರು ಗೋಣಲ್ಲಾಡಿಸಿ, ತಾವು ಮಗಳನ್ನು ಕರೆಯಲಿಕ್ಕೆ ಬಂದಿರುವುದನ್ನು ತಿಳಿಸಿದರು. ಅದಕ್ಕೆ ಒಡಕಣ್ಣನು "ನಮ್ಮ ಮನ್ಯಾಗ ಶ್ರಾವಣಮಾಸದ ಗೌರಿಪೂಜಿ ಯಾರು ಮಾಡಬೇಕು?" ಎಂದು ಕೇಳಿದನು. ಆಶ್ರಿತ ಬ್ರಾಹ್ಮಣನು ಗಂಗಾಧರರಾಯರ ಪಕ್ಷಕಟ್ಟಿ "ರಾಯರಿಗೆ ಇವರೊಬ್ಬರೇ ಮಗಳು. ಪಂಚಮಿ ಹಬ್ಬ- ಕರೀಲಿಕ್ಕೆ ತಾವೇ ಬಂದಾರ; ಈಗ ನಿಮ್ಮ ಅನಾನುಕೂಲತಾ ಹೇಳಿದರ ಹ್ಯಾಂಗ" ಎಂದು ನಗುತ್ತ ನುಡಿದನು

ಚಂದ್ರಾವತಿಬಾಯಿವರು, “ ನಾವೇನು ಕೇಳುಸೂದಿಲ್ಲ ಅಂಬೂದುಲ್ಲ. ಆದರ ಆಕೀನ ನಾ ತಂದಿಮನಿಗೆ ಹೋಗುದುಲ್ಲಾ ಅಂತಾಳ. ಮಗಳಿಗೆ ಬುಗುಡಿ, ಬೆಂಡೋಲಿ ಟೀಕಿ, ಸರ ಹಾಕಿ ಕಳಿಸೋದು ನಿಮ್ಮಿಂದಾಗಲಿಲ್ಲ. ಇದರ ಸಲುವಾಗಿ ನಿಮ್ಮ ಮಗಳು ಮನಿ ಬಿಟ್ಟು ಹೊರಗ ಸಹಿತ ಹೋಗೂದಿಲ್ಲ. ಆಕೀ ಬಯಕಿ ಪೂರ್ಣ ಮಾಡೂ ಹಾಗಿದ್ದರ ಕರಕೊಂಡು ಹೋಗರಿ. ” ಎಂದು ಅಧಿಕಾರವಾಣಿಯಿಂದ ಮಾತಾಡಿದರು.

ಗಂಗಾಧರರಾಯರು, “ ನಮಗೇನು ಹತ್ತೆಂಟು ಮಕ್ಕಳಿಲ್ಲ. ಲಗ್ನ ಪ್ರಸ್ತ ಅಂತ ವೆಚ್ಚ ಬಹಾಳ ಬಂತು, ಅದಕ್ಕ ಮೇಲು ಸಾಮಾನ ಕೊಡೋದು ಆಗಲಿಲ್ಲ. ಈ ಸಲ ನಮ್ಮ ಕೈಲಾದಷ್ಟು ಮಾಡಿಸಿಕೊಡತೇವಿ ” ಎಂದು ದೈನ್ಯದಿಂದ ಹೇಳಿದರು.

ಅಷ್ಟು ಹೊತ್ತಿಗೆ ಊಟ ಮುಗಿದುದರಿಂದ, ಎಲ್ಲರೂ ಎದ್ದು, ಕೈ ತೊಳೆದುಕೊಂಡು, ಪಡಸಾಲೆಯಲ್ಲಿ ತಾಂಬೂಲ ಸೇವೆಗೆ ತೊಡಗಿದರು.

ಒಡಕಣ್ಣನ ಸೂಚನೆಯಮೇರೆಗೆ ಅವನ ಪಂಗಡದ ಜನರು ಒಬ್ಬೊಬ್ಬರೆ ಬರಹತ್ತಿದರು. ಸೆಟ್ಟರ ಬಸೆಟ್ಟೆಪ್ಪನು ಗಂಗಾಧರರಾಯರ ಮುಂದೆ ಒಡಕಣ್ಣನ ಉದಾರ ಬುದ್ಧಿಯನ್ನು ಹೊಗಳಿದನು. ಕಂಬಾರ ಕಲ್ಲಪ್ಪನು ಒಡಕಣ್ಣನ ಪರೋಪಕಾರವನ್ನು ಸೋದಾಹರಣವಾಗಿ ಬಣ್ಣಿಸಿದನು. ಬಡಿಗರ ಭರಮಣ್ಣನು ಒಡಕಣ್ಣನ ಚುರುಕು ಬುದ್ಧಿಯನ್ನೂ, ಶಾಂತಸ್ವಭಾವವನ್ನೂ ಪ್ರಶಂಸಿಸಿದನು. ವಾಸುದೇವಾಚಾರ್ಯರು ಆತನ ಅತಿಥಿ ಸೇವೆಯನ್ನೂ, ಅನ್ನದಾನವನ್ನೂ ಕೊಂಡಾಡಿದರು. ತ್ರಿವಿಕ್ರಮಭಟ್ಟರೆ ಮೊದಲಾದವರು, ಒಡಕಣ್ಣನು ಬೊಮ್ಮಗೇರಿಯ ಬಹು ಜನರ ಭಾಗ್ಯೋದಯ ಕರ್ತನೆಂದೂ, ದತ್ತಕ ಪ್ರಕರಣದಲ್ಲಿ ವಿರೋಧಿಗಳಾಗಿದ್ದ ಹತ್ತೆಂಟು ಜನ ಹಳಬರನ್ನು ಬಿಟ್ಟರೆ ಈ ಊರಲ್ಲಿ ಇವನಿಗಾರೂ ವಿರೋಧಿಗಳಿಲ್ಲವೆಂದೂ ತಂಬಾಕು ತುಂಬಿದ ಬಾಯಿಂದ ಅಸ್ತವ್ಯಸ್ತವಾಗಿ ಮಾತಾಡಿ, ಬಳಿಕ ಪೀಕದಾಣಿಯಲ್ಲಿ ತಂಬುಲವನ್ನು ಉಗುಳಿ, ಒಡಕಣ್ಣನ ತಾಂಬೂಲಋಣದಿಂದ ಮುಕ್ತರಾದರು. ಗಂಗಾಧರರಾಯರು “ ಅಹೋರೂಪಮಹೋಧ್ವನಿಃ ” ಎಂದು ಮನದಲ್ಲಂದುಕೊಂಡು ತಲೆಯಲ್ಲಾಡಿಸಿದರು.

ಕೂಡಿದ ಗೆಳೆಯರು ಸುಮ್ಮನೆ ಕುಳಿತಾರೇಯೇ ? ಬಡಿಗರ ಭೀಮಣ್ಣನು ಬೋದಿನ ಮೇಲಿಟ್ಟ ಇಸ್ಪೇಟಿನ ಎಲೆಗಳನ್ನು ತೆಗೆದುಕೊಂಡು ಚಪ್ಪ

ರಿಸ ತೊಡಗಿದನು? ರಾಯರು ಕುಳಿತಲ್ಲಿಯೆ ತೂಕಡಿಸತೊಡಗಿದರು. ತ್ರಿವಿಕ್ರಮ ಭಟ್ಟರು, "ರಾಯರು ಬಹಳ ದಣಿದಾಂಗ ಕಾಣತದ. ಕೋಣಿ ಒಳಗ ಹಾಸೇದ; ಸ್ವಲ್ಪ ವಾಮಕುಕ್ಷಿ ಆಗಿ ವಿಶ್ರಾಂತಿ ತಗೊಳ್ರಿ" ಎಂದು ಅವರ ಕೈ ಹಿಡಿದು ಕೋಣೆಗೆ ಕರೆದೊಯ್ದರು.

ಅವರು ಎರಡುಗಂಟೆ ನಿದ್ದೆಮಾಡಿ ಎದ್ದಮೇಲೆ, ಒಡಕಣ್ಣಿನ ಸಂಜ್ಞೆಯ ಮೇರೆಗೆ ಸೆಟ್ಟರ ಬಸೆಟ್ಟೆಪ್ಪನು ಗಂಗಾಧರರಾಯರನ್ನು ಒಡಕಣ್ಣಿನ ತೋಟಕ್ಕೆ ಕರೆದುಕೊಂಡು ಹೋದನು.

ಗಂಗಾಧರರಾಯರ ಮನಸ್ಸಿಗೆ ನೆಮ್ಮದಿಯಿದ್ದಿಲ್ಲ. ಮಗಳ ಸ್ಥಿತಿಯನ್ನು ಕಂಡು ಅವರು ಕೊರಗಿದರು. ಬಿಸಿ ತುಪ್ಪ; ಕುಡಿದರೂ ಕಷ್ಟ, ಚೆಲ್ಲಿದರೂ ಕಷ್ಟ. ಏನು ಮಾಡಬೇಕು? ಏಳುಸಾವಿರ ರೂಪಾಯಿ ತೆತ್ತು, ಸಾಲದ ಶೂಲಕ್ಕೆ ಒಳಗಾಗಿ, ಇಷ್ಟು ಕಷ್ಟಪಟ್ಟರೂ ಮಗಳಿಗೆ ಸುಖವಾಗಲಿಲ್ಲ. ತಮಗೆ ಗಂಟು ಬಿದ್ದ ಅಳಿಯನು ಇನ್ನೂ ಗಂಟೆಬ್ಬಿಸುವ ಹೊಂಚನ್ನೇ ಹಾಕಿಕೊಂಡು ಕುಳಿತಿದ್ದಾನೆ!

ಈ ಯೋಚನೆಯ ಭರದಲ್ಲಿ ಕಾಲೊಳಗಿನ ಚಪ್ಪಲಿ ಎತ್ತೋ ಹೊರಟು ಹೋದವು. ರಾಯರಿಗೆ ಅದರ ಅರಿವೇ ಇಲ್ಲ. ಅವರು ತಮ್ಮ ಚಿಂತೆಯಲ್ಲಿಯೆ ಮುಳುಗಿದ್ದರು. "ಮುತ್ತಿನ ಬುಗುಡಿ, ಜೆಂಡೋಲೆ! ಇಲ್ಲವಾದರೆ ಮಗಳನ್ನು ಕಳಿಸುವುದಿಲ್ಲ" ಇಲ್ಲಿಯೆ ಬಿಟ್ಟು ಹೋದರೆ, ಇಂದುಮತಿಯು ನಾಲ್ಕಾರು ತಿಂಗಳಲ್ಲಿ ಸತ್ತು ಹೋಗುತ್ತಾಳೆ. ರಾಯರಿಗೆ ಮೈ ಜುಮ್ಮೆಂದಿತು ತಳ ಮಳವು ಹೆಚ್ಚಾದಂತೆ ಅವರು ದಿಗ್ಭ್ರಾಂತರಾದರು "ನನ್ನ ಅಳಿಯ ಕಟುಕ, ಕೊಲೆಗಡುಕ. ನಾನು ಮೋಸಹೋದೆ. ವತನದ ಮುಟ್ಟಿಗೆ ಬಿದ್ದು ಮಗಳ ಕುತ್ತಿಗೆ ಕೊಯ್ದು. ನಾನು ಮೂರ್ಖ! ನಾನು ಮೂರ್ಖ! ಏನು ಮಾಡಲಿ? ಎಂದು ಉದ್ವೇಗದಿಂದ ಅವರು ಹುಚ್ಚರಂತೆ ತೋಟದಲ್ಲಿ ಹರಿದಾಡ ಹತ್ತಿದರು.

ಕಾಲೊಳಗೆ ಎಷ್ಟೋ ಮುಳ್ಳು ನಟ್ಟವು; ಹಾಲವಾಳದ ಮುಂಡಿಗೆಯ ಮುಳ್ಳುಗಳಿಗೆ ಸಿಕ್ಕು, ಧೋತರ ಸೆಲ್ಲೆಗಳು ಹರಿದುಹೋದವು; ತಲೆಯ ಮೇಲಿನ ರುಮಾಲವು ಒಂದು ಕಿರುಗಂಟೆಗೆ ಸಿಲುಕಿ, ಅಲ್ಲಿಯೆ ಜೋತಾಡ ಹತ್ತಿತು. ಅವುಗಳ ಕಡೆಗೆ ಅವರ ಲಕ್ಷ್ಯವೇ ಇರಲಿಲ್ಲ. ಒಳಗಿನ ಗಾಢಾಂಧ ಕಾರದಲ್ಲಿ ಹೊರಗೆ ಕತ್ತಲೆಯಾದದ್ದೂ ಅವರಿಗೆ ಗೊತ್ತಾಗಲಿಲ್ಲ.

ಬಸೆಪ್ಪೆಪ್ಪನು, ಗಂಗಾಧರರಾಯರು ಅಳಿಯನ ತೋಟವನ್ನು ನೋಡಿ ಆನಂದದಿಂದ ತಿರುಗಾಡುತ್ತಿರುವರೆಂದು ಭಾವಿಸಿ, ತಾನು ತೋಟಿಗನೊಡನೆ ಗುಡಿಸಲಲ್ಲಿ ಹರಟೆಕೊಚ್ಚುತ್ತ ಕುಳಿತಿದ್ದನು. ಕತ್ತಲಾದರೂ ರಾಯರು ಬಾರದುದನ್ನು ಕಂಡು, ಅವರನ್ನು ಹುಡುಕಿಕೊಂಡು ಬರುವುದಕ್ಕೆ ತೋಟಿಗನನ್ನ ಕಳಿಸಿದನು. ತೋಟಿಗನು ಎಷ್ಟು ಕೂಗಿದರೂ ಪ್ರತ್ಯುತ್ತರವೇ ದೊರೆಯಿದ್ದರಿಂದ ಅವನು ಗಾಬರಿಯಾಗಿ ಎಲೆ ಬಳ್ಳಿಯ ಹೆಬ್ಬಲಿಯಲ್ಲಿ ಗಡಿಬಿಡಿಯಿಂದ ಧುಮುಕಿದನು. ಅಷ್ಟರಲ್ಲಿ ಗಂಗಾಧರರಾಯರೂ ಎದುರಿಗೆ ಬಂದರು. ಕಗ್ಗತ್ತಲೆಯಲ್ಲಿ ತೋಟಿಗನು ಒತ್ತರದಿಂದ ಬರುತ್ತಿದ್ದುದರಿಂದ ರಾಯರಿಗೆ ಧಡಾರನೆ ಹಾಯ್ದು ಬಿಟ್ಟನು. ರಾಯರು ಹಿಂದಕ್ಕೆ ಮುಕ್ಕರಿಸಿ ಕೆಸರಲ್ಲಿ ಈಜುಬಿದ್ದರು. ತೋಟಿಗನು ಗಾಬರಿಯಾಗಿ ಅವರನ್ನು ಕೈಹಿಡಿದೆಬ್ಬಿಸಿ, "ಅಪನೋರ! ನಾ ಕೂಗಾಕಹತ್ತಿ ಬ್ಯಾಳೊತ್ತಾತ್ರಿ. ನೀವು ಓಕೊಡಲಿಲ್ರೀ. ಅದಕ್ಕ ಗಡಿಬೀಡೀಲೆ ಹುಡುಕಾಕ ಹೊಂಟೆನ್ರೀ. ಕತ್ತಲ್ರೀ, ಎಲೀ ಮುರಿಸಿನ್ಯಾಗ! ನೀವು ಕಾಣಲಿಲ್ರೀ..... ನನ್ನ ತಪ್ಪು ಹೊಟ್ಯಾಗ ಹಾಕ್ಕೊಳ್ರೀ ಎಂದು ದೈನ್ಯೋಕ್ತಿಯಿಂದ ಹೇಳಿಕೊಂಡು ಗುಡಿಸಲಿಗೆ ಕರೆತಂದನು.

ಬಸೆಟ್ಟೆಪ್ಪನು ಗಂಗಾಧರರಾಯರ ಸ್ಥಿತಿಯನ್ನು ನೋಡಿ, "ಏನು ರಾಯರ, ಹೀಗ್ಯಾಕ ಆಗೀರಿ? ಎಲ್ಲಿ ಸಿಗಿಬಿದ್ದಿದ್ರೀ? ನಮ್ಮನ್ನಾರ ಓಟು ಕೂಗಬಾರದಿತ್ರೇ? ನಾವು ಬರತಿದ್ವಿ. ಹೀಗಿ ನಿಮ್ಮನ್ನು ಊರಾಗ ಕರಕೊಂಡು ಹೋದ್ರ ನಿಮ್ಮ ಅಳಿಂದ್ರು ನಮುಗ ಛೀ ಹಾಕಿಬಿಟ್ಟಾರು. ನಿಮ್ಮ ಪಾವಡಾ, ಕೆರವು ಎಲ್ಲಿ ಅದಾವ ಹೇಳ್ರಿ, ತರಸತೇನಿ" ಎಂದನು.

ಆಗ ರಾಯರ ಮೈಯಲ್ಲಿ ಸ್ವಲ್ಪ ಎಚ್ಚರ ಬಂದು, ಅವರು, "ತೋಟದಾಗ ತಿರುಗಾಡುವಾಗ ಪಿತ್ತ ನೆತ್ತಿಗೇರಿ ಮೈಮ್ಯಾಲ ಎಚ್ಚರಿಲ್ಲಧಾಂಗಾತು. ನನ್ನ ಸಾಮಾನು ಎಲ್ಲಿ ಹೋದವೂ ನನಗ ಅರಿವಿಲ್ಲ ಈ ಕತ್ತಲಾಗ ಅವನ್ನ ಹುಡುಕೋದೂ ಅಸಾಧ್ಯ. ಹೊತ್ತುಕೊಂಡ ಶೆಲ್ಲೆ ಉಟ್ಟುಕೊಂಡು ಬರತೇನಿ. ನಾಳೆ ಅವನ್ನ ತರಿಸಿಕೊಡಿರಿ" ಎಂದು ದೈನ್ಯದಿಂದ ಉತ್ತರವಿತ್ತರು.

ತೋಟಗನನ್ನು ಮುಂದೆಮಾಡಿಕೊಂಡು ೭ ಸೆಟ್ಟೆಪ್ಪನೂ ರಾಯರೂ ಎರಡು ತಾಸು ರಾತ್ರಿಯ ಹೊತ್ತಿಗೆ ಮನೆಯ ಹಾದಿ ಹಿಡಿದರು.

ಗಂಗಾಧರರಾಯ ತಿರುಗಾಡಲಿಕ್ಕೆ ಹೋದಮೇಲೆ ಚಂದ್ರಾವತಿ ಬಾಯಿಯವರು ಒಡಕಣ್ಣನನ್ನು ಹಿತ್ತಿಲಲ್ಲಿ ಕರೆದೊಯ್ದು, " ನಿಮ್ಮ ಮಾವ ಮಗಳ್ನ ಕರೀಲಿಕ್ಕೆ ಬಂದಾನ. ಊಟಕ್ಕ ಕೂತಾಗ ನಾನೂ ಮುಂಗಾಲಪುಟಿಗಿ ಮಾತು ಹೊಡದೇನಿ. ಮುನ್ನೂರು ರೂಪಾಯಿ ಒಡವಿ, ಒಂದು ಚಲೋ ಸೀರಿ ಅನಾಯಾಸ ಸಿಗತಾವ. ಆಕಿನ್ನ ತವರುಮನಿಗೆ ಕಳಿಸೊದು ಒಂದು ರೀತಿಯಿಂದ ನಮಗೆ ಲಾಭನ ಅದ. ಆಕಿ ಇಲ್ಲಿದ್ದು ಮಾಡೊ ಸಡಗರಾನೂ ಅಷ್ಟನ ಅದ. ದುಡ್ಡು ಎತ್ತಲಿಕ್ಕೇ ಈ ಸರ್ವಾರಿಪ್ಪ ಹೆಣ್ಣು ಮಾಡಿಕೊಂಡೀದಿ ಗಟ್ಯಾಳ್ಳಮಾವ ಸಿಕ್ಕಾನ. ಒಂದೊಂದ ನೆವ ಮುಂದಮಾಡಿ ಅವನ್ನ ಸುಲಿದು ಬಿಟ್ಟರ ತೀರಿತು " ಎಂದು ತಮ್ಮ ಮನೋಗತವನ್ನೆಲ್ಲ ಬಿಚ್ಚಿಹೇಳಿ, ಗಂಗೆಯನ್ನು ತವರೂರಿಗೆ ಕಳಿಸುವುದಕ್ಕೆ ಒಡಕಣ್ಣನ ಒಪ್ಪಿಗೆಯನ್ನು ಪಡೆದರು. ಬಳಿಕ ಒಡಕಣ್ಣನು ಹೊರಗೆಹೋಗಿ, ಮಾವಂದಿರ ಮಾರ್ಗಪ್ರತೀಕ್ಷೆ ಮಾಡುತ್ತ ಕುಳಿತನು.

ಕಗ್ಗತ್ತಲೆಯಾದರೂ ಗಂಗಾಧರರಾಯರು ಬಾರದುದನ್ನು ನೋಡಿ ಒಡಕಣ್ಣನು "ಯಾಕೆ ಬಂದಿರಲಿಕ್ಕಿಲ್ಲ? ನನ್ನ ವೈರಿಯಾದ ಆ ಕಲ್ಲಂಭಟ್ಟ ಅವರ್ನ ಕರಕೊಂಡು ಹೋಗಿರಬಹುದೇನು? ಛೆಛೇ! ನಮ್ಮ ಬಸೆಟ್ಟೆಪ್ಪ ಸಂಗತೀಲಿರುವಾಗ ಆದೆಂದಿಗೂ ಆಗದ ಮಾತು" ಎಂದು ಚಿಂತಿಸುತ್ತಿರುವಷ್ಟರಲ್ಲಿ ಅಸ್ತವ್ಯಸ್ತವಾದ ಅರಿವೆಗಳನ್ನು ಹಾಕಿಕೊಂಡ ಗಂಗಾಧರರಾಯರು ಅಲ್ಲಿಗೆ ಬಂದರು. ಬಸೆಟ್ಟೆಪ್ಪನು ತೋಟದಲ್ಲಾದ ಪ್ರಮಾದವನ್ನೆಲ್ಲಾ ವಿಸ್ತರಿಸಿ ಹೇಳಿದನು. ಬಳಿಕ ಸ್ವಲ್ಪ ಹೊತ್ತು ಹರಟೆಕೊಚ್ಚಿ ಬಸೆಟ್ಟೆಪ್ಪನು ಹೊರಟುಹೋದನು. ರಾಯರೂ ಒಡಕಣ್ಣನೊಡನೆ ಊಟಕ್ಕೆದ್ದರು.

ಭೋಜನವಾದ ಮೇಲೆ ರಾಯರು ಚಂದ್ರಾವತಿಬಾಯಿಯವರಿಗೆ "ನಿಮ್ಮ ಸೊಸಿನ್ನ ನಾಳೆ ಮುಂಜಾನೆ ಕಳಿಸಿಕೊಡಬೇಕು" ಎಂದು ವಿನಯದಿಂದ ಹೇಳಿಕೊಂಡರು. ಬಾಯಿಯವರು, "ನಾಗರಪಂಚಮಿ ಹೆಣ್ಣುಮಕ್ಕಳಿಗೆ ದೊಡ್ಡ ಹಬ್ಬ. ತವರುಮನಿವಳಗ ನಾಕು ದಿನ ಚಕ್ಕಂದದಿಂದ ಇದ್ದು ಬರಬೇಕು ಅಂತ ಹೆಣ್ಣುಮಕ್ಕಳಿಗೆಲ್ಲಾ ಇಚ್ಛಾ ಇರೋದ ಆಗಲಿ, ಕರ

ಕೊಂಡು ಹೋಗ್ರಿ. ಆದರ ನಿಮ್ಮ ಇಂದೂನ್ನ ಈಗಿದ್ಹಾಂಗ ಕಪ್ಪು ಮೋರೀಲೆ ಕಳಸಬ್ಯಾಡ್ರಿ ಮುತ್ತಿನ ಬೆಳಕು ಆಕೀ ಮೋರೀಮ್ಯಾಲೆ ಬೀಳೋಹಾಂಗ ಮಾಡಿ ಕಳಿಸಿರಿ. ಇಷ್ಟು ನನ್ನ ಇಚ್ಛಾ" ಎಂದು ಗಂಭೀರವಾಗಿ ನುಡಿದರು. ರಾಯರೂ ಒಪ್ಪಿಕೊಂಡರು.

ಬೆಳಗಾಗುತ್ತಲೆ ಬಾಯಿಯವರು ಎದ್ದು, ಲಗುಬಗೆಯಿಂದ ಅಡುಗೆ ಮಾಡಿದರು. ಒಡಕಣ್ಣನು ವಸ್ತ್ರಾಭರಣಗಳನ್ನೆಲ್ಲ ತೆಗೆದುಕೊಟ್ಟನು. ಫಲ ಶೋಭನ ಪ್ರಸ್ತವಾದ ಮೇಲೆ ಗಂಗೆಯು ವಸ್ತ್ರಾಭರಣಗಳು ಹೊರಬಿದ್ದದ್ದು ಇದೇ ಮೊದಲು. ಆಗ ಗಂಗೆಯು, "ಇವನ್ನೆಲ್ಲಾ ನಾ ತವರೂರಿಗೆ ಒಯ್ಯೋ ದಿಲ್ಲ" ಎಂದು ತಲೆತಗ್ಗಿಸಿಕೊಂಡು ಮೆಲ್ಲನೆ ನುಡಿದಳು. ಅದಕ್ಕೆ ಅತ್ತೆಯ ವರು, "ಚಪಿರೀ ಉಟ್ಟು ಚಿಂದೀ ಮ್ಯಾಲೇ ತವರುಮನಿಗೆ ಹೋಗಿ ಯಾರ ಮರ್ಯಾದಿ ಕಳೀಬೇಕಂತ ಮಾಡೀದಿ? ನಿನ್ನ ತಾಯಿ ಬುಗುಡೀ ಬೆಂಡೋಲೀ ಕೊಡದಿದ್ರ ನಮ್ಮ ಪ್ಯಾಲ್ಯಾಕ ಸೆಟಗೋತೀದಿ? ಹೆಣಮಕ್ಕಳಿಗೆ ವಸ್ತಾ ಒಡಿವೀ ಮಾಡಿಸಿಕೊಡಬೇಕಂಬೋ ಅರಿವು ನಿಮ್ಮ ತಾಯಿಗೆ ಇರಬಾರದ? ನಾವು ನಿನ್ನ ಮೈಮ್ಯಾಲ ಮೂರು ಸೇರು ಭಂಗಾರ ಇಟ್ಟೇವಿ. ಇದಕ್ಕ ಒಪ್ಪೋ ಹಾಂಗ ಕೊರಳಿಗೆ, ಕಿವಿಗೆ, ಈಸಾರೆಯಾದ್ರೂ ವಸ್ತಾ ಮಾಡಿಸಿ ಕೊಂಡು ಬಾ. ನಾನೂ ನಿಮ್ಮ ತಂದೆಯವರಿಗೆ ಹೇಳತೇನಿ. ಮತ್ತ ಈಗ ಕೊಟ್ಟಿರೋ ವಸ್ತಾವಡವೀ ಕಟ್ಟಿಕೊಂಡು ಹೋಗಿ, ಜತನಾಗಿ ತಿರುಗಿ ತಗೊಂಡು ಬಾ" ಎಂದು ಹೊರಗಿದ್ದ ಗಂಗಾಧರರಾಯರಿಗೆ ಕೇಳಿಸುವಂತೆ ದೊಡ್ಡ ಧ್ವನಿಯಿಂದ ಹೇಳಿದರು, ಗಂಗೆಯು ನಿರ್ವಾಹವಿಲ್ಲದೆ ಆ ಆಭರಣ ಗಳನ್ನೆಲ್ಲ ಕಟ್ಟಿಕೊಂಡಳು.

ನಾಲ್ಕು ತಾಸಿಗೆ ಊಟಮುಗಿಸಿ, ಚಕ್ಕಡಿಗೆ ಎತ್ತುಹೂಡಿಸಿ, ರಾಯರು ಗಡಿಬಿಡಿಮಾಡಿ ಗಂಗೆಯನ್ನು ಎಬ್ಬಿಸಿದರು, ಗಂಗೆಯು ಗಂಡನಿಗೂ ಅತ್ತೆಯವ ರಿಗೂ ನಮಸ್ಕರಿಸಿ, ತವರೂರಿಗೆ ಹೊರಟಳು,

ಲಕ್ಷ್ಮೀಪುರದಲ್ಲಿ ತವರೂರಿಗೆ ಬರುವ ಹೆಂಗಳೆಯರ ಚಕ್ಕಡಿಗಳ ಸುಳಿದಾಟವೇ ಸುಳಿದಾಟ. ಇಂದುವಿನ ಗೆಳತಿಯರೆಲ್ಲರೂ ತವರುಮನೆಗೆ ಬಂದಿದ್ದಾರೆ. ಅವರು ಗಂಗಾಧರರಾಯರ ಮನೆಗೆ ಬಂದು "ನಿಮ್ಮ ಇಂದು ಬಂದಾಳೇನು?" ಎಂದು ಒಬ್ಬೊಬ್ಬರೇ ಕೇಳಹತ್ತಿದ್ದಾರೆ. ಗಂಗಾಧರ

ರಾಯರ ಹೆಂಡತಿ ಭಾಗೀರಥಿಬಾಯಿಯವರು "ಇಲ್ಲ, ಇಲ್ಲ" ಎಂದು ಹೇಳಿ ಹೇಳಿ ಬೇಸತ್ತಿದ್ದಾರೆ. ತಮ್ಮ ಮಗಳು ಇಂದು ಮಧ್ಯಾಹ್ನ ಬರಬಹುದೆಂಬ ಉತ್ಕಂಠತೆಯಿಂದ ಅವರುಅಡಿಗೆಯನ್ನು ಸಹಮಾಡಿಬಿಟ್ಟಿದ್ದಾರೆ, ಆರೇಳುತಾಸು ಹೊತ್ತಾದರೂ ಚಕ್ಕಡಿಯು ಬಾರದುದರಿಂದ ಅಡುಗೆಮನೆಯಿಂದ ತಲೆಬಾಗಿಲಿನವರೆಗೆ ಸುಳಿದಾಡುತ್ತಿದ್ದಾರೆ. ದೂರದಲ್ಲಿ ಚಕ್ಕಡಿಯ ಸಪ್ಪಳವಾಗಲಿ ಎತ್ತಿನ ಕೊರಳಗಂಟೆಯ ಸದ್ದಾಗಲಿ ಕೇಳಿದೊಡನೆ ಅತ್ತಕಡೆಗೆ ದಿಟ್ಟಿಸಿ ನೋಡುತ್ತ ನಿಲ್ಲುವರು, ಬಂದ ಚಕ್ಕಡಿಗಳು ತಮ್ಮ ಮನೆಯ ಕಡೆಗೆ ಬರದೇ ದೂರದಿಂದಲೇ ಹೊರಳಿಹೋಗುವವನ್ನು ಕಂಡು ನಿರಾಶೆಹೊಂದುವರು.

ಹೀಗೆ ಹತ್ತು ತಾಸು ಹೊತ್ತಾಗುವವರೆಗೆ ಹಾದಿ ನೋಡಿದರು ಬಳಿಕ ಬೇಸತ್ತು ಇನ್ನು ಬರುವ ಹೊತ್ತುಮೀರಿತೆಂದು ಅಡುಗೆ ಮನೆಗೆ ಹೋಗಿ ಊಟಕ್ಕೆ ಕುಳಿತರು. ಅಷ್ಟರಲ್ಲಿ ಹೊರಗೆ ಗೆಜ್ಜೆಗಳ ಸಪ್ಪಳವಾಗಲು, ಅವರು ಹಾಗೆಯೆ ಊಟ ಬಿಟ್ಟಿದ್ದು ಹೊರಗೋಡಿ ಬಂದರು. ಬಂದ ಚಕ್ಕಡಿಯು ಮುಂದೆ ಸಾಗಿತು. ಆಗ ಭಾಗೀರಥಿಬಾಯಿಯವರು ಮಾಡಿದ ಅಡುಗೆಯನ್ನೆಲ್ಲ ಮುಚ್ಚಿಟ್ಟು, ಹೊರಕೆಬಂದು, ಪಡಸಾಲಿಯಲ್ಲಿ ಕುಳಿತುಕೊಂಡರು.

ಹೊತ್ತು ಮುಳುಗಿದರೂ ತಮ್ಮ ಚಕ್ಕಡಿಯು ಬಾರದುದರಿಂದ ಅವರು ಚಿಂತೆಗೊಳಗಾದರು. ತಾಸು ರಾತ್ರಿಯ ಹೊತ್ತಿಗೆ ಅವರ ಚಕ್ಕಡಿಯು ಮನೆಯ ಮುಂದೆ ಬಂದು ನಿಂತಿತು- ಬಾಯಿಯವರು ತಲೆಬಾಗಿಲಿಗೆ ಬಂದರು. ಇಂದುಮತಿಯು ಚಕ್ಕಡಿಯಿಂದ ಇಳಿದು ಬಂದು ತಾಯಿಗೆ ನಮಸ್ಕರಿಸಿದಳು. ಮಗಳನ್ನು ಕಂಡೊಡನೆ ಭಾಗೀರಥಿಬಾಯಿಯವರು ಪ್ರತ್ಯಕ್ಷ ಭಾಗೀರಥಿಯೇ ಆಗಿಬಿಟ್ಟರು. ಆಗ ಗಂಗಾಧರರಾಯರು "ಇಂದೂ ನಮ್ಮ ಮನಿಗೆ ಬಂದದ್ದು ನಮ್ಮ ಪೂರ್ವಾರ್ಜಿತ ಪುಣ್ಯ. ತಲೆಬಾಗಿಲದಾಗ ನಿಂತು ಅಳಬ್ಯಾಡ ಒಳಗನಡಿ" ಎಂದು ಬೆದರಿಸಿದರು.

ತಾಯಿಯು ಮಗಳೊಡನೆ ನಡುಮನೆಗೆ ಬಂದಳು ಇಂದುಮತಿಯು ತಾಯನ್ನು ಸಂತೈಸಿ, "ಅವ್ವಾ ಅಳಬ್ಯಾಡ ನನಗೇನಾಗೇದ? ಅತ್ತೆವರ ಪ್ರೀತಿ ನನ್ನ ಮ್ಯಾಲೆ ಬಹಳ. ಅವರಿಗಂತೂ ನಾನು ಚಿನ್ನದ ಕಣಿ ಆಗೇನಿ. ಈಗ ಎಂಟು ದಿನದಿಂದ ಶೆಟ್ಟಿ ಜ್ವರ ಬಂದು, ಕೂಳು ನೀರು ಇಲ್ಲದ ಬಿದ್ದದ್ದಕ್ಕೆ ಸ್ವಲ್ಪ ಸೊರಗೇನಿ. ಇನ್ನು ವರ್ಷಾರು ತಿಂಗಳದಾಗ ನನ್ನ ವಿಷಯಕ್ಕ

ನೀನು ನಿಶ್ಚಿಂತಳಾಗಿರತೀದಿ' ಎಂದು ತನ್ನ ಇರುವಿಕೆಯನ್ನು ಪ್ರಿಯವಾದ ಸತ್ಯವಾದ ಮಾತಿನಲ್ಲಿ ವ್ಯಕ್ತಪಡಿಸಿದಳು. ಇಂದುಮತಿಯ ಮಾತಿನ ಮರ್ಮವನ್ನು ತಿಳಿಯದೆ ಭಾಗೀರಥಿಬಾಯಿಯವರು ಸಮಾಧಾನಹೊಂದಿದರು.

ಆ ಮೇಲೆ ಬಿಸಿ ಅಡುಗೆ ಮಾಡಿ, ಅವರು ತಮ್ಮ ಪತಿಗೂ, ಮಗಳಿಗೂ ಊಟಕ್ಕೆ ಹಾಕಿ, ಬಳಿಕ ತಾವೂ ಊಟ ಮಾಡಿ, ಮಗಳೊಡನೆ ಮಾತಾಡುತ್ತ ಮಲಗಿದರು.

## ೬. ಬಂಗಾರದ ಕಣಿ

ನಾಗರಚವತಿ ಹೆಂಗಳೆಯರಿಗೆಲ್ಲ ಒಳ್ಳೆಯ ಅಬ್ಬರದ ಹಬ್ಬ. ಎಲ್ಲರ ಮನೆಯಲ್ಲಿ ಎರೆದುಕೊಳ್ಳುವ ಸಡಗರ; ಹುಡುಗರಿಗೆಲ್ಲ ತಂಬಿಟ್ಟಿನ ಉಂಡಿಯನ್ನು ಹೊಡೆಯುವ ಹಂಬಲ; ತರುಣಿಯರಿಗೆ ಹೊಸ ಬಟ್ಟೆಗಳನ್ನೂ, ಆಭರಣಗಳನ್ನೂ ಇಟ್ಟುಕೊಳ್ಳುವ ಉತ್ಸಾಹ. ಹೊಸದಾಗಿ ಅತ್ತೆಯ ಮನೆಯಿಂದ ಬಂದ ವನಿತೆಯರ ವೈಭವಕ್ಕಂತೂ ಎಣೆಯಿಲ್ಲ. ಭಾಗೀರಥೀಬಾಯಿಯವರು ಅಂದು ಬೆಳಗಾಗುವದರೊಳಗಾಗಿ ಇಂದುಮತಿಗೆ ಎಣ್ಣೆಹೂಸಿ ಎರೆದು, ಅನೇಕ ವಸ್ತ್ರಾಭರಣಗಳಿಂದ ಅಲಂಕರಿಸಿದರು. ಮಗಳ ಗಂಡನ ಮನೆಯ ಶ್ರೀಮಂತಿಕೆಯನ್ನು ಊರ ಹೆಂಗಳೆಯರಿಗೆಲ್ಲ ತೋರಿಸಬೇಕೆಂಬ ಹಂಬಲದಿಂದ ಭಾಗೀರಥಿಬಾಯಿಯವರು ಇಂದುಮತಿಗೆ ಅತ್ತೆಯ ಮನೆಯ ವರಿಟ್ಟ ಸೇರಿನ ಒಂಕೆ, ಸೇರು ತೂಕದ ಗೋಟು ಪಾಟಲಿ, ಅರ್ಧಸೇರಿನ ಸರಿಗೆ, ಇಪ್ಪತ್ತು ತೊಲೆಯ ಬಂಗಾರದ ಪಟ್ಟಿ ಮೊದಲಾದುವನ್ನು ಇಟ್ಟಿದ್ದಲ್ಲದೆ, ತಮ್ಮ ಮನೆಯ ಗೆಜ್ಜೆಯ ಟೀಕೆ, ಮನೋಹರಮಾಲೆ, ತೋಡೆ, ಮುತ್ತಿನ ಬುಗುಡಿ, ಬೆಂಡೋಲೆ, ಹೆರಳಬಂಗಾರ, ಪದಕದ ಸರಗಳನ್ನೂ ಹಾಕಿದರು. ಹನ್ನೆರಡು ಸೇರಿನ ಸರಪಳಿ, ಆರು ಸೇರಿನ ಪೈಜಣಗಳನ್ನೂ ಕಾಲಿಗೆ ತೊಡಕಿಸಿದರು

ಪಾಪ! ಇಂದುಮತಿಗೆ ಈ ಎಲ್ಲ ಆಭರಣಗಳ ಭಾರವನ್ನು ಹೊತ್ತುಕೊಂಡು ತಿರುಗುವ ತ್ರಾಣವೀಗ ಉಳಿದಿರಲಿಲ್ಲ. ಆದರೂ ತಾಯಿಯ ಮನಸ್ಸನ್ನು ನೋಯಿಸಬಾರದೆಂದು ಅದೆಲ್ಲವನ್ನೂ ಸಹಿಸಿದಳು, ತಾಯಿಯು

ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು, ಮಗಳೊಂದಿಗೆ ನಾಗಪೂಜೆಗೆ ಹೊರಟಳು. ಇಂದುಮತಿಯು ನಾಲ್ಕಾರು ತಿಂಗಳಿಂದ ಆಭರಣಗಳನ್ನೇ ಇಟ್ಟಿರಲಿಲ್ಲ. ಸರಪಣಿ ಪೈಜಣಗಳ ಭಾರದಿಂದ ಕಾಲುಗಳನ್ನು ಎತ್ತಿಡು ಷ್ಟವೆನಿಸಿತು; ಮೈಮೇಲಿನ ಆಭರಣಗಳ ಗೌರವಕ್ಕೆ ಕೈ ; ಶಿರಬಾಗಿತು. ಅವಳು ಸಾವಕಾಶವಾಗಿ ನಡೆಯುತ್ತಾ ಬ್ರಹ್ಮದೇವರ ಗುಡಿಗೆ ನಾಗಪೂಜೆಗೆ ಬಂದಳು.

:ಕ ಸ್ತ್ರೀಯರು ಪೂಜೆಗೆ ಬಂದಿದ್ದರು. ಅವರು ದೂರದಿಂ ಯನ್ನು ನೋಡಿ, "ಇವಳು ದೇಶಪಾಂಡೇರ ಮಗಳಲ್ಲ? ಎಷ್ಟು ಸೊರಗ್ಯಾಳ, ಏನು ವಿಚಿತ್ರ! ಮೇಲಿನ ಆಡಂಬರಾನ ಬಹಳ ಅದ; ಒಳಗ ಹುರುಳಿಲ್ಲಾಂತ ಕಾಣ್ತದ. ಬರಲಿ,— ಎಲ್ಲಾ ಹೊರಗೆಹವೋಣ" ಎಂದು ಹೊಂಚುಹಾಕಿ ಕುಳಿತರು.

ಭಾಗೀರಥಿಬಾಯಿಯವರು ಅಲ್ಲಿಗೆ ಬಂದು, ಮಗಳ ಕೈಯಿಂದ ನಾಗ ಪೂಜೆ ಮಾಡಿಸಿ, ತಂಬಿಟ್ಟಿನ ನೈವೇದ್ಯವಿಟ್ಟು, ಗಂಡನಮನೆಯ ಬಳಗದ ವರ ಹೆಸರನ್ನೆಲ್ಲಾ ಅವಳಿಂದ ಎನ್ನಿಸಿ, ನಾಗಪ್ಪನಿಗೆ ಹಾಲೆರೆಸಿದರು. ಬಳಿಕ ತಾವೂ ಪೂಜೆಮಾಡಿದರು.

ಅಷ್ಟರಲ್ಲಿ ಇಂದುಮತಿಯ ಗೆಳತಿಯಾದ ಸಾವಿತ್ರಿಯು ಮುಂದೆಬಂದು, "ಏನ ಇಂದು! ನಿನ್ನ ಗತಿ ಹೀಂಗ್ಯಾಕ ಆಗೇದ? ಅತ್ತಿಮನಿಗೆ ಹೋಗಿ ಹೊಟ್ಟೆಬ್ಯಾನಿ ಹಚ್ಚಿಕೊಂಡಿದೋ ಏನು? ನಿಮ್ಮಪ್ಪ ನಾಕುಸಾವಿರರೂಪಾಯಿ ಕೊಟ್ಟು ದೊಡ್ಡ ದೇಸಾಯರ ಮನಿಗೆ ನಿನ್ನ ಕೊಟ್ಟಾನ. ಅವರು ನಿನ್ನ ಸಂಪುಷ್ಟಕ್ಕ ಹಾಕಿ ಕಳಸೂವರಲ್ಲ. ಅಲ್ಲs, ನನ್ನ ಬಡವರ ಮನಿಗೆಕೊಟ್ರೂ ಅಂತ ನನ್ನ ತಂದಿನ್ನ ಎಷ್ಟು ಹೀಯಾಳಸತಿದ್ದೀ ನಾ ಇಲ್ಲಿ ಇದ್ಧಾಂಗನs ನಾನು ಅಲ್ಲ್ಯೂ ಇದ್ದುಬಂದೀನಿ. ನೀ ಸೊರಗಿ ಸಾಯಲಾಗಿ ಬಂದೀದಿ. ನಿಮ್ಮ ವರ ಶ್ರೀಮಂತಿಕಿ ಸುಡಲಿ!" ಎಂದು ಹಂಗಿಸಿದಳು.

ಅದಕ್ಕೆ ಇಂದುಮತಿಯು, "ನಾನೂ ನಿನಗಿಂತ ಸುಖದಿಂದ ಇದ್ದೆ. ಮೊನ್ನೆ ಕೆಟ್ಟ ಜ್ವರ ಬಡಿದು ಸೊರಗೇನಿ. ಅದಕ್ಕೇನು ಮಾಡೋದು?" ಎಂದು ಉಸಿರ್ಗರೆದಳು. ಅಲ್ಲಿಯೇ ಕುಳಿತ ಸೀತೆಯು (ಅವಳೂ ಗೆಳತಿಯೆ) ಬಾಯಿ:ಹಾಕಿ "ಎಲ ಎಲ! ಇಂದೂನ ಮಾರಿ ನೋಡ್ರೆ ಒಂದಿಷ್ಟು— ಬ್ಯಾನಿ

ಕಳೆ ಒಂದಾರ ಅದನ್ನ ಈಕಿ ಎಲ್ಲಾ ಬಿಚ್ಚಿಟ್ಟು ಹೇಳತಾಳ. ಈಕೀ ಗಂಡನ ಮನೀ ಸುದ್ದಿಲ್ಲಾ ನನಗ ತಿಳಿದದ. ಈಗ ತಿಂಗಳ ಹಿಂದ ಬೊಮ್ಮೀಗೇರಿ ಯಿಂದ ಒಬ್ಬ ಬ್ರಾಹ್ಮಣರು ನಮ್ಮ ಮನಿಗೆ ಬಂದಿದ್ದರು. ಅವರು ನಮ್ಮವರ ಮುಂದ ಈಕೀ ಪತಿಯ ಪ್ರಥಾವಾನೆಲ್ಲಾ ಬಿಚ್ಚಿಹೇಳಿದರು. ಅದನ್ನ ಕೇಳಿ ನನ್ನ ಮೈ ಮ್ಯಾಲೆ ಮುಳ್ಳು ಬಂದವ್ರೆವ್ವಾ! ಜೀವಕ ಸುಖಾ ಇಲ್ಲದ ದೊಡ್ಡಸ್ತಿಕಿ ಸುಟ್ಟರ ಸೈ. ಈಕಿಕಿಂತ ನಮ್ಮ ಸ್ಥಿತೀನss ಮೇಲು. ದೊಡ್ಡಿಸ್ತ ನಕ ಹೋಗಿ ಗುಡ್ಡಕ್ಕ ತೆಕ್ಕಿ ಹಾಕಿದರಂತ. ಮ್ಯಾಲಿನ ಆಡಂಬರಕ್ಕ ಮರು ಳಾದವರ ಸ್ಥಿತಿ ಹೀಂಗಾಗೂದss ಸೈ" ಎಂದು ನಿಷ್ಠುರವಾಗಿ ನುಡಿದುಬಿಟ್ಟಳು.

ಆಗ ಇಂದುಮತಿಯು "ನಮ್ಮೂರ ಬ್ರಾಹ್ಮಣರಾಗ ಎರಡು ಬಣ ಆಗ್ಯಾವ. ಆಗದವುಂದಿ ಏನಾದ್ರೂ ಅಸಹ್ಯ ಮಾತು ಆಡಿದ್ದರೂ ಆಡಿರಬ ಹುದು. ಮಂದಿಯ ದೊಡ್ಡಸ್ತಿಕಿ ನೋಡಿ ಮರುಗೋ ಜನ ಬಹಳ. ಆನಿ ಹೋಗತಿದ್ದರ ನಾಯಿ ಬೊಗಳತಾವ ಅದನ್ನ ಬಿಡಿಸೋರ್‍ಯಾರು?" ಎಂದು ಗಂಭೀರವಾಗಿ ಮಾತಾಡಿದಳು.

ಸೀತೆ ಮತ್ತೆ ಮಾತೆತ್ತಿದಳು. "ಸೈಸೈ? ಗಂಡನ ದೊಡ್ಡಸ್ತಿಕೀನ ಹೆಂಡತಿ ಬಣ್ಣಿಸೋದು ಯಥಾಯೋಗ್ಯ. ಅಲ್ಲಾ, ಮತ್ತ ನಿಮ್ಮವರಿಗೆ ಊರವರು ಒಡಕಣ್ಣ ಅಂತ ಕರೀತಾರಂತಲ್ಲಾ— ಅದ್ಯಾಕ?"

ಇನ್ನು ಮಾತಿಗೆ ಮಾತು ಬೆಳೆದರೆ ತನ್ನ ಗಂಡನ ಕತೆಯಲ್ಲಾ ಬಯ ಲಿಗೆ ಬೀಳಬಹುದೆಂದು ಬೆದರಿ, ಇಂದುಮತಿಯು "ಅದ್ಯಾವುದೂ ನನಗ ಗೊತ್ತಿಲ್ಲ" ಎಂದು ನಾಚಿಕೆಯಿಂದ ನುಡಿದು, ತನ್ನ ತಾಯೊಡನೆ ಮನೆಯ ಮಾರ್ಗಹಿಡಿದಳು.

ಕರ್ನಾಟಕದ ನಾಗಹಬ್ಬದ ಅಬ್ಬರ ಬಹಳ. ಮಲೆನಾಡಿನ ಹಳ್ಳಿಗಳಲ್ಲಿ ಯಂತೂ ಇದಕ್ಕೆ ಹೆಚ್ಚಿನ ಮಹತ್ವ. ಹೀಗಿರುವುದು ದ್ರಾವಿಡ ನಾಗಪೂ ಜೆಯ ಪರಂಪರೆಯಾಗಲಿ, ನಾಗರಹಾವಿನ ಭಯನಿವಾರಣೆಯಾಗಲಿ ಇರಬ ಹುದು. ನಾಗರಚೌತಿಯ ದಿನ ನಾಗವೇಣಿಯರೆಲ್ಲ ಉಪವಾಸ ಮಾಡು ವರು. ಮಲೆನಾಡಿನ ಸುಮಂಗಲೆಯರು ಪುರುಷರನ್ನೂ ತಮ್ಮ ಜೊತೆಗೆ ಎಳೆಯುವರು. ಅಂದಿನ ಫಲಹಾರದಲ್ಲಿ ನವಣೆಯ ತಂಬಿಟ್ಟಿಗೆ ಮಹತ್ವ

ಹೆಚ್ಚು; ಇದನ್ನು ನಾಗಪ್ಪನಿಗೆ ಎಡೆಮಾಡಲೇಬೇಕು. ಇದರ ಜೊತೆಗೆ ಅರಳಿನುಂಡೆ, ಎಳ್ಳಿನುಂಡೆ, ಕಡಲೆಯ ಉಂಡೆಗಳು; ನಾಲ್ಗೆಯ ರುಚಿಗೆ ಚಿರಕುಳ್ಳಿ. ಕಡಲೆಯ ಉಸುಳಿಗಳು. ಹಪ್ಪಳ ಸಂಡಿಗೆ, ಒಗ್ಗರಣೆಯ ಅವಲಕ್ಕಿಗಳು. ಇವುಗಳನ್ನೆಲ್ಲ ಯಥೇಚ್ಛವಾಗಿ ಜಡಿದು, ಸಂಜೆಯವರೆಗೆ ನೀರು ಕುಡಿಯಹತ್ತುವದು; ಸಾಯಂಕಾಲಕ್ಕೆ ಮತ್ತೆ ಉಳಿದವುಗಳನ್ನು ಮುಕ್ಕಿ ಮಲಗುವುದು.

ನಮ್ಮ ಇಂದುಮತಿಗೂ ಭಾಗೀರಥಿಬಾಯಿಯವರು ಇದೇ ಫಲಾಹಾರವನ್ನು ಮಾಡಿಸಿದರು. ಅತ್ತೆಯ ಮನೆಯಲ್ಲಿ ಅರಹೊಟ್ಟೆ ಉಂಡುಂಡು ಇಂದುಮತಿಯ ವಡವಾಗ್ನಿಯು ಮಂದವಾಗಿತ್ತು. ತಾಯಿಯ ಆಗ್ರಹಕ್ಕೂ ಬಾಯಸವಿಗೂಬಿದ್ದು ನಾಗರಚೌತಿಯ ಉಪಹಾರದ ಜೀನಸುಗಳನ್ನೆಲ್ಲ ಆಕೆಯು ಮನಸ್ವೀಹೊಡೆದಳು. ಅವಳಿಗೆ ಅವು ಅರಗಲಿಲ್ಲ ರಾತ್ರಿಯಲ್ಲಿ ಹೊಟ್ಟೆಯುಬ್ಬಿ ಸವಿಸಿಪಡುತ್ತ ಹಾಸಿಗೆಯಮೇಲೆ ಹೊರಳಾಡಹತ್ತಿದಳು, ಆರುತಾಸು ರಾತ್ರಿಗೆ ವಾಂತಿಭ್ರಾಂತಿಗಳು ಆರಂಭಿಸಿದುವು. ಉಟ್ಟಬಟ್ಟೆಯ ಎಚ್ಚರವುಳಿಯಲಿಲ್ಲ. ಭಾಗೀರಥಿಬಾಯಿಯವರು ಮಗಳಿಗೆ ದುರಗಿಯ ಬೇನೆ (ಮಾರಿಕಾ) ಬಂತೆಂದು ಗಾಬರಿಯಾದರು ಬೆಳಗಾಗುತ್ತಲೆ ವೈದ್ಯನು ಬಂದು ನೋಡಿ, "ಇದು ದುರಗವ್ವನ ಬೇನೆಯಲ್ಲ ನಾಗಪ್ಪನಬೇನೆ. ಭಯವಿಲ್ಲ" ಎಂದು ಹೇಳಿ ಒಂದು ಚೂರ್ಣವನ್ನು ಕೊಟ್ಟುಹೋದನು ಪಂಚಮಿಯ ದಿನ ಮಧ್ಯಾಹ್ನಕ್ಕೆ ಇಂದುಮತಿಯ ವಾಂತಿ-ಭ್ರಾಂತಿಗಳು ಕಡಿಮೆಯಾದವು. ಆದರೂ ಆವಳಿಗೆ ಏಳುವ ತ್ರಾಣವಿರಲಿಲ್ಲ ತಾಯಿಯು ಆಗ್ರಹದಿಂಗ ಮಣ್ಣಿನ ನಾಗಪೂಜೆಯನ್ನು ಮಾಡಿದಳು. ವೈದ್ಯರ ಹೇಳಿಕೆಯ ಮೇರೆಗೆ ಅಂದು ಆಹಾರವಿಲ್ಲದೆ, ಕೇವಲ ಮಜ್ಜಿಗೆಯ ಮೇಲೆಯೆ ಇರಬೇಕಾದುದರಿಂದ ಪಂಚಮಿಯಹಬ್ಬದ ಕುಚ್ಚುಕಡಬುಗಳು ಇಂದುಮತಿಗೆ ತಪ್ಪಿದುವು. ಅಂದು ಮಗಳನ್ನು ಊರೆಲ್ಲೆಲ್ಲ ಮೆರೆಯಿಸಬೇಕೆಂದ ಮನಸ್ಸಿನಲ್ಲಿ ಮಾಡಿದ ಹೊಂಚು ಹಂಚಿದುದಕ್ಕಾಗಿ ಭಾಗೀರಥಿಬಾಯಿಯವರಿಗೆ ಖೇದವಾಯಿತು.

ನಾಗಪಂಚಮಿಯ ಉತ್ಸಾಹವೆಲ್ಲಾ ಜೋಕಾಲಿಯಲ್ಲಿ ಹೂಗುತ್ತದೆ ಹುಡುಗರು ಪಟವಾಡಿ, ಮನೆಯೊಳಗೆ ಜೋಕಾಲಿಯನ್ನು ಕಟ್ಟಿಸಿಕೊಂಡ

ಜೀಕಿ, ಜೀಕಿ ದಣಿದು ಹೋಗುತ್ತಾರೆ. ಊರೊಳಗಿನ ದೊಡ್ಡ ಮರಗಳೆಲ್ಲ ಜೋಕಾಲಿಯ ಜೋಲಿಯಿಂದ ಜುರುಗುಟ್ಟುತ್ತವೆ. ಕೂಟದ ಓಣಿಗಳಲ್ಲೆಲ್ಲ ಜೋರಜೀಕಗಳು ಜುರುಗುಟ್ಟುತ್ತವೆ. ಬೆಚ್ಚನ್ನ ಕುಚ್ಚುಗಡಬುಗಳನ್ನು ಹೊಡೆದು, ಹೊಸ ವಸ್ತ್ರಾಭರಣಗಳನ್ನು ಹಾಕಿಕೊಂಡು, ಜೋಕಾಲಿಯನ್ನು ಆಡಲು ತರುಣತರುಣಿಯರು ತಂಡತಂಡವಾಗಿ ಹೊರಡುವರು; ಓಣಿ ಓಣಿ ತಿರುಗುತ್ತ, ಕಂಡ ಕಂಡ ಜೋಕಾಲಿಯಲ್ಲಿ ಜೀಕಿ ಜೀಕಿ ಆಡಿ, ದಣಿಯುವರು. ದೊಡ್ಡ ಜೋಕಾಲಿಯಿದ್ದಲ್ಲಂತೂ ಜನಸಮೂಹ ಬಹಳ ಅಲ್ಲಿ ದೊಡ್ಡಿಸ್ತಿಕೆಯುಳ್ಳವರಿಗೆ ಮಾತ್ರ ಜೋಕಾಲಿಸಿಗುವುದು ಉಳಿದವರು ಅಡ್ಡ ತಿಡ್ಡ ಗೋಣು ತಿರುವುತ್ತ, ಸರತಿಯನ್ನು ಕಾಯುತ್ತ, ಜಿಟಜಿಟ ಮಳೆಯಲ್ಲಿ ನಿಲ್ಲುವರು. ಎಷ್ಟೋ ಜನರು ತಮಗೆ ಇಲ್ಲಿ ಜೋಕಾಲಿಯು ಸಿಗುವ ಸಂಭವವಿಲ್ಲೆಂದು ಉದಾಸೀನರಾಗಿ ಬೇರೆಕಡೆಗೆ ಹೊರಟು ಹೋಗುವರು. ಜೋರಜೀಕ ಆಡಿದವರಲ್ಲಿ ಬಹುಜನರು ನಾಗಚೌತಿಯ ಫಲಹಾರವನ್ನೂ ಪಂಚಮಿಯ ಕಡಬನ್ನೂ ಹೊರಗೆಡಹಿಕೊಂಡು ಹೊಟ್ಟೆ ಹಗುರು ಮಾಡಿಕೊಳ್ಳುವರು. ಜಿಟಜಿಟ ಮಳೆಯಿಂದ ಹೊಸಬಟ್ಟೆಗಳೆಲ್ಲ ತೊಯು ಮುದ್ದೆಯಾಗುವವು. ಕಾಲುಜಾರಿ ಕೆಸರಲ್ಲಿ ಬಿದ್ದವರ ಬವಣೆಯಂತೂ ಹೇಳಲಾಸಲ್ಲ.

ನಮ್ಮ ದೇಶಪಾಂಡೆಯವರ ಮನೆಯ ಮುಂದಿನ ಹುಣಿಸೆಯ ಮರಕೂ ಭಾಗೀರಥಿಬಾಯಿಯವರು ಒಂದು ದೊಡ್ಡ ಜೋಕಾಲಿಯನ್ನು ಕಟ್ಟಿಸಿದ್ದರು. ಇಂದುಮತಿಯು ಕಟ್ಟೆಯಮೇಲೆ ಕುಳಿತುಕೊಂಡು, ತನ್ನ ಗೆಳತಿಯರನ್ನೆಲ್ಲ ಕರೆದು ಜೋಕಾಲಿಯನ್ನು ಆಡಿಸತೊಡಗಿದಳು; ತಾನು ಅತಿಸಾರದಿಂದ ಅಶಕ್ತಳಾಗಿರುವುದರಿಂದ ತನಗೆ ಜೋಕಾಲಿ ತಪ್ಪಿತೆಂದು ಚಡಪಡಿಸತೊಡಗಿದಳು. ಜೋಕಾಲಿಯಿಂದ ಜಾರಿ ಬಿದ್ದವರನ್ನು ಕಂಡು ನಗುವ ಆನಂದ ಮಾತ್ರ ಆಕೆಗೆ ದೊರೆಯಿತು. ನಗೆಯಿಂದ ನೊಂದವರು "ಏಳಲಿಕ್ಕೆಬಾರದ ಚದುರಿ ಬಿದ್ದವರ್ನಕಂಡ ನಗತಾಳ" ಎಂದು ವಟಗುಟ್ಟುತ್ತಾ ತಮ್ಮ ಮನೆಗೆ ಹೋದರು.

ಪಂಚಮಿಯ ಮರುದಿನ ಮಕ್ಕಳಹಬ್ಬ. ಅಂದು ಭಾಗೀರಥಿಬಾಯಿಯವರು ಇಂದುಮತಿಗೆ ಜರದಪೀತಾಂಬರವನ್ನುಡಿಸಿ, ದೊಡ್ಡಾಟದ ವೇಷಕ್ಕೆ

ತಕ್ಕಂತೆ ಮನೆಯೊಳಗಿನ ಆಭರಣಗಳನ್ನೆಲ್ಲಾ ಇಟ್ಟು, ಶಿರಿಯಾಳ ಪೂಜೆಯನ್ನು ಮಾಡಿಸಿದರು. ಬಳಿಕ ಕರಚೀಕಾಯಿ, ಬುತ್ತಿ, ಉಪ್ಪಿನಕಾಯಿ ಮೊದಲಾದುವನ್ನು ಬೆಳ್ಳಿಯ ತಾಟಿನಲ್ಲಿಟ್ಟುಕೊಂಡು, ಬೀರಿಸಲಿಕ್ಕೆ ಇಂದುಮತಿಯನ್ನು ಜುಲುಮೆಯಿಂದ ಎಬ್ಬಿಸಿದರು. ಅವಳು ಬೆಳ್ಳಿಯ ಕುಂಕುಮದ ಕರಡಿಗೆಯನ್ನು ಹಿಡಿದುಕೊಂಡು ಜೋಲೀಹೊಡೆಯುತ್ತ ಮನೆಮನೆಗೆ ಬೀರಹತ್ತಿದಳು. ಅವಳನ್ನು ನೋಡಿದವರು, "ಅಯ್ಯಯ್ಯ! ಕಳಲಾತಿಯಿಂದ ಬೆಳಸಿದಮಗಳು ಚಿಕ್ಕಿಆಗಿ ಬಂದಾಳಲ್ಲ" ಎಂದು ಭಾಗೀರಥಿಬಾಯಿಯವರಿಗೆ ಉಪಹಾಸ ಮಾಡಿದರು. ಮಗಳ ಮನೆಯ ವೈಭವವನ್ನು ಊರವರಿಗೆಲ್ಲ ತೋರಿಸಬೇಕೆಂದು ಹೊರಟವರು ಹಂಗಿನಮಾತುಗಳನ್ನಾಡಿಸಿಕೊಂಡು ಹಿಂದಿರುಗಬೇಕಾಯಿತು.

ಅಂದಿಸಿಂದ ಇಂದುಮತಿಯು ಊರಲ್ಲಿ ಹೊರಬೀಳಲೇ ಇಲ್ಲ. ತಾಯಿಯು ಪೌಷ್ಟಿಕವಾದ ಆಹಾರವನ್ನು ಅಕ್ಕರತೆಯಿಂದ ಉಣಿಸಿದರೂ ಹೃದ್ರೋಗಹತ್ತಿದ ಮಗಳಿಗೆ ಅದರಿಂದ ಹಿತವಾಗಲಿಲ್ಲ. ಮನೆಗೆ ಬಂದು ತಿಂಗಳಾದರೂ ಮಗಳ ಮೈ ಕಡ್ಡಿಯಾಗಿಯೆ ಉಳಿಯಿತು.

ಶ್ರಾವಣಮಾಸವು ಕೊನೆಗಂಡಿತು. ಎಳೆಯಪ್ಪಮಿಗೆ ಕರೆಯಲಿಕ್ಕೆ ಬರುತ್ತೇವೆಂದು ಒಕಣ್ಣನ ಓಲೆಯೂ ಬಂತು. ಇಂತಹ ಸ್ಥಿತಿಯಲ್ಲಿ ಮಗಳನ್ನು ಹೇಗೆ ಕಳಿಸಿಕೊಡಬೇಕೆಂಬ ಚಿಂತೆಯು ತಾಯಿಗೂ, ಮುನ್ನೂರು ರೂಪಾಯಿಯ ಆಭರಣಗಳನ್ನು ಹೇಗೆ ಮಾಡಿಸಬೇಕೆಂಬ ಚಿಂತೆಯು ಗಂಗಾಧರರಾಯರನ್ನೂ ಆವರಿಸಿದುವು. ಇಂದುಮತಿಯು ಗಂಡನ ಓಲೆಯ ಮೇರೆಗೆ ತಾನು ಅತ್ತೆಯಮನೆಗೆ ಹೋಗತಕ್ಕವಳೇ ಎಂದು ಹಟಹಿಡಿದಳು.

ಮರುದಿವಸ ಗಂಗಾಧರರಾಯರು ತಮ್ಮ ಹೆಂಡತಿಯ ಮುಂದೆ ತಮ್ಮ ಕಷ್ಟವನ್ನು ತೋಡಿಕೊಂಡು, "ನನಗ ಈಗ ಸಾಲಸಹಿತ ಸಿಗೂಹಾಂಗಿಲ್ಲ" ಎಂದು ಉಸಿರ್ಗರೆದರು. ಭಾಗೀರಥಿಬಾಯಿಯವರು ತಮ್ಮ ಬೆಂಡೋಲೆ, ಮುತ್ತಿನ ಬುಗಕೆ, ಗೆಜ್ಜೆಯಟೀಕೆಗಳನ್ನು ಅವರ ಮುಂದಿಟ್ಟು, "ಮಗಳ ಜೀವಕ್ಕಿಂತ ಇವೇನು ನನಗ ಹೆಚ್ಚಿನವಲ್ಲ." ಎಂದರು. ರಾಯರಿಗೆ ಪರಮಾನಂದವಾಯಿತು.

ಭಾದ್ರಪದ ಷಷ್ಠಿಯದಿನ ಒಡಕಣ್ಣನ ಆಶ್ರಿತ ಬ್ರಾಹ್ಮಣನು ಇಂದುಮತಿಯನ್ನು ಕರೆಯಲಿಕ್ಕೆ ಲಕ್ಷ್ಮೀಪುರಕ್ಕೆ ಬಂದನು. ಮರುದಿವಸ ಬೆಳಗಾಗು

ವುದರೊಳಗಾಗಿ ಭಾಗೀರಥಿಬಾಯಿಯವರು ಅಡುಗೆಮಾಡಿ, ಎರಡುತಾಸು ಹೊತ್ತೇರುವುದರೊಳಗೆ ಎಲ್ಲರಿಗೂ ಊಟಮಾಡಿಸಿದರು. ಇಂದುಮತಿಯು ತನ್ನ ಎಲ್ಲ ವಸ್ತ್ರಾಭರಣಗಳನ್ನು ಕಟ್ಟಿಕೊಂಡಳು. ತಾಯಿಯು ಮಗಳಿಗೆ ಇಪ್ಪತ್ತು ರೂಪಾಯಿಗಳ ಸೀರೆಯನ್ನೂ, ಜರದ ಖಣವನ್ನೂ ಕೊಟ್ಟು, ತವ್ಮ ಜುಗುಡಿ, ಬೆಂಡೋಲೆ, ಗೆಜ್ಜೆಯಟೀಕೆಗಳನ್ನು ತೊಡಿಸಿ, ಕರೆಯ ಬಂದು ಬ್ರಾಹ್ಮಣಿಗೆ, " ನಮಗೇನು ಗಂಡುಮಕ್ಕಳಿಲ್ಲ. ಮಗಳಿಗೇ ನಾವು ಎಲ್ಲಾ ಮಾಡತಕ್ಕವರು. "ಇಂದಿನತನಕ ನಿಮ್ಮ ದೇಸಾಯರ ಇಚ್ಛಾಧಾಂಗ ನಡೀತಾ ಬಂದೀವಿ. ಈಗ ನಮಗೂ ಸ್ವಲ್ಪ ಕಠಿಣಕಾಲ ಆದ. ಹಿಂಡೋ ಎಮ್ಮೀ ಕೆಚ್ಚಲಕೊಯ್ಯಬಾಡ್ರೀ" ಅಂತ ನೀವು ವಲ್ಲಭರಾಯರಿಗೆ ಹೇಳ್ರಿ. ನಮ್ಮ ಮಗಳು ಸ್ವಲ್ಪ ಮುಗ್ಧ ! ನೀವೆಲ್ಲಾರೂ ಸ್ವಲ್ಪ ಜೋಕಿಮಾಡಬೇಕು" ಎಂದು ದೈನ್ಯದಿಂದ ಹೇಳಿಕೊಂಡರು.

ಬ್ರಾಹ್ಮಣನು " ದೊಡ್ಡವರ ಕೆಲಸ. ಏನ್ರೆವಾ, ನಾ ಹೆಚ್ಚಿಗೆ ಮಾತಾಡೂ ಹಾಂಗಿಲ್ಲ. ನಿಮ್ಮ ಮಗಳಿಗೆ ನನ್ನ ಕೈಯಿಂದಾದಷ್ಟು ಒಳಿತು ಮಾಡತನಃ ಇದ್ದೀನಿ. ಮುಂದಾದರೂ ಮಾಡತೀನಿ. ಹಣೇಬರಹ ಯಾರಿಗೂ ಬಿಟ್ಟಿದ್ದಲ್ಲಾ " ಎಂದು ನಿಟ್ಟುಸಿರು ಬಿಟ್ಟನು.

ಅಷ್ಟರಲ್ಲಿ ಚಕ್ಕಡಿಯು ಸಿದ್ಧವಾಗಿತ್ತು. ಇಂದುಮತಿಯು ತಂದೆತಾಯಿಗಳಿಗೆ ನಮಸ್ಕರಿಸಿ, ಕಣ್ಣೀರು ಸುರಿಸುತ್ತಾ, ಚಕ್ಕಡಿಯೇರಿದಳದು. ಭಾಗೀರಥಿಬಾಯಿಯವರ ಕಣ್ಣೀರು ಧಾರೆಯಾಗಿ ಇಳಿಯಿತು. ಗಂಗಾಧರರಾಯರ ಹೃದಯವು ತಲ್ಲಣಿಸಿ ಕಂಬನಿ ತುಂಬಿದರೂ, ಅವುಗಳನ್ನು ಹೊರಗೆಡಹದೆ ಅವರು ಊರು ದಾಟುವವರೆಗೆ ಚಕ್ಕಡಿಯ ಹಿಂದಿನಿಂದ ಹೋಗಿ, " ಕಕ್ಕುಲತೆಯಿಂದ ಸಲಹಿದ ಮಗಳನ್ನು ರಕ್ಕಸನ ದವಡಗೆ ನೂಕಿದನಲ್ಲ" ಎಂದು ಹಳಹಳಿಸುತ್ತಾ ಹಿಂದಿರುಗಿದರು.

ಚಕ್ಕಡಿಯು ಒತ್ತರದಿಂದ ಸಾಗಿ ಸಾಯಂಕಾಲಕ್ಕೆ ಬೊಮ್ಮೀನೇರಿಗೆ ಬಂತು. ಇಂದುಮತಿಯು ಚಕ್ಕಡಿಯಿಂದಿಳಿದು ಗಂಡನಿಗೂ ಅತ್ತೆಯವರಿಗೂ ನಮಸ್ಕರಿಸಿ, ತಾನು ತವರೂರಿಂದ ತಂದ ವಸ್ತ್ರಾಭರಣಗಳನ್ನು ತೋರಿಸಿದಳು. ಚಂದ್ರಾವತಿಬಾಯಿಯವರು, " ನೀನು ಭಾಗ್ಯವಂತಗ ದೊರೆತ

ಬಂಗಾರದ ಕಣಿ ಆಗೀದಿ. ಹೀಂಗಂತಹ ಕುರೂಪಿ ಆಗಿದ್ದರೂ ನಿನ್ನ ನಮ್ಮ ಒಡಕಣ್ಣ ಮಾಡಿಕೊಂಡದ್ದು." ಎಂದು ವ್ಯಂಗ್ಯನುಡಿಗಳನ್ನಾಡಿ ಗಂಗೆಯನ್ನು ಸಂತೈಸಿದರು.

## ೭. ಯಮದೂತರು.

ಬೊಮ್ಮೀಗೇರಿಯ ಹಿಂದಿನ ಹಿರಿಯರೆಲ್ಲ ಪರಲೋಕವಾಸಿಗಳಾದ್ದಾರೆ. ತರುಣರೇ ಈಗ ಊರೊಳಗಿನ ಹಿರಿಯರು. ಒಡಕಣ್ಣನು ಅವರಮುಂದಾಳು. ಸೂಳೆಯರೇ ಸಂಸಾರರಥದ ಸಾರಥಿಗಳು. ಸಣ್ಣಪುಟ್ಟ ವಾಜ್ಯಗಳನ್ನು ತೀರಿಸುವವರೂ ಅವರೇ, ಪ್ರತಿಯೊಬ್ಬ ವಾರಾಂಗನೆಗೂ ತನ್ನ ದೊಡ್ಡಸ್ತಿಕೆಯ ಬಗ್ಗೆ ಒಳ್ಳೆಯ ಅಭಿಮಾನ. ಸೆಟ್ಟರ ಬಸೆಟ್ಟೆಪ್ಪನ ಸೂಳೆಯು ಅವನಿಗಿಂತಲೂ ಹಿರಿಯಳು. ಶಾನಭೋಗರ ಸದಾಸಿವಪ್ಪನ ಉಪಪತ್ನಿಯು ಬಣ್ಣ ತೊಳೆದ ಕೆಂಡವಾದರೂ ಅವಳ ಬಿಂಕ ಬಹಳ. ಗೌಡರ ಗುರುಲಿಂಗಪ್ಪನವರಂತೂ ಸೂಳೆಯರಿಗಗಾಗಿ ಸರ್ವಸ್ವವನ್ನೂ ಧಾರೆಯರದವರು. ಬಡಿಗರ ಭರಮಣ್ಣ, ಕಂಬಾರ ಕಲ್ಲಣ್ಣ, ಕುಂಬಾರ ಕೆಂಚಣ್ಣ, ಸಜ್ಜನರ ಸಂಗಣ್ಣ ಮೊದಲಾದವರು ಗಣಿಕೆಯರ ಗುಣಗಾನ ಮಾಡುವ ಭಟ್ಟಂಗಿಗಳು. ಇವರೆಲ್ಲರ ಒಡೆಯನಾದ ಒಡಕಣ್ಣನಿಗೆ ತನ್ನ ಸಹವಾಸಿಗಳಿಗಿಂತ ಮಿಗಿಲಾದ ಮಹತ್ಕಾರ್ಯವನ್ನು ಮಾಡಿತೋರಿಸಬೇಕೆಂಬ ಹವ್ಯಾಸವು ಹುಟ್ಟಿದ್ದರೆ ಏನಾಶ್ಚರ್ಯ? ಇವಕ್ಕಾಗಿ ಅವನು ಬಹಳದಿವಸದಿಂದ ಹೊಂಚುಹಾಕಿಕೊಂಡು ಕುಳಿತಿದ್ದಾನೆ.

ದೊಡ್ಡೀಕೊಪ್ಪದಲ್ಲಿ ಒಡಕಣ್ಣನಿಗೆ ಇಪ್ಪತ್ತು ಎಕರೆಯದೊಂದು ಹೊಲ. ಆ ಊರೊಳಗಿನ ದೊಡ್ಡಮನೆಯ ಕೆಂಚಪ್ಪನಮನೆಯವರೆ ಅದನ್ನು ನಾಲ್ಕಾರು ತಲೆಗಳಿಂದ ಮಾಡುತ್ತ ಬಂದಿದ್ದರು, ಕೆಂಚಪ್ಪನು ಬಹಳ ಸಾತ್ವಿಕ ಮನುಷ್ಯ; ಶ್ರೀಪತಿರಾಯರ ಪರಮಮಿತ್ರ. ಒಡಕಣ್ಣನಿಗೆ ದತ್ತಕ ವ್ಯಾಜ್ಯದಲ್ಲಿ ಸಹಾಯ ಮಾಡಿದವನೂ ಅಹುದು. ಆದುದರಿಂದ ಒಡಕಣ್ಣನು ಅವನ ಮೇಲೂ ಅವರ ಮನೆಯವರ ಮೇಲೂ ಬಹಳ ವಿಶ್ವಾಸವನ್ನು ತೋರುತ್ತಿದ್ದನು. ಸುತ್ತಲಿನ ಹಳ್ಳಿಗಳ ಲಾವಣೆಯನ್ನು ಎತ್ತಲಿಕ್ಕೆ ಹೋದಾಗ ಕೆಂಚಪ್ಪನ ಮನೆಯಲ್ಲಿಯೇ ಇದ್ದು, ಬಂದ ದುಡ್ಡನ್ನೆಲ್ಲ ಇಟ್ಟುಕೊಳ್ಳಲಿಕ್ಕೆ ಕೆಂಚಪ್ಪನ ಕೈಗೇ ಒಪ್ಪಿಸುತ್ತಿದ್ದನು. ಕೆಂಚಪ್ಪನು ಒಡಕಣ್ಣನನ್ನು ತನ್ನ ಮಗನೆಂದೇ ಭಾವಿಸಿದ್ದನು. ಈ ಒಡಕಣ್ಣನ ಸವಿಮಾತುಗಳಿಗೆ ಮರು

ಳಾಗಿ ಇವನೊಬ್ಬ ದೊಡ್ಡಮನುಷ್ಯನೆಂದು ತಿಳಿದುಕೊಂಡಿದ್ದನು. ಸರಳ ಹೃದಯದ ಕೆಂಚಣ್ಣನಿಗೆ ಇವನ ಕುಟಿಲ ತಂತ್ರಗಳು ಹೇಗೆ ತಿಳಿಯಬೇಕು?

ಕೆಂಚಣ್ಣನ ಮನೆಯಲ್ಲಿರುವವರೆಂದರೆ ಅವನು, ಅವನ ಇಪತ್ತೈದು ವರ್ಷದ ಮಗನಾದ ಭರಮಣ್ಣ ಹಾಗು. ಭರಮಣ್ಣನ ಹೆಂಡತಿಯಾದ ನಿಂಗವ್ವನು. ನಿಂಗವ್ವನು ಎಳೆಯಪ್ರಾಯದ ಚಲುವೆ. ಅವಳ ರೂಪಲಾವಣ್ಯಕ್ಕೆ ಮೋಹಿತನಾಗಿ ಒಡಕಣ್ಣನು ಅವಳನ್ನು ಸ್ವಾಧೀನ ಪಡಿಸಿಕೊಳ್ಳುವ ತಂತ್ರಗಳಲ್ಲಿ ತೊಡಗಿರುವುದು ಅವರಿಗೆ ತಿಳಿದಿರಲಿಲ್ಲ ಒಡಕಣ್ಣನು ಅವರೆಲ್ಲರ ಕೂಡ ಸಲಿಗೆಯಿಂದ ವರ್ತಿಸುತ್ತಿದ್ದನು. ಕೆಂಚಣ್ಣನು ಮಗನೊಡನೆ ಹೊಲಕ್ಕೆ ಹೋದರೆಂದರೆ, ಇವನು ನಿಂಗವ್ವನೊಡನೆ ಹರಟೆಗೆ ತೊಡಗುವನು ತನ್ನ ದೊಡ್ಡಿಸ್ತನವನ್ನೂ, ಐಶ್ವರ್ಯವನ್ನೂ ಅವಳೆದುರಿಗೆ ಬಣ್ಣಿಸುವನು. ಬರುಬರುತ್ತ ಚಾಟಮಾಟಗಳ ಪ್ರಯೋಗವನ್ನು ಆವಳಿಗೆ ಮಾಡಿದನ ಅವಳ ಮನೋಭಿಲಾಷೆಗಳನ್ನೆಲ್ಲ ಪೂರ್ಣಮಾಡಿದನು. ಹೀಗೆ ಸ್ವಲ್ಪ ದಿವಸಗಳಲ್ಲಿ ಅವಳ ಮನಸನ್ನು ಕೆಡಿಸಿ, ತನ್ನ ಬೆನ್ನು ಹತ್ತಿ ಬರುವಂತೆ ಅವಳನ್ನು ಹುರಿದುಂಬಿಸಿದನು.

ಒಂದು ದಿನ ಬೊಮ್ಮೀಗೇರಿಯಿಂದ ಇಪ್ಪತ್ತು ಜನ ಪುಂಡರನ್ನು ಕರೆತಂದನ್ನು ಅವರನ್ನು ಅಡವಿಯಲ್ಲಿ ಅಡಗಿಸಿಟ್ಟು, ಊರಹೊರಗೆ ಚಕ್ಕಡಿಯನ್ನು ಸಿದ್ಧಪಡಿಸಿ, ತಾನು ಕುದುರೆಯ ಮೇಲೆ ಕಂಚಣ್ಣನ ಮನೆಗೆ ಬಂದು, ಮುಬ್ಬುಗತ್ತಲಲ್ಲಿ ನಿಂಗೆಯನ್ನು ಊರ ಹೊರಕ್ಕೆ ಹೋಗುವಂತೆ ತಿಳಿಸಿದನು ತಾನು ಮಾತ್ರ ಕೆಂಚಣ್ಣನ ಮನೆಯಲ್ಲಿಯೇ ಉಳಿದುಕೊಂಡನು ಎರಡು ತಾಸು ರಾತ್ರಿಯ ಸಮಯಕ್ಕೆ ಕೆಂಚಪ್ಪ ಭರಮಣ್ಣರು ಗಳೆಹೊಡೆದು ಮನೆಗೆ ಬಂದರು. ನಿಂಗವ್ವನು ಮನೆಯಲ್ಲಿರಲಿಲ್ಲ. ಅವರು ಒಡಕಣ್ಣನನ್ನು ವಿಚಾರಿಸಿದರು. ಅವನು, "ಏನೋಪ್ಪ! ನಿಮ್ಮ ಸೂಸೀ ಮನಿಯವರಂತ,- ಯಾರೋ ಒಬ್ಬರು ಮಧ್ಯಾನ್ಹ ಬಂದಿದ್ದರು ಒಳಗ ಊಟಮಾಡಿ, ಏನೇನೊ ಕುಚುಕುಚು ಮಾತಾಡಿದರು. ಹೊತ್ತು ಮುಳುಗುವ ಮುಂದ ಊರಿಗೆ ಹೋದರು. ಅವರ್ನ ಕಳಿಸಲಿಕ್ಕೆ ನಿಮ್ಮ ಸೊಸೀನೂ ಹೋದ್ಲು. ಆಕಿ ಇನ್ನೂ ಯಾಕ ಬರಲಿಲ್ಲೋ ಏನೋ! ಇದೇನು ಮೋಸೋ ನನಗ ತಿಳಿದು" ಎಂದು ಗಾಬರಿಯಾದವನಂತೆ ನುಡಿದನು.

ಕೆಂಚಣ್ಣನು ಊರಲ್ಲಿ ತಿರುಗಾಡಿ ವಿಚಾರಿಸಲಾಗಿ, ತನ್ನ ಸೊಸೆಯು ಯಾವುದೋ ಒಂದು ಚಕ್ಕಡಿಯಲ್ಲಿ ಕುಳಿತು ಹೋದಳೆಂಬ ಸುದ್ದಿಯು ಅವನಿಗೆ ಹತ್ತಿತು. ಒಡಕಣ್ಣನಿಗೆ ಈ ಸುದ್ದಿಯನ್ನು ಅವನು ತಿಳಿಸಿದನು. ಆಗ ಒಡಕಣ್ಣನು ಆವೇಶದಿಂದ ಆರ್ಬಟಿಸಿ, "ನಾನು ಈಗs ಕುದುರಿವ್ಯಾಲೆ ಹೋಗಿ ಆಕಿನ್ನ ಗೊತ್ತು ಹಚ್ಚಿ ತರತೇನಿ" ಎಂದು ಹೇಳಿ, ಕುದುರೆಯನ್ನು ಓಡಿಸುತ್ತ ಊರ ಹಾದಿ ಹಿಡಿದನು.

ಅಷ್ಟರಲ್ಲಿ ಭರಮಣ್ಣನು ಊರಲ್ಲಿ ತಿರುಗಾಡಿ ವಿಚಾರಿಸಿ, ಒಡಕಣ್ಣನ ಮೇಲೆಯೇ ಸಂಶಯ ಪಟ್ಟನು. ಹುತ್ತುಜನ ಗಟ್ಟಿಗರನ್ನು ಕರೆದುಕೊಂಡು ಬಂದು, ತಂದೆಗೆ ಗುಪ್ತವಾಗಿ ನಡೆದ ಸಂಗತಿಯನ್ನು ತಿಳಿಸಿದನು. ಒಡಕಣ್ಣನು ಯುಕ್ತಿಯಿಂದ ಪಾರಾದ ಸುದ್ದಿಯನ್ನು ತಿಳಿದು ಬಡಿಗೆಯನ್ನು ಬಗಲಲ್ಲಿ ಹಿಡಿದುಕೊಂಡು, ಸಂಗಡಿಗರೊಡನೆ ಕುದುರೆಯ ಹೆಜ್ಜೆ ಹಿಡಿದು ಓಡುತ್ತ ನಡೆದನು

ಒಡಕಣ್ಣನ ಸಂಗಡಿಗರು ನಿಂಗೆಯನ್ನು ಚಕ್ಕಡಿಯಲ್ಲಿ ಕುಳ್ಳಿರಿಸಿಕೊಂಡು ಒತ್ತರದಿಂದ ನಡೆದರು. ಅಡವಿಯಲ್ಲಿ ಅಡಗಿದ್ದವರು ಸಂಕೇತದಿಂದ ಅದರ ಹಿಂದಿನಿಂದ ನಡೆದರು. ಮುಂದೆ ದೊಡ್ಡ ಅಡವಿಯು ಹತ್ತಿತು. ಮೊದಲೆ ಮಾಡಿಟ್ಟುಕೊಂಡು ಸಂಕೇತದಂತೆ ಅಲ್ಲಿ ಚಕ್ಕಡಿಯನ್ನು ತರುಬಿದರು. ಆಗ ನಿಂಗವ್ವನು ಗಾಬರಿಯಾಗಿ "ಇಲ್ಲಿ ತರುಬ ಬ್ಯಾಡ್ರಿ. ನಮ್ಮ ಮಾವಂದಿರು ಊರಿಗೆಲ್ಲ ಬೇಕಾದವರು. ನಾ ಹೋದ ಸುದ್ದಿ ಹಬ್ಬೊದೊಂದ ತಡ, ಊರಿಗೆ ಊರs ಎದ್ದು ನಮ್ಮನ್ನ ಹಿಡೀಲಾಕ ಬಂದೀತು. ಅವರು ಬಂದರ ನಮ್ಮ ಜೀವ ಉಳ್ಯಾಕಿಲ್ಲ. ಚಕ್ಕಡೀ ಒತ್ತರದಿಂದ ಬಿಡ್ರಿ" ಎಂದು ಬೆದರಿಸಿದಳು. ಅಷ್ಟರಲ್ಲಿ ದೂರದಿಂದ ಕುದುರೆಯ ಬುರಪುಟದ ಶಬ್ದವು ಕೇಳಹತ್ತಿತು, ಒಡಕಣ್ಣನು ಸಮೀಪದಲ್ಲಿಯೆ ಬಂದನೆಂದು ಅವರು ಚಕ್ಕಡಿಯನ್ನು ಮುಂದೆ ಬಿಟ್ಟರು. ಹಳ್ಳದ ಇಳುಕಲಲ್ಲಿ ಎತ್ತುಗಳು ಮುಂದೆ ನಡೆಯದಾಗಲು ಹಿಂದಿನವರು ಪಂಜನ್ನು ಹಚ್ಚಿ ಮುಂದೆ ನಡೆದರು. ಎತ್ತುಗಳು ಎಚ್ಚರವಿಲ್ಲದೆ ಓಡುತ್ತ ಹಳ್ಳವನ್ನು ದಾಟಿ, ಮುಂದಿನ ದಿನ್ನೆಯನ್ನು ಹತಿದವು.

ಅಷ್ಟರಲ್ಲಿ ಒಡಕಣ್ಣನೂ ಹಳ್ಳದ ಹತ್ತಿರ ಬಂದನು. ಅಲ್ಲಿ ಹೊಂಚು ಹಾಕಿಕೊಂಡು ಕುಳಿತ ಕೇಂಪುಲಿಯು ಪಂಜಿನ ಬೆಳಕಿಗೆ ಹಿಂದೆ ಸರಿದಿತ್ತು.

ತನಗೆ ಪ್ರೀತಿಯ ಆಹಾರವಾದ ಕುದುರೆಯು ಬರುವುದನ್ನು ತಿಳಿದು, ಅದು ಮತ್ತೆ ಹಳ್ಳಕೆ ಬಂದು, ಕಂಟಿಯಮರೆಗೆ ಜಪ್ಪಿಸಿ ಕುಳಿತಿತ್ತು. ಒಡಕಣ್ಣನ ಕುದುರೆಯು ಹಳ್ಳಕ್ಕೆ ಬರುತ್ತಲೆ ಹುಲಿಯು ಟಣ್ಣನೆಹಾರಿ, ಕುದುರೆಯ ಕುತ್ತಿಗೆಯನ್ನು ಹಿಡಿಯಿತು. ಮೇಲೆ ಕುಳಿತ ಒಡಕಣ್ಣನು ಮುಕ್ಕರಿಸಿ ಬಿದ್ದನು. ಕೇರಹುಲಿಯು ಕುದುರೆಯ ನೆತ್ತರ ಹೀರುವ ಆನಂದದಲ್ಲಿಯೆ ಇದ್ದುದರಿಂದ ಒಡಕಣ್ಣನು ಹಿಂದೆಸರಿದು, ಮೈಮೇಲೆ ಎಚ್ಚರವಿಲ್ಲದೆ, ಹಿಂದೆ ಓಡುತಾ ದಿನ್ನೆಯನ್ನೇರಿ, ಅಲ್ಲಿಯ ಒಂದು ಗಿಡವನ್ನೇರಿ ಕುಳಿತನು. ( ಹುಲಿಯು ಕುದುರೆಯ ರಕ್ತವನ್ನು ಹೀರಿ ಹಳ್ಳದಲ್ಲಿ ಗುಡುಗು ಹಾಕುತ್ತಾ ಚಿನ್ನಾಟವಾಡುತ್ತಿತ್ತು) .

ಹಳ್ಳವನ್ನು ದಾಟಿ ಚಕ್ಕಡಿಯನ್ನು ಕೂಡುವುದು ಅವನಿಗೆ ಸಾಧ್ಯವಿರಲಿಲ್ಲ ಅವನು ಬಹಳ ಬೆದರಿದನು ಅವನ ಎದೆ ಧಕಧಕೆ ಹಾರಹತ್ತಿತು, ಮೈನಡುಗತೊಡಗಿತು, ಮುಂದೆ ದೊಡ್ಡ ಅರಣ್ಯ; ಮೂರುತಾಸು ರಾತ್ರಿ, ಭಯಂಕರ ಕತ್ತಲೆ; ಮುಂದೆ ಹುಲಿಯ ಭಯ! ಹಿಂದೆ ತನ್ನನ್ನು ಹಿಡಿಯಲು ಯಾರಾದರೂ ಬರಬಹುದೆಂಬ ಭಯ! ಹೀಗಾಗಿ ಅವನು ಹಿಂದೆಮುಂದೆ ನೋಡುತ್ತ ಅಲ್ಲಿಯೆ ಗಾಬರಿಯಾಗಿ ಕುಳಿತನು.

ಅಷ್ಟರಲ್ಲಿ ಹಿಂದಿನಿಂದ ಗೊರೆವೆಯ ಕಟ್ಟಿಗೆಯ ಬೆಳಕು ಕಾಣಿಸಹತ್ತಿತು ಆಗಂತೂ ಒಡಕಣ್ಣನ ಎದೆಯೊಡೆದು ನೀರಾಯಿತು. ಇಲ್ಲಿ ಅವನ ಯಾವ ತಂತ್ರಗಳೂ ನಡೆಯುವಂತಿರಲಿಲ್ಲ, ಮುಂದೆ ಹುಲಿ, ಹಿಂದೆ ಹುಂಬರು ಎರಡೂ ಪ್ರಾಣ ಹೀರುವಂತಹವೆ. ಸಿಂಗೆಯನ್ನು ನೆನಸುತ್ತಾ ಜೀವ ಸೀಗುವ ಹೊತ್ತು ಬಂದಿತಲ್ಲ ಎಂದು ಅವನು ಚಡಪಡಿಸಿದನು. ಬೆನ್ನಟ್ಟಿದವರು ಸಮೀಪವಾವಂತೆಲ್ಲಾ ಅವನಿಗೆ ಜೀವದಲ್ಲಿ ಜೀವವಿಲ್ಲದಂತಾಗ ತೊಡಗಿತು. ಹುಲಿಯಕೈಗೆ ಸಿಕ್ಕರೆ ಅದು ಒಮ್ಮೆಲೆ ಪ್ರಾಣ ಹೀರಬಹುದು; ಈ ಹುಂಬರ ಕೈಗೆ ಸಿಕ್ಕರೆ ನನ್ನ ಬವಣೆ ಯೇನೋ ಎಂದುಕೊಂಡು, "ಪ್ರಾಣ ಸಂಕಟಕ್ಕಿಂತ ದೇಹದ ಕಷ್ಟವೇನೂ ಹೆಚ್ಚಿನದಲ್ಲ; ಇಲ್ಲಿಂದಿಳಿದು ಅಡ್ಡಹಾದಿಯಿಂದ ಓಡಿಹೋಗಿ, ಯಾವುದಾದರೂ ಒಂದು ಹಳ್ಳಿಯಲ್ಲಿ ಅಡಗಿಕೊಳ್ಳಬೇಕು" ಎಂದು ನಿರ್ಧರಿಸಿ ಗಿಡದಿಂದ ಇಳಿದನು. ಅಡವಿಯ ಹಾದಿಯೊಂದನ್ನು ಹಿಡಿದು ಓಡುವುದಕ್ಕೂ ಆರಂಭಿಸಿದನು.

ಕಗ್ಗತ್ತಲೆ! ಅಡವಿಯುಹಾದಿ; ಪರಗಿ, ಕವಳಿ ಮೊದಲಾದ ಮುಳ್ಳು ಕಂಟಿಗಳು ಗುಂಪುಗುಂಪಾಗಿ ಹಬ್ಬಿವೆ. ನೆಲವೆಲ್ಲ ಹುಲ್ಲಿನಿಂದ ಮುಚ್ಚಿದೆ. ಇಂತಹ ಮಾರ್ಗದಲ್ಲಿ ಒಡಕಣ್ಣನು ಮೈಮೇಲೆ ಎಚ್ಚರವಿಲ್ಲದೆ, ಹಿಂದುರಗಿ ನೋಡುತ್ತಾ ಓಡುತ್ತಿದ್ದಾನೆ. ತುಸುಹೊತ್ತು ಓಡುತ್ತಿರುವಷ್ಟರಲ್ಲಿ ಅವನು ಹಿಡಿದ ಕಾಲು ದಾರಿಯೂ ತಪ್ಪಿಹೋಯಿತು. ಹಗಲಲ್ಲಿಯೆ ಸಿಗದ ಕಾಡು ದಾರಿ ಇರುಳು ಸಿಗುವುದೆಂತು ? ಅವನು ಮಾರ್ಗ ಹುಡುಕುವ ಪ್ರಯತ್ನ ವನ್ನೇ ಮಾಡಲಿಲ್ಲ. ಅಲ್ಲಿಂದ ಉತ್ತರಕ್ಕೆ ಅಡವಿಯು ಕಡಿಮೆಯಾಗುವು ದೆಂಬದನ್ನು ಅವನು ಅರಿತಿದ್ದನು. ಧ್ರುವನಕ್ಷತ್ರವನ್ನು ದಿಟ್ಟಿಸಿನೋಡಿ, ಅತ್ತ ಕಡಗೇ ಓಡಿದನು.

ಕಾಲಲ್ಲಿ ಮುಳ್ಳು ನೆಟ್ಟುವು; ಕಂಟಿಗೆ ಸಿಕ್ಕು ಮೈಮೇಲಿನ ಬಟ್ಟೆಗಳು ಹರಿದುವು; ಪರಗೆಯ ಮುಳ್ಳು ತೆರೆದು ಅಲ್ಲಲ್ಲಿ ಬಾರುಗಳೆದ್ದುವು; ನೆತ್ತರು ಚಿಮ್ಮ ತೊಡಗಿತು. ದೇಹದ ಪರವೆಯು ಅವನಿಗಿಲ್ಲ; ಹಾಗೆಯೆ ಮುಂದೆ ಓಡಿದನು. ಹೊದ್ದುಕೊಂಡ ಜರದ ಸಲ್ಲೆಯು ಒಂದು ಪೆಳೆಗೆ ಸಿಕ್ಕು ಹೋಯಿತು. ಮುಂದೆ ಒಂದು ಪರಗೆಯ ಪೆಳೆಯಲ್ಲಿ ಬಗ್ಗಿ ಹೋಗುವಾಗ ತಲೆಯ ಮೇಲಿನ ರುಮಾಲವೂ ಅಲ್ಲಿ ಜೋತಾಡ ಹತ್ತಿತು. ಅದನ್ನು ಬಿಡಿಸಿ ಕೊಳ್ಳಲಿಕ್ಕೆ ಮಾಡಿದ ಅವಸರದ ಪ್ರಯತ್ನವು ಅಯಶಸ್ವಿಯಾಯಿತು. ಅಷ್ಟ ರಲ್ಲಿ ಗೊಂಪೆಕಟ್ಟೆಗೆಂಪು ಉರಿಯ ಬೆಳಕು ಕಂಡಿತು. ರುಮಾಲದ ಆಶೆಯನ್ನು ಬಿಟ್ಟು ಕಾಲುಕಿತ್ತಿ ಓಡಿದನು.

ಮುಂದೆ ಕಿರುಗಂಟೆಗಳು ಕತ್ತಿದವು ಹಳ್ಳಿ ಸಮೀಪದಲ್ಲಿದೆಯೆಂದು ಅವನು ಸಮಾಧಾನಪಟ್ಟನು; ಕಾಡಹಂದಿಗಳ ಹಿಂಡೊಂದು ಓಡುತ್ತ ಬರುವು ದನ್ನು ಕಂಡು ಬೆದರಿ ಮತ್ತೆ ಗಿಡವನ್ನ ಹರಿದನು. ಹಿಂದಿರುಗಿ ನೋಡುತ್ತಾನೆ:- ಸುತ್ತಲೂ ಕೊಳ್ಳಿಗಳ ಬೆಳಕು! ಕೂಡಲೆ. ಗಿಡವನ್ನಿಳಿದು, ಕಾಲಿಗೆ ಬುದ್ಧಿ ಹೇಳಿದನು. ಬಯಲು ಬಂತು; ಗದ್ದೆಗಳನ್ನು ಹತ್ತುತ್ತಾ ಇಳಿಯುತ್ತಾ ನಡೆ ದನು. ಸನಿಯದಲ್ಲಿ ಗಿಡಗಳ ಗುಂಪೊಂದು ಕಂಡಿತು. ಅದೊಂದು ಹಳ್ಳಿಯಿರ ಬಹುದೆಂದು ಅತ್ತ ನಡೆದನು. ನಾಯಿಗಳ ಬೊಗಳುವಿಕೆ ಕೇಳಬಂತು ಯಮ ದೂತರ ಕೈಯೊಳಗಿಂದ ಪಾರಾದನೆಂದುಕೊಂಡು ಹಿಗ್ಗಿ ಹಳ್ಳಿಯನ್ನು ಹೊಕ್ಕನು. ಅದು ವೀರಾಪುರವೆಂಬ ಹಳ್ಳಿಯೆಂಬುದನ್ನು ಅರಿತು, ಊರಲ್ಲಿ

ಕುಲಕರ್ಣಿಯವರ ಮನೆಯನ್ನು ಕೇಳುತ್ತ ನಾಲ್ಕುತಾಸು ರಾತ್ರಿಯಹೊತ್ತಿಗೆ ಅವರಮನೆಗೆ ಬಂದನು.

ಶಾನುಭೋಗ ಲಕ್ಷ್ಮಣರಾಯರು ಅದೆ ಊಟಮಾಡಿ, ಎಲೆಯಡಕೆ ಹಾಕುತ್ತ ಪಡಸಾಲೆಯಲ್ಲಿ ಕುಳಿತಿದ್ದರು. ಒಡಕಣ್ಣನು ಒಳಗೆ ಬಂದವನೆ ಅವರ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಅಳತೊಡಗಿನು. ನನಗೆ ಜೀವದಾನ ಕೊಡಿರೆಂದು ಬೇಡಿಕೊಳ್ಳಹತ್ತಿದನು; ಬೇಗನೆ ತಲೆಬಾಗಿಲನ್ನು ಹಾಕಿಸಿರೆಂದು ಮೊರೆಯಿಟ್ಟನು.

ಲಕ್ಷ್ಮಣರಾಯರಿಗೆ ಒಡಕಣ್ಣನ ಗುರುತು ಹತ್ತಿತು. ಇಂತಹ ದೊಡ್ಡ ದೇಸಾಯರು ನನಗೇಕೆ ಇಷ್ಟು ಅಂಗಲಾಚಿ ಬೇಡಿಕೊಳ್ಳುತ್ತಿರಬಹುದು ಎಂದು ಅವರು ಬೆರಗಾದರು. ಆದರೂ ತಲೆಬಾಗಿಲನ್ನಿಕ್ಕಿ, ಒಡಕಣ್ಣನನ್ನು ಊಟಮಾಡಿದಿಂದು ಎಬ್ಬಿಸಿದರು. ಒಡಕಣ್ಣನು, "ರಾಯರ! ನಾ ಈಗ ಊಟಾ ಮಾಡೂಹಾಂಗಿಲ್ಲ. ನನಗೆ ಯಮದೂತರು ಗಂಟುಬಿದ್ದಾರ. ಅವರಿಂದ ನನ್ನ ಪಾರುಮಾಡಿರಿ. ಸಾಯೋತನಕ ನಿಮ್ಮ ಅನ್ನಾನss ಊಟ ಮಾಡಿಧಾಂಗ ಆಗತದ. ತಡ ಮಾಡಬ್ಯಾಡ್ರಿ. ನನ್ನ ಅಡಗಿಸರಿ." ಎಂದು ದೈನ್ಯೋಕ್ತಿಯಿಂದ ಬೇಡಿಕೊಂಡನು.

ಅಷ್ಟರಲ್ಲಿ ಯಾರೋ ಬಂದು ಬಾಗಿಲ ಬಡಿದಂತಾಯಿತು. ಒಡಕಣ್ಣನು, ಶಾನುಭೋಗರ ಸೆರಗು ಹಿಡಿದು, ಹಿತ್ತಲಕಡೆಗೆ ಓಡಿದನು. ಅವನು "ರಾಯರ, ಯಮದೂತರು ಇಲ್ಲಿಗೇ ಬಂದರು. ಎಲ್ಲಿ ಅಡಗಲಿ ಹೇಳ್ರಿ? ನಾ ಇಲ್ಲಿ ಬಂದ ಸುದ್ದಿ ಯಾರಿಗೂ ತಿಳಿಸಬ್ಯಾಡ್ರಿ. ನಾನೊಬ್ಬಾವ ನಿಮ್ಮ ಮಗ. ನನ್ನ ಉಳಿಸಿಕೊಳ್ಳಿರಿ," ಎಂದು ಬಿಕ್ಕಿ ಬಿಕ್ಕಿ ಅಳುತ್ತ ಮೊರೆ ಯಿಟ್ಟನು.

ಲಕ್ಷ್ಮಣರಾಯರಿಗೆ ಕನಿಕರಹುಟ್ಟಿತು. ಅವರು ಅವನನ್ನು ಹಿತ್ತಲಲ್ಲಿ ಬತ್ತಹಾಕಿದ ಪಣತದಲ್ಲಿ ನಿಚ್ಚಣಿಕೆಯಿಟ್ಟು ಇಳಿಸಿ, ಮೇಲೆ ಚಪ್ಪರವನ್ನು ಇಳಿದಿಟ್ಟು ಹೊರಗೆ ಬಂದರು. ರಾಯರ ಮನೆಯಮುಂದೆ ನಾಲ್ಕಾರು ಜನರು ಬಂದು ಬಾಗಿಲ ಬಡಿಯುತ್ತ ನಿಂತಿದ್ದರು. ರಾಯರು ಬಾಗಿಲನ್ನು ತೆರೆದರು. ಬಂದವರು "ನಿಮ್ಮ ಮನಿಗೆ ಒಬ್ರು ಮಹಾಪುರುಷರು ಬಂದಾರಂತ. ಅವರೆಲ್ಲಿದ್ದಾರ?" ಎಂದು ಆರ್ಭಟಿಸಿ ಕೇಳಿದರು.

ಲಕ್ಷ್ಮಣರಾಯರು, "ನಮ್ಮ ಮನಿಗೆ ಯಾರೂ ಬಂದಿಲ್ಲ. ಇಲ್ಲಿ ಇನ್ನೊಂದು ಶಾನುಭೋಗರ ಮನಿ ಅದ. ಅಲ್ಲಿ ಹೋಗಿರಬಹುದು' ವಿಚಾರಿ

ಸಿರಿ" ಎಂದು ಹೇಳಿ ತಲೆಬಾಗಿಲನ್ನು ಹಾಕಿದರು, ಬಂದವರು "ಹೌದು" ಎಂದು ಕುಲಕರ್ಣಿ ಗುರುರಾಯರ ಮನೆಗೆ ತೆರಳಿದರು.

## ೮. "ನಾರೀಚೋರನಾಟಕ"

ಭರಮಣ್ಣನು ಇಂದು ಒಡಕಣ್ಣನ ಪ್ರಾಣವನ್ನು ಹೀರಿಯೇ ಬರುವ ನೆಂದು ಹುಲಿಯಂತೆ ಆರ್ಭಟಿಸುತ್ತಾ ಹೊರಟಿದ್ದನು. ಅವನ ಸಂಗಡಿಗರ ಬಡಿಕೆ, ಕುಡಗೋಲು, ಕಂದಲಿ, ಕವಣೆ, ಬರ್ಚಿಗಳನ್ನು ಹಿಡಿದುಕೊಂಡ ನಾಲ್ಕಾರು ಗೊರವೆ ಕಟ್ಟಿಗೆ ದೀಪದ ಪೆಟ್ಟಿಗೆಗಳನ್ನೂ ತೆಗೆದುಕೊಂಡು ಭ ಮಣ್ಣನ ಹಿಂದಿನಿಂದ ಓಡುತ್ತ ನಡೆದಿದ್ದರು. ಅವರು ಒಳ್ಳೆಯ ಗಟ್ಟಿಗರು ಅಡವಿಯಲ್ಲಿ ನಡುರಾತ್ರಿಯಲ್ಲಿ ತಿರುಗುವ ಬಂಟರು. ಒಬ್ಬೊಬ್ಬರು ನಾಲ್ಕಾ ಜನರನ್ನು ಎದೆಬಡೆಯುಬಲ್ಲವರು. ಒಡಕನ ಪರಿವಾರದವರನ್ನೆಲ್ಲ ಬಗ್ಗು ಡಿದು ನಿಂಗವ್ವನನ್ನು ತರದಿದ್ದರೆ ತಾವು ಗಂಡಸರೇ ಅಲ್ಲವೆಂದು ಪಣತೊಟ್ಟ ಹೊರಟವರು, ಅರ್ಧ ತಾಸು ಹೊತ್ತಿನಲ್ಲಿ ಅವರು ಮೂರು ಮೈಲು ಓ ಬಂದರು. ಆಗ ಅವರಿಗೆ ಒಡಕನು ಹತ್ತಿದ ಕುದುರೆಯ ಖುರಪುದ ಸಪ್ಪ ಕೇಳಬಂತು, ಮುಂದೆ ಭಯಂಕರವಾದ ಅರಣ್ಯ. ಇನ್ನು ಒಂದು ಮೈ ನಲ್ಲಿರುವ ಹಳ್ಳದ ತಗ್ಗಿನಲ್ಲಿಯ ಒಡಕನನ್ನು ಹಿಡಿಯುವೆನೆಂದು ಅವ ನಿರ್ಧರಿಸಿದರು. ಬಳಿಕ ಒಣ ಹುಲ್ಲು ಕೂಡಿಸಿ, ಅದಕ್ಕೆ ಕೊಳ್ಳಿ ಚ್ಚಿ ತಮ್ಮ ಗೊರವೆಕಟ್ಟಿಗೆಗಳನ್ನು ಹೊತ್ತಿಸಿಕೊಂಡರು. ಸಂಗಡಿಗರು ಮ ಯಲ್ಲಿ ಕವಣೆಗಲ್ಲುಗಳನ್ನು ಆರಿಸಿ ತುಂಬಿ ತಮ್ಮ ಆಯುಧಗಳನ್ನೆಲ್ಲ ಹಿಡಿ ಕೊಂಡು ಆವೇಶದಿಂದ ಹಳ್ಳದ ಇಳುಕಲನ್ನು ಇಳಿದರು.

ಗೊರವೆ ಕಟ್ಟಿಗೆಯ ಉರಿಯ ಬೆಳಕಿನಲ್ಲಿ ಕೇರಹುಲಿಯು ಒಡಕಣ್ಣ ಕುದುರೆಯನ್ನು ಎಳೆದೊಯ್ಯುವುದನ್ನು ಅವರು ನೋಡಿದರು; ತಾವು ಹು ಕುತ್ತಿರುವ ಬೇಟೆ ಕೈಗೆ ಸಿಕ್ಕಿತೆಂದು ಉಬ್ಬಿ, ಗೊರವೆ ಕಟ್ಟಿಗೆಗಳನ್ನು ಮೇ ಕ್ಕೆತ್ತಿ. ಸುತ್ತಲಿನ ಗಿಡಗಳ ಹಂಗಳನ್ನು ನೋಡಿದರು. ಎಲ್ಲಿಯೂ ಒಡ ಣ್ಣನ ಸುಳಿವು ಹತ್ತಲಿಲ್ಲ. ಕವಣೆಗಲ್ಲುಗಳನ್ನು ಸುತ್ತಲೂ ಸುರಿದು, ಲಾಲಿ ಕೇಳಿದರು. ಮನುಷ್ಯರ ಧ್ವನಿಯೆ ಹೊರಡಲಿಲ್ಲ. ಮುಂದೆ ಸ್ವಲ್ಪ ದೂ ದಲ್ಲಿ ಚಕ್ಕಡಿಯ ಗಾಲಿಗಳ ಸಪ್ಪಳು ಮಂದವಾಗಿ ಕೇಳಹತ್ತಿತು. ಕೃತಃ

ನಾದ ಒಡಕನು ತನ್ನ ಕುದುರೆಯನ್ನು ಹುಲಿಗೆ ಬಲಿಕೊಟ್ಟು, ಚಕ್ಕಡಿಯ ನ್ನೇರಿ ಹೋಗಿರಬಹುದೆಂದು ಅವರು ಭಾವಿಸಿದರು. ಅವರಿಗೆ ಹುಲಿಯ ಭಯವಿರದ್ದರಿಂದ ಚಕ್ಕಡಿಯನ್ನು ಹಿಡಿಯಬೇಕೆಂದು ಅವರು ಓಡುತ್ತ ನಡೆದರು. ಚಕ್ಕಡಿಯ ಸಪ್ಪಳು ಸಮೀಪವಾಗುತ್ತಲೆ ಗೊರವೆ ಕಟ್ಟಿಗೆಗಳನ್ನು ಆರಿಸಿದರು. ಒಡಕನ ಸಮಾಚಾರವನ್ನು ನಾನೇ ತೆಗೆದುಕೊಳ್ಳುನೆಂದು ಭರಮಣ್ಣನು ಅಡವಿಯಲ್ಲಿ ಅಡ್ಡಬಿದ್ದು ಓಢತೊಡಗಿದನು. ಅವನ ಸಂಗಡಿಗರಲ್ಲಿ ನಾಲ್ವರು ಅವನನ್ನು ಹಿಂಬಾಲಿಸಿದರು. ತುಸುಹೊತ್ತಿನಲ್ಲಿ ಅವರು ಚಕ್ಕಡಿಯ ಮುಂದೆ ಬಂದರು

ಭರಮಣ್ಣನು ಚಕ್ಕಡಿ ಹೊಡೆಯುವವನಿಗೆ ಬಲವಾಗಿ ಬಡಿಗೆಯಿಂದ ಏಟುಕೊಟ್ಟನು. ಅವನು "ಅಯ್ಯೋ ಸತ್ತೆ" ಎನ್ನುತ್ತಾ ನೆಲಕ್ಕುರುಳಿದನು. ಆ ದನಿಯನ್ನು ಕೇಳಿ ಚಕ್ಕಡಿಯ ಹಿಂದಿನಿಂದ ಬರುತ್ತಿದ್ದ ಒಡಕಣ್ಣನ ಪುಂಡರು ಬಡಿಗೆಗಳನ್ನು ಬೀಸುತ್ತಾ ಆರ್ಭಟಿಸಿ ಬಂದರು. ಅಷ್ಟರಲ್ಲಿ ಭರಮಣ್ಣನೂ ಅವನ ಸಂಗಡಿಗರೂ ಎಡಬಲಕ್ಕೆ ಸರಿದು ಸಿಳ್ಳುಹೊಡೆದರು ಕೂಡಲೆ ಸುಯಿಗುಡುತ್ತ ಕವಣೆಗಲ್ಲುಗಳು ಬರತೊಡಗಿದುವು. ಒಡಕಣ್ಣನ ಪುಂಡರು ಹೌಹಾರಿದರು. ಅವರು ಬೆದರಿ ಅಡವಿಯಲ್ಲಿ ಅಡಗಿಕೊಳ್ಳಲು ಹವಣಿಸಿದರು. ಆದರೆ ಎಡಬಲಗಳಿಂದಲೂ ಕಲ್ಲು ಬರತೊಡಗಿದುವು. ದುಡ್ಡಿನಾಸೆಗೆ ಬಿದ್ದು, ಸೆರೆಯ ಮಬ್ಬಿನಲ್ಲಿ ಬಂದ ಪುಂಡರು ಜೀವಗಳ್ಳರಾಗಿ ಚಕ್ಕಡಿಯ ಬುಡದಲ್ಲಿ ಅಡಗಿಕೊಂಡರು. ಆಗ ಭರಮಣ್ಣನೂ ಸಂಗಡಿಗರೂ ಆವೇಶದಿಂದ ಅವರ ಮೈಮೇಲೆ ಬಿದ್ದು ಬಡಿಗೆಯಿಂದ ಬಡಿಯಹತ್ತಿದರು. ಜೀವದ ಹಂಗುದೊರೆದು ಕಾದಾಡುವವರಿಗೆ ದುಡ್ಡಿನಾಸೆಗೆ ಬಂದವರು ಈಡಾದಾರೆ? ಅವರು ಭರಮಣ್ಣನ ಪಂಗಡದವರ ಕಾಲಿಗೆ ಬಿದ್ದು ಜೀವದಾನ ಕೊಡಿರೆಂದು ಬೇಡಿಕೊಳ್ಳತೊಡಗಿದರು. ಭರಮಣ್ಣನ ಸಂಗಡಿಗರು "ಎಲೇ ರಣಹೇಡಿಗಳೇ! ನಿಮ್ಮನ್ನ ಕೊಂದರ ನಮಗ ಬರೋ ಭಾಗ್ಯ ಏನು? ಆ ಒಡಕನ್ನ ತೋರಿಸಿರಿ. ನಿಮಗ ಜೀವದಾನ ಕೊಡತೇವಿ. ಇಲ್ಲದಿದ್ದರ ನಿಮ್ಮನ್ನ ಇರಿದು ಕೊಲ್ಲತೀವಿ" ಎಂದು ತಮ್ಮ ಕೈಯೊಳಗಿನ ಕುಡುಗೋಲು ಕಂದಲಿ, ಬರ್ಚಿಗಳನ್ನು ತೋರಿಸಿದರು.

ಒಡಕಣ್ಣನ ಪುಂಡರು "ಆ ರಾವಣ ನಮ್ಮನ್ನ ಮುಂದೊಡ್ಡಿ ತಾ ಹಿಂದ ತಪ್ಪಿಸಿಗೊಂಡ. ಅವ ನಮ್ಮನ್ನ ಕೂಡಿಲ್ಲ. ನಾವು ಹೊಲಿಗೆಲಸ ಮಾಡಿದಿವಿ. ದೊಡ್ಡ ದೇಸಾಯಿ ಅಂತ ಮಬ್ಬಿಗೆ ಬಿದ್ದಿವಿ. ಪಾಪಕ್ಕ ತಕ್ಕ ಪ್ರಾಯಶ್ಚಿತ್ತ ಆಗೇತಿ. ನಿಮಗ ಸೆರಗೊಡ್ಡಿ ಬೇಡಿಕೊಂತೀವಿ. ಇನ್ನ ಸಾಯೋಮಟ ಇಂತಾ ಕೆಲಸ ಮಾಡೂದಿಲ್ಲ. ದಯಮಾಡಿ ನಮ್ಮನ್ನ ಬಿಡ್ರಿ. ನಿಮ್ಮ ವಸ್ತು ನಿಮಗ ಒಪ್ಪಿಸಿ ನಾವು ಹೋಕ್ಕೀವಿ ಆ ಒಡಕನ ಪ್ರಾಣ ಹೀರಾಕ ನಾವೂ ಸಹಾಯ ಆಗ್ತೀವಿ" ಎಂದು ಬಹು ದೈನ್ಯದಿಂದ ಬೇಡಿಕೊಂಡರು. ಆಗ ಚಕ್ಕಡಿಯಲ್ಲಿಯ ನಿಂಗವ್ವನ ಗತಿ ಏನಾಗಿರಬಹುದೆಂಬುವನ್ನು ಓದುಗರೇ ತರ್ಕಿಸಬೇಕು.

ಭರಮಣ್ಣನ ಗೆಳೆಯರು ತಮ್ಮ ತಮ್ಮೊಳಗೆ ಏನೇನೋ ಕುಚುಕುಚು ಮಾತನಾಡಿಕೊಂಡು ಚಕ್ಕಡಿಯನ್ನು ಒಯ್ದವರು. ಭರಮಣ್ಣನು ಚಕ್ಕಡಿಯನ್ನೇರಿ, ನಿಂಗೆಯನ್ನು ಚನ್ನಾಗಿ ಬಡಿದು ಅವಳ ಕೈಕಾಲುಗಳನ್ನು ಕಟ್ಟಿ ಚಕ್ಕಡಿಯಲ್ಲಿ ಬಿಗಿದನು. ಚಕ್ಕಡಿಯು ದೊಡ್ಡೀಕೊಪ್ಪದ ಕಡೆಗೆ ಹೊರಟಿತು. ಒಡಕಣ್ಣನಿಗೆ ಸಹಾಯ ಮಾಡಬಂದ ಪುಂಡರಿಗೆಲ್ಲ ಮೈಮುರಿ ಬಡಿತಗಳೂ, ಕವಣೆಗಲ್ಲಿನ ಗಾಯಗಳೂ ಆಗಿದ್ದವು. ಅವರು ಜೀವ ಉಳಿಸಿಕೊಂಡು ಏಳುತ್ತ ಬೀಳುತ್ತ ಬೊಮ್ಮೀಗೇರಿಗೆ ಬಂದು ಮುಟ್ಟಿದರು.

ಭರಮಣ್ಣನ ಸಂಗಡಿಗರು ಒಡಕನನ್ನು ಹುಡುಕುವ ಹಂಚಿಕೆಗಳನ್ನೂ ಹಾಕುತ್ತಾ ಬಂಡಿಯ ಹಿಂದಿನಿಂದ ನಡೆದರು. ಜೀವಗಳ್ಳನಾದ ಒಡಕನು ಹುಲಿಗೆ ಹೆದರಿ, ಹಿಂದಿರುಗಿ ಹೋಗಿರಬೇಕೆಂದು ಅವರು ತರ್ಕಿಸಿದರು. ಬಳಿಕ, ಅವರಲ್ಲಿಬ್ಬರು ನಟ್ಟಿಗರನ್ನು ಬಂಡಿಯೊಡನೆ ದೊಡ್ಡೀಕೊಪ್ಪಕ್ಕೆ ಕಳುಹಿ, ಉಳಿದವರು ಗೊರವೆ ಕಟ್ಟಿಗೆಗಳನ್ನು ಹೊತ್ತಿಸಿಕೊಂಡು ಅಡವಿಯಲ್ಲಿ ಹರಿಬಿದ್ದು ಒಡಕಣ್ಣನು ಹೋದ ಮಾರ್ಗವನ್ನು ಶೋಧಿಸಹತ್ತಿದರು. ಅವರಲ್ಲೊಬ್ಬನಿಗೆ ಒಡಕನು ಹೊದ್ದುಕೊಂಡಿದ್ದ ಜರದ ಸೆಲ್ಲೆಯು ಸಿಕ್ಕಿತು. ಕೂಡಲೆ ಅವನು ಸಿಳ್ಳು ಹೊಡೆದನು. ಅಡವಿಯಲ್ಲಿ ಹರಿಬಿದ್ದವರೆಲ್ಲ ಸಿಳ್ಳಿನ ಶಬ್ದವಾದ ಸ್ಥಳಕ್ಕೆ ಒಟ್ಟುಗೂಡಿದರು. ಬಳಿಕ ಒಡಕನು ಇದೇ ದಿಕ್ಕಿನಿಂದ ಹೋದನೆಂದು ನಿರ್ಧರಿಸಿ ಅವರೆಲ್ಲರೂ ಮುಂದಕ್ಕೆ ನಡೆದರು. ಕುಸ

ಮುಂದೆ ಹೋಗುವಷ್ಟರಲ್ಲಿ ಒಡಕಣ್ಣಿನ ಜರದ ರುಮಾಲವೂ ಅವರಿಗೆ ದೊರೆಯಿತು ಒಡಕನು ವೀರಾಪುರದ ಕಡೆಗೆ ಹೋದನೆಂಬುದು ಅವರಿಗೆ ಮನವರಿಕೆಯಾಯಿತು. ಕೂಡಲೆ ಅವರು ಕಾಲುದಾರಿಯಿಂದ ಓಡುತ್ತ ನಡೆದರು ನಾಯಿಗಳ ಬೊಗಳುವಿಕೆಯನ್ನು ಕೇಳಿ, ಅವನು ಊರಲ್ಲಿ ಹೊಕ್ಕನೆಂಬುದನ್ನು ಅರಿತರು. ಗೊಂಡೆ ಕಟ್ಟಿಗೆಗಳನ್ನು ಆರಿಸಿ, ಅವರೂ ಊರಲ್ಲಿ ಹೊಕ್ಕರು.

ವೀರಾಪುರವು ದೊಡ್ಡಿಕೊಪ್ಪದ ನೆರೆಹಳ್ಳಿ. ಭರಮಣ್ಣಾ ಮೊದಲಾದವರಿಗೆ ಆ ಹಳ್ಳಿಯ ರೈತರೆಲ್ಲ ಪರಿಚಯ. ಆದುದರಿಂದ ಒಡಕನು ಹೋಗಿರುವ ಮನೆಯನ್ನು ಶೋಧಿಸುವುದು ಅವರಿಗೇನು ಕಷ್ಟವಾಗಲಿಲ್ಲ. ನಾಲ್ಕಾರು ಮನೆ ತಿರುಗಿ, ಅವನು ಶಾನುಭೋಗರ ಮನೆಗೇ ಹೋದನೆಂಬುದನ್ನು ತಿಳಿದುಕೊಂಡರು. ಆ ಹಳ್ಳಿಯಲ್ಲಿ ಶಾನುಭೋಗರ ಮನೆಗಳು ಎರಡಿದ್ದುದರಿಂದ ಅವರು ಮಬ್ಬಿಗೆ ಬಿದ್ದು, ಅತ್ತಿಂದಿತ್ತ, ಇತ್ತಿಂದತ್ತ ಸುತ್ತರಿಯುವ ಹೊತ್ತು ತಂದುಕೊಂಡರು. ಕೊನೆಗೆ ಒಡಕನು ಲಕ್ಷ್ಮಣರಾಯರ ಮನೆಯಲ್ಲಿಯೆ ಅಡಗಿರುವನೆಂಬುದನ್ನು ನಿರ್ಧರಿಸಿ, ಅವರ ಮನೆಯ ಸುತ್ತಲೂ ಕಾಯುತ ಗುಪ್ತವಾಗಿ ಕುಳಿತುಕೊಂಡರು.

ಒಳಗೆ ಲಕ್ಷ್ಮಣರಾಯರಿಗೆ ಚಿಂತೆಯಾಯಿತು, ಒಡಕಣ್ಣಿನ ವಿಚಿತ್ರ ಸ್ಥಿತಿಯನ್ನು ನೋಡಿ ಅವರಿಗೆ ಆಶ್ಚರ್ಯವಾಗಿತ್ತು. ಇವನೊಬ್ಬ ದೊಡ್ಡ ದೇಸಾಯಿ ಎಂಬುದಿಷ್ಟೆ ಅವರಿಗೆ ಗೊತ್ತಿತ್ತು. ಇಂತಹ ದೊಡ್ಡ ಮನುಷ್ಯನಿಗೆ ಬಂದ ವಿಪತ್ತಾದರೂ ಏನಿರಬಹುದು ಎಂದು ಅವರು ಎಣಿಕೆ ಹಾಕತೊಡಗಿದರು. ಪ್ರಾಣಭಯದಿಂದ ಪಲಾಯನ ಮಾಡಿ, ಅಡಗಿಕೊಂಡು ಕು ಇವನು ಭಯಂಕರವಾದ ಕೃತ್ಯವನ್ನು ಮಾಡಿರಲಿಕ್ಕೆಬೇಕು. ಇವನೇ ಕೊಲೆ ಮಾಡಿದ್ದಾನೋ, ಕುಲೀನ ಸ್ತ್ರೀಯರ ಮೇಲೆ ಬಲಾತ್ಕಾರ ಮಾ ದ್ದಾನೋ—, ಯಾರು ಬಲ್ಲರು! ಕೊಲೆಗಡಕರು ರಣಹೇಡಿಗಳೂ ಜೀವಭೀತರೂ ಇರುವುದಿಲ್ಲ. ಇವನ ಸ್ಥಿತಿಯನ್ನು ನೋಡಿದರೆ ಇವನು ಸ್ತ್ರೀಯ ಮೇಲೆ ಬಲಾತ್ಕಾರವನ್ನೇ ಮಾಡಿರಲಿಕ್ಕೆಬೇಕು. ಹೊಟ್ಟೆಯುರಿದವ ಇವನನ್ನು ಬೆನ್ನಟ್ಟಿರಬಹುದು.

ಈ ತರ್ಕದಿಂದ ಅವರ ಮೈ ನಡುಗಿತು. ಇಂತಹನನ್ನು ಬೆನ್ನಿಗೆಹಾಕಿಕೊಂಡ ತಮಗೆ ಭಯಂಕರವಾದ ಸಂಕಟಬರಬಹುದು ಎಂದು ಅಂಜಿಕೊಂಡರು. ಆದರೂ ಮರೆಹೊಕ್ಕವರನ್ನು ರಕ್ಷಿಸುವುದು ಸತ್ಪುರುಷರ ಕರ್ತವ್ಯವಾದುದರಿಂದ- ಬಂದದ್ದು ಬರಲಿ,— ಇವನನ್ನು ಏನಾದರೂ ಹಂಚಿಕೆ ಮಾಡಿ ರಕ್ಷಿಸಲೆಬೇಕು ಎಂದು ನಿರ್ಧರಿಸಿ ಮಲಗಿಕೊಂಡರು.

ಬೆಳತನಕ ಅವರಿಗೆ ಕಣ್ಣಿಗೆ ಕಣ್ಣು ಹತ್ತಲಿಲ್ಲ. ಅಂದು ರಾತ್ರಿ ಅವರು ಬಾಗಿಲನ್ನೂ ತೆರೆಯಲಿಲ್ಲ. ಬೆಳಗಾದ ಮೇಲೆ ಎದ್ದು ಊರಲ್ಲಿ ತಿರುಗಾಡಹತ್ತಿದರು. ಬಸವಣ್ಣದೇವರ ಗುಡಿಯಲ್ಲಿ ಬಹಳ ಜನರು ನೆರೆದಿದ್ದರು. ಶಾನುಭೋಗರು ಸಹಜವಾಗಿ ಗುಡಿಯೊಳಗೆ ಇಣುಕಿ ನೋಡಿದರು. ಕೂಡಲೆ ಮೇಟಿಯ ಬಸಪ್ಪನೆಂಬ ಆ ಊರ ಪ್ರಮುಖ ರೈತನು ಎದ್ದು ಬಂದು, ಅವರನ್ನು ಒಳಗೆ ಕರೆದೊಯ್ದನು. ಅಲ್ಲಿ ಕುಳಿತ ಲಿಂಗನಗೌಡರು ಇವರನ್ನೇ ಉದ್ದೇಶಿಸಿ, "ರಾಯರ! ನಿಮ್ಮಂಥವರು ನೀಚರಿಗೆ ಆಶ್ರಯ ಕೊಡಬಾರದು. ನಿಮಗೂ ನಾಕಾರು ಹೆಣ್ಣುಮಕ್ಕಳು ಅದಾರ ತಿಳಿದುನೋಡಿರಿ. ಮನೀ ಬೆಂಕಿ ಅಂತ ಮುದ್ದು ಕೊಡೋದು ತರ ಅಲ್ಲ. ನೀತಿ ಮಾರ್ಗ ಬಿಟ್ಟವ ನರರಾಕ್ಷಸ. ಅವಗ ತಕ್ಕ ಶಾಸನ ಆಗಾಕಬೇಕು- ನೀವು ತಿಳಿದವರು ವಿಚಾರಮಾಡಿ ನೋಡಿರಿ" ಎಂದು ಗಂಭೀರವಾಗಿ ನುಡಿದರು.

ಲಕ್ಷ್ಮಣರಾಯರು, "ಏನು ಗೌಡರ! ಇದೇನು ಕವಡುಗಂಟಿಕ ಮಾತು ಆಡತೀರಿ? ನಿಮ್ಮ ಮಾತಿನ ಮರ್ಮ ಏನೂ ನನಗ ತಿಳೀವಲ್ಲದು. ನಾನು ದುಷ್ಪರ್ಶ ಮೆಟ್ಟಿ ತುಳಿಯುವ ಅಂಬೋದು ನಿಮಗ ಗೊತ್ತದ. ನಡೆದ ಸಮಾಚಾರ ಹೇಳಿದರ, ನಾನೂ ನಿಮಗ ಸಹಾಯ ಆದೇನು" ಎಂದು ಗಂಭೀರವಾಗಿಯೆ ಉತ್ತರಕೊಟ್ಟರು.

ಆಗ ಮೇಟಿಯ ಸಿದ್ದಪ್ಪನು ದೊಡ್ಡೀಕೊಪ್ಪದ ಕೆಂಚಣ್ಣನ ಮನೆಯಲ್ಲಿ ಒಡಕಪ್ಪ ದೇಸಾಯಿಯು ಮಾಡಿದ ಕೃತಿಯನ್ನೆಲ್ಲ ಬಣ್ಣಿಸಿ ಹೇಳಿದನು. ಅದಕ್ಕೆ ಲಕ್ಷ್ಮಣರಾಯರು, "ಇಂಥ ಮೂರ್ಖರಿಗೆ ತಕ್ಕ ಶಾಸನ ಆಗಲಿಕ್ಕೇಬೇಕು. ಅದನ್ನ ಮಾಡೋದು ನಮ್ಮಿಂದಾಗದಿದ್ದರ ದೇವರಾದರೂ ಅವರಿಗೆ ತಕ್ಕ ಪ್ರಾಯಶ್ಚಿತ್ತ ಮಾಡತಾನ. ಆದರ ಈ ಒಡಕಪ್ಪಗೂ ನನಗೂ ಏನು ಸಂಬಂಧ? ನನಗ ಅವನ ಗುರುತು ಸಹಿತ ವಿಶೇಷ ಇಲ್ಲ. ಆ ಮೂರ್ಖ

ಅಕೃತ್ಯ ಮಾಡಿದ್ದರ ಗೌಡರು ನನ್ನ ಮ್ಯಾಲ್ಯಾಕ ಹರಿಹಾಯೋದು?" ಎಂದು ಏನನ್ನೂ ಅರಿಯದವರಂತೆ ನುಡಿದರು.

ಅದಕ್ಕೆ ಸಿದ್ಧಪ್ಪನು, "ರಾಯರ, ಆ ಉಂಡಮನೀ ಗಳ ಎಣಿಸೋ ದೇಸಾಯಿ ನಿನ್ನೆ ರಾತ್ರಿ ತಪ್ಪಿಸಿಗೊಂಡು ಈ ಊರಿಗೆ ಬಂದಾನಂತ. ಅವ ನಿಮ್ಮ ಮನ್ಯಾಗ ಅಡಗ್ಯಾನಂತ ದೊಡ್ಡೀಕೊಪ್ಪದ ಜನರಿಗೆ ಸಂಶಯ ಐತಿ" ಎಂದು ನಿಜ ಸಂಗತಿಯನ್ನು ಹೇಳಿದನು.

ಆಗ ಲಕ್ಷ್ಮಣರಾಯರು "ಓಹೋ! ಗೌಡರ ಮಾತಿನ ಮರ್ಮ ಈಗ ತಿಳೀತು. ಅದೇನೋ ಶಾಸ್ತ್ರ ಹೇಳತಾರಲ್ಲಾ— ಸೂಳೇ ಪಾಪ ಸನ್ಯಾಸಿಗಂತ. ಆತು, ಗೌಡರ, ನಮ್ಮ ಮನಿಗೆ ಹೋಗೋಣ ನಡೀರಿ. ನಮ್ಮ ಮನಿಯೆಲ್ಲಾ ಹುಡುಕಿ ನಿಮ್ಮ ಸಂಶಯನಿವಾರಣಾ ಮಾಡಿಕೊಳ್ರಿ. ಇಂಥ ಹುಚ್ಚುಹುಳುಕು ನನಗ ತಡಿಯೋದಿಲ್ಲ." ಎಂದು ಆವೇಶದಿಂದ ಎದ್ದು ಗೌಡರೊಡನೆ ತಮ್ಮ ಮನೆಗೆ ಬಂದರು. ಕೂಡಲೆ ಅವರು ಒಳಗೆ ಹೋಗಿ ಹೆಣ್ಣುಮಕ್ಕಳಿಗೆಲ್ಲ ಹಿತ್ತಲಲ್ಲಿ ಹೋಗಹೇಳಿ, ಗೌಡರನ್ನು ತಮ್ಮ ಮನೆಯೊಗೆಲ್ಲಾ ತಿರುಗಾಡಿಸಿಕೊಂಡು ಬಂದರು. ಗೌಡರು ಎಷ್ಟು ಸೂಕ್ಷ್ಮ ದೃಷ್ಟಿಯಿಂದ ಶೋಧಿಸಿದರೂ, ಎಲ್ಲಿಯೂ ಒಡಕನ ಸುಳಿವು ಹತ್ತಲಿಲ್ಲ. ಗೌಡರು ಹೊರಗೆ ಬಂದು, ಅಲ್ಲಿ ಹಾಸಿದ ಗುಡಾರದ ಮೇಲೆ ಕುಳಿತುಕೊಂಡು, "ಆ ನೀಚ ನಿಮ್ಮಮನೀಕಡಿಗೆ ಬಂದದ್ದು ಊರಾಗಿನ ಒಬ್ಬಿಬ್ಬರು ನೋಡಿದರಂತೆ. ಮುಂದ ಅವ ಎಲ್ಲಿ ಜಾರಿದನೋ ಏನೊ! ನೀವೂ ಅವನೂ ಒಂದೇ ಜಾತಿಯವರೂ ಅಂತ ನಿಮ್ಮ ಮ್ಯಾಗ ಆ ಜನರ ಸಂಶಯ ಇತ್ತು. ಈಗ ಎಲ್ಲಾ ಬಯಲಾತಲ್ಲಾ. ರಾಯರ, ನಿಮ್ಮ ಮ್ಯಾಗಿನ ಅರಿಷ್ಟ ದೂರಾತು. ನಾವೂ ನೀವೂ ಒಂದಳ ಆದರ ಹೊರಗಿನವರಿಗೆ ಸಂಶಯ ಬರಬಾರದು ಅಂತ ಗುಡ್ಯಾಗ ಹಾಗ ಅನಬೇಕಾತು ಆ ಮಾತಿಗೆ ತಾವು ಸಿಟ್ಟು ಹಚಕೋಬಾರದು" ಎಂದು ವಿನಯದಿಂದ ಹೇಳಿದರು.

ಲಕ್ಷ್ಮಣರಾಯರು, "ಗೌಡರ, ಸಿಟ್ಟು ಯಾತರದು? ಶ್ರೀಕೃಷ್ಣ ಪರಮಾತ್ಮಗ ಸಹಿತ ಅಪವಾದ ತಪ್ಪಲಿಲ್ಲ. ನಮ್ಮ ಪಾಡೇನು? ನಿನ್ನೆ ನಾವು ಊಟ ಮಾಡಿ ಮಲಗಿದ ಮ್ಯಾಲೆ ಯಾರೋ ಬಂದು ನನ್ನ ಎಬ್ಬಿಸಿದರು

ಆಗ ನಾನು ಬಾಗಲ ತಗದು ಅವರ್ನ ವಿಚಾರಿಸಿದೆ. ಅವರು ಏನೇನೋ ಅಸಂಬದ್ಧ ಮಾತಾಡಿ ಹೊರಟುಹೋದರು. ಆ ಮೂರ್ಖನ್ನ ನಾನು ಅಡ ಗಿಸಿ ಇಟ್ಟಿದ್ದರ, ನಡುರಾತ್ರ್ಯಾಗ ಬಾಗಲ ತಗೀತಿದ್ನೆನೇ? ನೀವ ವಿಚಾರಿ ಸಿರಿ" ಎಂದು ತಮ್ಮ ನಿರ್ಭಯತೆಯನ್ನು ವ್ಯಕ್ತಪಡಿಸಿದರು.

ಆಗ ಅಲ್ಲಿಯೆ ತಲೆಬಾಗಿಲಲ್ಲಿ ನಿಂತಿದ್ದವರು "ದೇಶಕತ್ತಿ ಹತ್ತಿದ ಒಡ ಕನದು ಪಾಪದ ಕೊಡ ಇನ್ನೂ ತುಂಬಿಲ್ಲ. ಈಗ ಪಾರಾಗಿ ಹೋದ. ಹೋಗಲಿ. ಮುಂದಾದರೂ ಅವ ನಮ್ಮ ಕೈಯಾಗ ಸಿಗದ ಹೋಗಾಕಿಲ್ಲ. ನೋಡೋಣ" ಎಂದು ರೊಚ್ಚಿನಿಂದ ನುಡಿದು, ಗೌಡರನ್ನು ಕರೆದುಕೊಂಡು ಗುಡಿಯ ಕಡೆಗೆ ನಡೆದರು.

ಲಕ್ಷ್ಮಣರಾಯರು ಚಾತುರ್ಯದಿಂದ ತಮಗೆ ಬಡಿದುಕೊಂಡ ಅರಿಷ್ಟದ ಅರ್ಧಭಾಗವನ್ನು ಮಾತ್ರ ಕಳೆದುಕೊಂಡರು. ಒಡಕನನ್ನು ಮನೆಬಿಟ್ಟು ಹೊರಗೆ ಹಾಕುವವರೆಗೆ ಅವರ ಅರಿಷ್ಟವು ಪೂರ್ಣವಾಗಿ ಪರಿಹಾರವಾಗುವಂ ತಿದ್ದಿಲ್ಲ. ಅದಕ್ಕೆ ಅವರು ಅನೇಕ ಆಲೋಚನೆಗಳನ್ನು ಹಾಕಹತ್ತಿದರು. ಅಷ್ಟರಲ್ಲಿ ಭಿಕ್ಷುಕನೊಬ್ಬನು "ಅಲಕ್‌ಬಾವಾಜಿ" ಎಂದು ಅವರ ಮನೆಗೆ ಬಂದನು. ಅವನನ್ನು ಕಂಡಕೂಡಲೆ ಅವರಿಗೊಂದು ಹಂಚಿಕೆಯು ಹೊಳೆ ಯಿತು. ಅವರು ಅವನಿಗೆ ಹಿಟ್ಟು ನೀಡಿ, ಅವನೂ ಅವನ ಸಂಗಡಿಗರೂ ಇಳಿದುಕೊಂಡ ಸ್ಥಳವನ್ನು ಕೇಳಿಕೊಂಡರು, ಅದು ಊರು ದಾಟಿ ಅರ್ಧ ಮೈಲಿನ ಮೇಲಿರುವ ಅಡವಿಯ ಹತ್ತಿರವೆಂಬುದನ್ನು ತಿಳಿದುಕೊಂಡು, ಹೊಲಕ್ಕೆ ಹೋಗುವ ನೆವದಿಂದ ಬಾವಾಜಿಗಳ ವಸತಿಯಿದ್ದಲ್ಲಿಗೆ ಹೋದರು.

ಅಲ್ಲಿ ಗಿಡದ ಕೆಳಗೆ ಕುಳಿತು, ಅಲ್ಲಿಯ ಒಬ್ಬ ಬಾವಾಜಿಯನ್ನು ಕರೆದು ಅವನ ಕಿವಿಯಲ್ಲಿ ಏನೇನೋ ಪಿಸುಮಾತಿನಲ್ಲಿ ಹೇಳಿದರು. ಅವನು ಗೋಣು ಅಲ್ಲಾಡಿಸಿ ಒಪ್ಪಿಕೊಂಡನು. ಬಳಿಕ ಅವರು ತಮ್ಮ ಹೊಲದಲ್ಲಿ ತಿರುಗಿ ಮನೆಗೆ ಬಂದರು.

ಮುಂದೆ ಕುಸುಕೊತ್ತಿನಲ್ಲಿಯೆ ಒಬ್ಬ ಬಾವಾಜಿಯು ಭಿಕ್ಷೆಬೇಡುತ್ತ ಲಕ್ಷ್ಮಣರಾಯರ ಮನೆಗೆ ಬಂದನು. ಕೂಡಲೆ ರಾಯರು ಹತ್ತಿರಲ್ಲೆಲ್ಲ ತಿರು ಗಾಡಿ, ಜನರ ಸುಳುವಿಲ್ಲದ್ದನ್ನು ಕಂಡು, ಪಣತಕ್ಕ ನಿಚ್ಚಣಿಕೆಯನ್ನು ಹಾಕಿ, ಅದರ ಮೇಲಿನ ಚಪ್ಪರವನ್ನು ಎತ್ತಿ, ಬತ್ತತೆಗೆಯುವ ನೆವದಿಂದ ಒಳಗಿಳ

ದರು. ಅಲ್ಲಿದ್ದ ಒಡಕಣ್ಣನ' ಸ್ಥಿತಿಯು ಚಿಂತಾಜನಕವಾಗಿತ್ತು; ಬತ್ತದ ಹುಳುಗಳು ಅವನ ಸುತ್ತಲೂ ಮುಕುರಿದ್ದವು. ಮೈಯೆಲ್ಲಾ ದೂಳಿ ಮುಸುಕಿತ್ತು ಬಾಯಾರಿ ಕಳವಳಪಡುತ್ತಾ ಅವನು ಹೊರಳಾಡುತ್ತಿದ್ದನು. ಇನ್ನು ತಾಸೆರಡು ತಾಸಿನಲ್ಲಿಯೆ ತಾನು ಈ ಪಣತದಲ್ಲಿಯೆ ಪ್ರಾಣಬಿಡುವೆನೆಂದು ಅವನು ತಿಳಿದಿದ್ದನು. ಇಂತಹ ಸ್ಥಿತಿಯಲ್ಲಿಯೆ ಅವನು ರಾಯರಿಗೆ ಕೈಮುಗಿದು, ನಾಲಿಗೆಯನ್ನು ಚಾಚಿ ತೋರಿಸಿದನು. ಕೂಡಲೆ ರಾಯರು ಒಂದು ಬುಟ್ಟಿ ಬತ್ತವನ್ನು ಕೆಳಗೆಕೊಟ್ಟು ತಮ್ಮ ಮಗಳಿಗೆ ಬುಟ್ಟಿಯಲ್ಲಿ ಒಂದು ತಂಬಿಗೆ ನೀರು ತುಂಬಿತಾರೆಂದು ಸನ್ನೆಮಾಡಿದರು. ನೀರು ಬಂದ ಮೇಲೆ ರಾಯನು ಒಡಕನ ಬಾಯಲ್ಲಿ ಹನಿಹನಿ ನೀರು ಬಿಡಹತ್ತಿದರು. ಆ ಮೇಲೆ ಅವನ ನಾಲಿಗೆ ತುಸು ಹಸಿಯಾಯಿತು. ರಾಯರು ಮತ್ತೊಂದು ಬುಟ್ಟಿಯನ್ನು ತುಂಬಿಕೊಟ್ಟು ಸಕ್ಕರೆಯನ್ನು ತರಲು ಸೂಚಿಸಿದರು.

ಒಡಕನು ಸಕ್ಕರೆಯನ್ನು ತಿಂದು ತಂಬಿಗೆ ನೀರುಕುಡಿದನು. ಆಗ ಅವನಿಗೆ ಏಳಲಿಕ್ಕೆ ಬಂದಿತು. ಲಕ್ಷ್ಮಣರಾಯರು ನಿಚ್ಚಣಿಕೆಯನ್ನು ಇಟ್ಟು, ಸುತ್ತಲೂ ।ಜನರ ಸುಳಿವಿಲ್ಲದ್ದನ್ನು ತಿಳಿದು, ಒಡಕನನ್ನು ಇಳಿಸಿ, ಒಳಗೆ ಕರೆದುಕೊಂಡು ಹೋದರು. ಬಳಿಕ ಅವರು ಹೊರಗೆ ಹೋಗಿ, ಮನೆಯ ಮುಂದೆ ನಿಂತ ಬಾವಾಜಿಯನ್ನು ಕರೆದರು.

ಅವನು ಬಂದವನೆ ಒಡಕನ ಮೈತುಂಬ ವಿಭೂತಿಯನ್ನು ಬಡಿದನು. ಅವನ ಅಂಗಿ, ದೋತರಗಳನ್ನೆಲ್ಲ ಕಳಚಿ, ಕಟ್ಟಿ, ತನ್ನ ಜೋಳಿಗೆಯಲ್ಲಿ ಹಾಕಿಕೊಂಡು, ತಾನು ತಂದ ಒಂದು ಕೆಂಪಾದ ಹರಕು ಬಟ್ಟೆಯನ್ನು ಅವನಿಗೆ ಸುತ್ತಿದನು; ಕೃತ್ರಿಮ ಜಡೆಯನ್ನೂ, ಗಡ್ಡಮೀಶೆಗಳನ್ನೂ ಕಟ್ಟಿದನು. ಕೊರಳಲ್ಲಿ ರುದ್ರಾಕ್ಷಿಯ ಸರಗಳನ್ನು ಹಾಕಿದನು; ಮುಂಗೈ ಮೊಳಕೈಗಳಲ್ಲಿ ರುದ್ರಾಕ್ಷಿಯ ಸಣ್ಣಸರಗಳನ್ನು ತೊಡಕಿಸಿದನು. ಎಡಗೈ ತೋಳಿಗೆ ಜೋಳಿಗೆಯೊಂದನ್ನು ತೂಗಹಾಕಿ, ಬಲಗೈಯಲ್ಲೊಂದು ತಂಬಿಗೆಕೊಟ್ಟನು. ಒಡಕನು ಗುರುತುಹತ್ತದ ಬಾವಾಜಿಯಾದನು.

ಲಕ್ಷ್ಮಣರಾಯರು ಒಳಗಿನಿಂದ ಬುತ್ತಿಯಗಂಟನ್ನು ತಂದು, ಒಡಕನ ಜೋಳಿಗೆಯಲ್ಲಿಹಾಕಿದರು. ರಾಯರ ಪ್ರಸಂಗವಧಾನಕ್ಕೆ ಒಡಕನು ತಲೆದೂಗಿ

ದನು. ದೊಡ್ಡ ಬಾವಾಜಿಯು ಅವನನ್ನು ಕರೆದುಕೊಂಡು "ಅಲಕ್ ಬಾವಾಜೀ." ಎಂದು ಕೈಯೊಳಗಿನ ಕಬ್ಬಿಣದ ಸಳಿಯನ್ನು ಬಾರಿಸುತ್ತ ನಡೆದರು. ಅವನು ಒಡಕನೊಡನೆ ನಾಲ್ಕಾರುಮನೆ ಭಿಕ್ಷೆಬೇಡಿ, ಊರನ್ನು ದಾಟ ಹೊರಗೆಹೊರಟನು. ಮುಂದೆ ಒಂದು ಕಿರಿದಾದ ಕಾಲುದಾರಿಯಿಂದ ಒಡಕನು ನಡೆದನು. ದೊಡ್ಡ ಬಾವಾಜಿಯು ಅವನನ್ನು ಹಿಂಬಾಲಿಸಿದನು. ಮೂರು ಮೈಲು ಹೋದಮೇಲೆ ಅವರು ಅಡವಿಯಲ್ಲಿಯ ಒಂದು ಕೆರೆಗೆ ಬಂದರು. ಅಲ್ಲಿ ಒಡಕನು ಜೋಳಿಗೆಯೊಳಗಿನ ಗಂಡನ್ನು ಬಿಚ್ಚಿ, ಆ ಬಾವಾಜಿಗೆ ಕುಸು ರೊಟ್ಟಿಬುತ್ತಿಗಳನ್ನು ಕೊಟ್ಟು, ತಾನೂ ತಿಂದು ನೀರು ಕುಡಿದನು. ಮುಂದೆ ಅವರು ಹಾಗೆಯೆ ನಡೆದು ಮೂರೂ ಸಂಜೆಯ ಮುಂದೆ ಬೊಮ್ಮೀಗೇರಿಯ ಹತ್ತರ ಬಂದರು. ಆಗ, ಬದುಕಿದೆನೆಂದು ತಿಳಿದು ಒಡಕಣ್ಣನು ಬಾವಾಜಿಯ ಜೋಳಿಗೆಯಲ್ಲಿದ್ದ ತನ್ನ ಅರಿವೆಗಳನ್ನೆಲ್ಲ ತೆಗೆದು ಕೊಂಡು, ಅಲ್ಲಿಯೆ ಇದ್ದ ಕೆರೆಯಲ್ಲಿ ಸ್ನಾನಮಾಡಿ, ತನ್ನ ಬಾವಾಜಿಯ ವೇಷವನ್ನೆಲ್ಲ, ಬಾವಾಜಿಗೆ ತಿರುಗಿಕೊಟ್ಟು, ತನ್ನ ಅರಿವೆಗಳನ್ನು ಹಾಕಿ ಕೊಂಡನು. ಆ ಮೇಲೆಅ ಲ್ಲಿಯೆ ಕುಳಿತು, ಎರಡುತಾಸು ರಾತ್ರಿಯಾದಮೇಲೆ, ಬಾವಾಜಿಯೊಡನೆ ತನ್ನ ಮನೆಗೆ ಬಂದನು.

ಬೊಕ್ಕತಲೆಯಿಂದ ಮನೆಗೆಬಂದ ಒಡಕಣ್ಣನನ್ನು ನೋಡಿ ಚಂದ್ರಾವತಿಬಾಯಿಯವರಿಗೆ ಗಾಬರಿಯಾಯಿತು. ಒಡಕಣ್ಣನು ಉಸ್ಸೆಂದು ನಿಟುಸಿರು ಬಿಟ್ಟು, ಕುಳಿತುಕೊಂಡು, "ಇವೊತ್ತು ನಾನು ಬದುಕಿ ಬಂದೆದ್ದ್ಹೊಂದು ನನ್ನ ಪೂರ್ವಾರ್ಜಿತಪುಣ್ಯ. ನಿನ್ನೆ ರಾತ್ರಿ ಇಲ್ಲಿಗೆ ಬಲಬೇಕಂತ ಹೊರಟು ಅಡವ್ಯಾಗ ಕೇರಹುಲೀ ಕೈಯಾಗಸಿಕ್ಕೆ. ಕುದರೀವ್ಯಾಲೆ ಅರಿಷ್ಟ ಹೋತು. ಆ ವ್ಯಾಲೆ ಬೆಳತನಕ ಗಿಡದವ್ಯಾಲೆ ಕೂತುಕೊಂಡು ಕಾಲಾ ಕಳದೆ ಹುಲಿ ಕುದರೀನ್ನ ಎಳಕೊಂಡು ಹೋಗಿ ಒಂದು ಪೆಳಿವಳಗ ಅಡಗಿತು. ನನ್ನ ರುಮಾಲ, ಶಲ್ಲೆ ಕುದರೀಸಂಗಾತ ಹೋಗಿಬಿಟ್ಟವು. ಬೆಳಗಾದರೂ ಹುಲಿಯ ಹೆದರಿಕೆಯಿಂದ ಗಿಡಬಿಟ್ಟುಇಳಿಯೋ ಧೈರ್ಯ ನನಗಾಗಲಿಲ್ಲ. ಆರುತಾಸು ಹೊತ್ತು ಏರಿದರೂ, ಹೋಗಿಬರೋ ದಾರಿಕಾರ ರೊಬ್ಬರೂ ನನಗೆ ಕಾಣಿಸಲಿೊಲ್ಲರು. ಏಳು ತಾಸಿನ ಹೊತ್ತಿಗೆ ಆ ಕಡೆಯಿಂದ ಈ ಬಾವಾಜಿ ಒಬ್ಬಾವಬಂದ. ಇವ ನನ್ನ ಗಿಡದಿಂದಿಳಿಸಿ, ಮುಂದ

ಕರಕೊಂಡು ಬಂದ. ಕುಲಸ್ವಾಮಿ ವೆಂಕಟರಮಣನೇ ನನ್ನ ಬದುಕಿಸಿದ. ಬೆಳತನಕ ನಿದ್ದಿಯಿಲ್ಲಾ, ಕೂಳಿಲ್ಲಾ, ನೀರಿಲ್ಲಾ. ಇಲ್ಲೀತನಕ ನಾನು ಹ್ಯಾಂಗ ಬಂದೆ ಅಂಬೋದೇ ನಾ ಹೇಳಲಾರೆ. ನಿಮ್ಮ ಪುಣ್ಯಬಲದಿಂದ ನಾ ದೊಡ್ಡ ಕುತ್ತಿನಿಂದ ಪಾರಾದೆ" ಎಂದು ಕಳವಳಿಸುತ್ತಾ ನುಡಿದು ಅಲ್ಲಿಯೆ ಒರಗಿದನು.

ಈ ಸುದ್ದಿಯನ್ನು ಕೇಳಿ ಚಂದ್ರಾವತಿಬಾಯಿಯವರ ಎದೆಯು ಧಕಧಕ ಹಾರಹತ್ತಿತು. ಅವರು ನೀರನ್ನು ಕಾಸೆಂದು ಹೇಳಿ ಗಂಗೆಯನ್ನು ಬಚ್ಚಲ ಮನೆಗೆ ಕಳುಹಿ, ತಾವು ಒಡಕಣ್ಣನ ಮೈಮೇಲೆ ಕೈಯಾಡಿಸುತ್ತಾ ಕುಳಿತರು. ಅವನ ಮೈಮೇಲಿನ ಬಾಸಾಳುಗಳನ್ನು ನೋಡಿ ಅವರಿಗೆ ಅಂಜಿಕೆಯಾಯಿತು. ಅವನ ಅಂಗಿಯನ್ನು ತೆಗೆದು, ಮೈಗೆ ಎಣ್ಣೆ ಹಚ್ಚಿ, ತಿಕ್ಕುತ್ತಾ "ರಾತ್ರಿ ತಿರುಗ್ಯಾಡಬ್ಯಾಡೋ ಅಂತ ನಾನು ಎಷ್ಟು ಹೇಳಿದರೂ ಕೇಳತಿದ್ದಿಲ್ಲ ನೀನು ಅದರ ಫಲಬೋಗ ಈಗ ಉಂಡಿ" ಎಂದು ಅನ್ನುತ್ತಾ ಕಣ್ಣೀರು ಸುರಿಸಿದರು. ಬಳಿಕ ಅವನನ್ನು ಕೈ ಹಿಡಿದು ಎಬ್ಬಿಸಿ, ಬಿಸಿನೀರಿನಿಂದ ಎರೆದು, ಊಟಕ್ಕೆ ಬಡಿಸಿದರು. ಊಟವಾದಮೇಲೆ ಅವನನ್ನು ಕೋಣೆಯೊಳಗಿನ ಪಲ್ಲಂಗದಮೇಲೆ ಮಲಗಿಸಿ, ಅವನ ಕೈಕಾಲುಗಳನ್ನು ಒತ್ತುತ್ತ ಅಲ್ಲಿಯೆ ಕುಳಿತರು.

ಗಂಗೆಯು ಬಾವಾಜಿಗೆ ಭೋನಮಾಡಿಸಿ, ತಾನೂ ಉಂಡು, ತನ್ನ ಕುಂಕುಮದ ಸೌಭಾಗ್ಯ ಪೂರ್ಣವದೆ ಎಂದು ಅಭಿಮಾನ ಪಡುತ್ತ ನಡುಮನೆಯಲ್ಲಿ ಒರಗಿದಳು. ಒಡಕಣ್ಣನಿಗೆ ಗಾಢ ನಿದ್ರೆಯು ಹತ್ತಿತು. ಅವನು ನಿದ್ದೆಯಲ್ಲಿ ಅಬ್ಬರಿಸಿ ಎದ್ದು, "ಅಯ್ಯೋ ಯಮದೂತರು ಬಂದರು." ಎಂದು ಕೆಟ್ಟದನಿಯಿಂದ ಚೀರಿದನು. ಚಂದ್ರಾವತಿಬಾಯಿಯವರು ಗಾಬರಿಯಾಗಿ ಅವನ ಕಣ್ಣಿಗೆ ನೀರುಹಚ್ಚಿ, ಎಚ್ಚರಪಡಿಸಿದರು. ಒಡಕಣ್ಣನು "ಕೆಟ್ಟ ಕನಸು ಬಿದ್ದಿತ್ತು; ಚೀರಿದೆ" ಎಂದು ನುಡಿಯಲಾಗಿ, ಬಾಯಿಯವರು ಅವನಿಗೆ ಅಂಗಾರವನ್ನು ಹಚ್ಚಿ, ನಿವಾಳಿಯನ್ನು ತೆಗೆದರು. ಇಂತಹ ಸ್ಥಿತಿಯಲ್ಲಿಯೂ ಕೂಡ ಗಂಗೆಗೆ ಗಂಡನ ಸೇವೆಮಾಡುವ ಸೌಭಾಗ್ಯ ದೊರೆಯಲಿಲ್ಲ.

ಒಡಕಣ್ಣನಿಗೆ ವಿಶ್ರಾಂತಿಯು ಯೋಗವಿರಲಿಲ್ಲ. ಏಕೆಂದರೆ ಅಂದು ರಾತ್ರಿ ಬೊಮ್ಮಗೇರಿಯಲ್ಲಿ ದೊಡ್ಡಾಟದ ಅಬ್ಬರ. ಅವರ ಮನೆಯ ಸಮೀಪದಲ್ಲಿಯೆ ಹಂದರ ಹಾಕಿದ್ದಾರೆ. ಅವನ ಪಂಗಡದವರು, ನಿನ್ನೆಯ ಬರುವೆ

ನೆಂದು ಹೇಳಿದ ಒಡಕಣ್ಣಸಿನ್ನೂ ಯಾಕೆಬಂದಿರಲಿಕ್ಕಿಲ್ಲವೆಂದು ಅವನ ದಾರಿ ಕಾಯುತ್ತಾ ಕುಳಿತಿದ್ದಾರೆ. ಅವನ ಸಂಗಡಿಗರಲ್ಲಿ ಬಹು ಜನರು ವೇಷಗ ಳನ್ನು ಕಟ್ಟಿದ್ದಾರೆ. ಒಡಕಣ್ಣನ ಬೆಂಗಾವಲಾಗಿದ್ದ ಭೀಮಣ್ಣನೆ ರಾಮನ ವೇಷಹಾಕಿದ್ದಾನೆ. "ಸಂಪೂರ್ಣ ರಾಮಾಯಣ"ವೆಂಬ ದೊಡ್ಡಾಟವೆಂದ ಮೇಲೆ ಎಷ್ಟು ಹೊತ್ತು ಕಾಯುತ್ತಾರೆ? ಆಟ ಭರದಿಂದ ಸಾಗಿತು. ಎಂಟು ತಾಸುರಾತ್ರಿಯಾಗಿರಬಹುದು; ಒಡಕಣ್ಣನು ಬಂದ ಸುದ್ದಿಯು ಬಸಟ್ಟೆಪ್ಪನಿಗೆ ತಿಳಿಯಿತು. ಅವನು ಚಟ್ಟನೆ ಎದ್ದು, ಒಡಕಣ್ಣನ ಮನೆಗೆ ಬಂದು, ಬಾಗಿಲ ತೆರೆಯಿಸಿ, ಆಟನೋಡಲಿಕ್ಕೆ ಬರಬೇಕೆಂದು ಒಡಕಣ್ಣನಿಗೆ ಆಗ್ರಹ ಮಾಡಿ ದನು. "ನಾನು ಬಹಳ ದಣಿದು ಬಂದೇನಿ, ನಿದ್ದೆಗೇಡಾಗ್ತದ; ಜುಲುಮಿ ಮಾಡಬ್ಯಾಡ್ರಿ" ಎಂದು ಒಡಕಣ್ಣನು ವಿನಯದಿಂದ ಹೇಳಿಕೊಂಡನು. ಬಸ ಟ್ಟೆಪ್ಪನು ಬಿಡಲಿಲ್ಲ; "ನೀವು ಇಲ್ಲದಿದ್ದರ ನಮ್ಮ ಜನಕ್ಕ ಹುರುಪು ಬರೋಹ ಇಲ್ಲ. ಆಟ ಭಣಗುಡತ್ತೈತಿ. ಮೂರು ತಿಂಗಳು ನಿದ್ದೆಗೆಟ್ಟು, ಆಟಕಲಿತು ತಲಿಗೆ ಹತ್ತು ರೂಪಾಯಿ ಪಟ್ಟಿಹಾಕಿ, ಕುಣಿಯುವುದು ಹೆಚ್ಚೋ ನೀವು ಮೂರುತಾಸು ನಿದ್ದೆಗೆಡೋದು ಹೆಚ್ಚೋ? ನಾ ಏನು ಬಿಟ್ಟಪ್ಪನಲ್ಲ. ನೀವು ಏಳಾಕಬೇಕು." ಎಂದು ಒಡಕಣ್ಣನನ್ನು ರಟ್ಟೆಹಿಡಿದು ಎಬ್ಬಿಸಿದರು.

ಅವರು ಹಂದರಕ್ಕೆ ಬಂದಾಗ ರಾವಣವೇಷವು ಆರ್ಭಟಿಸಿ ಕುಣಿಯುತ್ತ ತಾನು ಸೀತೆಯನ್ನು ಅಪಹರಿಸಿ ತಂದ ಪರಾಕ್ರಮದ ಮಾತುಗಳನ್ನು ಹೇಳು ತ್ತಿತ್ತು. ಆ ಮಾತುಗಳನ್ನು ಕೇಳಿ ಒಡಕಣ್ಣನು ತಲೆ ತಗ್ಗಿಸಿದನು. ಅಷ್ಟರಲ್ಲಿ ಲಕ್ಷ್ಮಣವೇಷವು "ಲಾಲಿ"(ರಣೋತ್ಸಾಹ)ಯ ಮೇಲೆ ಬಂತು. ಒಡಕಣ್ಣನ ಸಂಗಡ ನಿಂಗೆಯನ್ನು ಅಪಹರಿಸಲಿಕ್ಕೆ ಹೋದವರಲ್ಲಿ ಒಬ್ಬನು ಈ ವೇಷ ವನ್ನು ಹಾಕಿದ್ದನು. ಅವನು ಒಡಕಣ್ಣನನ್ನು ನೋಡಿ, ಆವೇಶಗೊಂಡು ಒಮ್ಮೆ ರಾವಣನ ಪಾತ್ರದಕಡೆಗೂ, ಒಮ್ಮೆ ಒಡಕಣ್ಣನ ಕಡೆಗೂ ಕೈ ಮಾಡುತ್ತಾ, "ಎಲ್ಲೈನಾರೀಚೋರಾ! ಕೇಳೆಲೋ ನನ್ನಮಾತಿನ ಸಾರಾ. ಕಪಿಗಳು ಮಾಡಿದವೋ ನಿನ್ನವರ ಸಂಹಾರಾ. ದಿಕ್ಕೆಟ್ಟು ಓಡದಲ್ಲೋ ರಣಧೀರಾ! ಕಂಡವರ ಕೈಕಾಲು ಬಿದ್ದಿಯಲ್ಲೋ ಪೋರಾ. ಬೈರಾಗಿಯಾಗಿ ಬಿಕ್ಕೆಬೇಡಿದ ಶೂರಾ! ನಿನ್ನ ಹರಣ ಹೀರಲು ನಾನೇ ಗಂಭೀರಾ ಯುದ್ಧಕ್ಕೆ

ಎದುರಾಗಲೋ ಜಾರಾ- ಹಲಹಲ ಹಲಲಲಲಲ- ವಹವ್ವರೇ ಶಹಬ್ಬಾಸ್ "ಎಂದು ಟಣ್ಣನೆಹಾರಿ, ಅಟ್ಟಕ್ಕೆ ಕಾಲನ್ನು ಅಪ್ಪಳಿಸಿದನು.

ಒಡಕಣ್ಣನ ಎದೆಯೊಡೆದು ನೀರಾಯಿತು. ಅವನು ಗಾಬರಿಯಾಗಿ, ಹೊದ್ದುಕೊಂಡ ಶಾಲನ್ನು ಅಲ್ಲಿಯೆ ಬಿಟ್ಟು, ಕುಳಿತ ಜನರನ್ನು ತುಳಿಯುತ್ತ ಮನೆಗೆ ಕಡೆಗೆ ಓಡಿಹೋದನು. ಆಟವನ್ನು ನೋಡಬಂದವರೆಲ್ಲ ಹಿಂತಿ ರುಗಿ ನೋಡತೊಡಗಿದರು. ಆದರೆ ಒಳಗಿನ ಮರ್ಮವು ಯಾರಿಗೂ ಹೊಳೆ ಯಲಿಲ್ಲ. ಲಕ್ಷ್ಮಣನ ವೇಷಕಟ್ಟಿದವನು ತಾನು ಬಹಳ ಚೆನ್ನಾಗಿ ಮಾತಾ ಡಿದೆನೆಂದು ಉಬ್ಬಿದನು. ಸೆಟ್ಟರ ಬಸೆಟ್ಟೆಪ್ಪನವರು ಅವನಿಗೆ ಒಂದು ಪಾವುಡವನ್ನು ಇನಾಮುಕೊಟ್ಟರು.

ಮುಂದೆ ರಾಮನವೇಷವೂ ವೀರಾವೇಶದಿಂದ ಹಾರಾಡಿ, ಚೀರಾಡಿ, ಉಡುಗೊರೆಯನ್ನು ಪಡೆಯಿತು. ಒಡಕಣ್ಣನು ಬಂದಮೇಲೆಯೆ ವೇಷಾ ಧಾರಿಗಳಿಗೆ ಒಳ್ಳೆಯ ಆವೇಶಬಂತು. ಇದೇನು ಒಡಕನ ಪ್ರತಾಪವೋ, ಕತೆಗಾರನ ಕೌಶಲ್ಯವೋ, ವೇಷಧಾರಿಗಳ ಉತ್ಸಾಹವೋ-ಅರಿಯದ ವಿಷಯ

ಬೆಳಗಾಗುತ್ತಲೆ ಆಟವು ಮುಗಿಯಿತು. ಆಟಕ್ಕಿಂತ ಒಡಕಣ್ಣನು ಓಡಿಹೋದ ವಿಷಯದ ಬಗ್ಗೆ ಊರಲ್ಲೆಲ್ಲಾ ಚರ್ಚೆಯು ಪ್ರಾರಂಭ ವಾಯಿತು. ಒಡಕನ ಸಂಗಡಿಗರಾಗಿ ದೊಡ್ಡೀಕೊಪ್ಪಕ್ಕೆ ಹೋದವರಿಗೆ ಅದರ ಮರ್ಮವು ಹೊಳೆಯಿತು. ಅವರು ಆ ರಹಸ್ಯವನ್ನು ತಮ್ಮ ಮಿತ್ರರಿಗೆ ತಿಳಿಸಿದರು. ಸರಿ, ಮರುದಿವಸ ಬೊಮ್ಮಿಗೇರಿಯ ತುಂಬ ಆ ಸುದ್ದಿಯು ಹಬ್ಬಿತು. ಊರೊಳಗಿನ ಕುಚೋದ್ಯಗಾರರು ಒಡಕಣ್ಣನಿಗೆ ನಾರೀಚೋರ ನೆಂದು ಹೆಸರಿಟ್ಟರು. "ನಾರೀಚೋರನ" ನಾಟಕವನ್ನು ಬರೆಯಿಸಿ ಅದನ್ನು ರಂಗಸ್ಥಳದಲ್ಲಿ ಆಡಿ ತೋರಿಸಬೇಕೆಂದು ಹುರಿದುಂಬಿದರು. ಹಾಗೆ ಬರೆದು ಕೊಟ್ಟವರಿಗೆ ಒಂದು ನೂರು ರೂಪಾಯಿ ಬಹುಮಾನ ಕೊಡುವೆನೆಂದು ಕುಚೋದ್ಯ ಪ್ರಾಸಾದಿಕ ನಾಟಕ ಮಂಡಲಿಯವರು ಪ್ರಸಿದ್ಧಪಡಿಸಿದರು. ಆದರೆ ಬರೆಹಗಾರರೂ ದೊರೆಯದ್ದರಿಂದ ಅವರ ಇಚ್ಛೆ ಇನ್ನೂ ಪೂರ್ಣವಾ ಗಿಲ್ಲ. ರಸಿಕರಾದ ನಾಟಕಕಾರರು ಆ ನಾಟಕವನ್ನು ಬರೆದು ಇನ್ನೂ ಬಹುಮಾನ ಪಡೆಯಬಹುದಂತೆ!

# ೯. ಪುಣೆಯಲ್ಲಿ ಫಜೀತಿ

ಹರೆಯದ ಗುಂಗು ಸೆರೆಯ ಮದಕ್ಕಿಂತ ಹೆಚ್ಚಿನದಂತೆ ಈ ಗುಂಗನ್ನು ಇಳಿಸುವುದಕ್ಕಾಗಿಯೆ ಹಿರಿಯರು ವಿವಾಹವೆಂಬ ಬಂಧನವನ್ನು ಸ್ತ್ರೀಪುರುಷರಿಗೆ ಹಾಕಿರುವರು. ತಾರುಣ್ಯದಲ್ಲಿ ಸ್ವಚ್ಛಂದವಾಗಿ ಹರಿದಾಡುತ್ತಿರುವ ಗಂಡುಹೆಣ್ಣಿನ ಮನೋವೃತ್ತಿಗಳನ್ನು ಪ್ರೇಮರಜ್ಜುವಿನ ಎರಡೂ ತುದಿಗಳಿಂದ ಬಿಗಿದು ತಳಿಕೆ ಹಾಕುವುದೇ ವಿವಾಹದ ಉದ್ದೇಶವು. ಈ ಬಂಧನವನ್ನು ಹರಿದೊಗೆದವರು ಯೌವನಸುರೆಯ ಸೇವನೆಯಿಂದ ಎಚ್ಚರಧಪ್ಪಿ ಹುಚ್ಚೆದ್ದು ಕುಣಿದಾಡುವರು. ಈ ವಿಷಯಕ್ಕೆ ನಮ್ಮ ಒಡಕಣ್ಣನೇ ದೃಷ್ಟಾಂತ. ಇಂದ್ರಿಯ ನಿಗ್ರಹಕ್ಕಾಗಲಿ, ಪ್ರೇಮಕ್ಕಾಗಲಿ ಅವನು ಮದುವೆಯಾಗಲಿಲ್ಲ; ಹೆರವರ ದುಡ್ಡನ್ನು ಹರಣ ಮಾಡುವುದೇ ಅವನ ಉದ್ದೇಶವಾಗಿತ್ತು. ಇದರಿಂದ ಅವನು ಸ್ವೇಚ್ಛಾಚಾರ ಪ್ರವೃತ್ತನಾದದ್ದು ಅರಿದಲ್ಲ. ಅವನ ಈ ಹರೆಯದ ಗುಂಗಿಗೆ ಧನದ ಮದವೂ, ಒಡೆತನದ ದರ್ಪವೂ, ಅವಿವೇಕದ ಆವರಣವೂ ಅನುಕೂಲವಾಗಿದ್ದುವು. ಎಂದ ಮೇಲೆ ಕೇಳುವುದೇನು? ಅವನು ಯಾವ ಆ ಕೃತ್ಯಗಳನ್ನು ಮಾಡುವುದಕ್ಕೂ ಹೇಸಲಿಲ್ಲ. ಅವನ ಪ್ರೇಮವು ಸುಂಟರಗಾಳಿಗೆ ಸಿಕ್ಕ ಸವದೆಯಂತಿತ್ತು.

ಒಮ್ಮೆ ಬೊಮ್ಮೀಗೇರಿಗೆ ಗಿರಿಯಾಲದ ದಾಸರ ಆಟದವರು ಬಂದಿದ್ದರು. ಅವರ ಆಟವನ್ನು ನೋಡಿ, ದಾಸರ ಚಂದ್ರಾಸಾನಿಗೆ ಒಡಕಣ್ಣನು ಮೋಹಿತನಾದನು. ತುಸು ದಿವಸಗಳಲ್ಲಿಯೆ, ಅವಳಿಂದ ಮೇಹರೋಗದ ಪ್ರಸಾದವೂ ಅವನಿಗಾಯಿತು. ಆ ರೋಗದ ತಾಪವನ್ನು ತಾಳಲಾರದೆ ಅವನು ವೈದ್ಯರ ಮನೆಹೊಕ್ಕನು. ಚಂದ್ರಾವತಿಬಾಯಿಯವರೂ ಅವನನ್ನು ಹಿಂಬಾಲಿಸಿದರು. ಗಂಗೆಯು ಮಾತ್ರ ಚೊಕ್ಕ ಚಿನ್ನದಂತೆ ಸ್ವಚ್ಛವಾಗಿದ್ದಳು. ಆಕೆಯು ಪುಣ್ಯ.

ಬರುಬರುತ್ತ ಬೊಮ್ಮೀಗೇರಿಯಲ್ಲಿ ಒಡಕಣ್ಣನ ಒಡೆತನವು ಕಡಿಮೆಯಾಗಹತ್ತಿತು. ಅವನಿಗೆ ಸ್ವಲ್ಪ ಭಯವಾಯಿತು. ದೊಡ್ಡೀಕೊಪ್ಪದ ಭರಮಣ್ಣನ ಭಯವೂ ಅವನಿಗೆ ತಪ್ಪಿದ್ದಿಲ್ಲ. ಹೊಸದೊಂದು ತಂತ್ರವನ್ನು ಹೂಡಿ, ಊರಲ್ಲಿ ತನ್ನ ಪ್ರತಿಷ್ಠೆಯನ್ನು ಕಾಯ್ದುಕೊಳ್ಳಬೇಕೆಂದು ಅವನು

ಹವಣಿಸಿ, ಕಾಶೀಯಾತ್ರೆಯ ನಿರ್ಧಾರ ಮಾಡಿದನು. ಚಂದ್ರಾವತಿಬಾಯಿಯವರ ಒಪ್ಪಿಗೆಯೂ ದೊರೆಯಿತು. ಲಕ್ಷ್ಮೀಪುರಕ್ಕೆ ಕಾಗದ ಬರೆದು, ತಾನು ಸಕುಟುಂಬ ಕಾಶೀಯಾತ್ರೆಗೆ ಹೊರಡುವೆನೆಂದೂ, ಅವರೂ ಸಕುಟುಂಬವಾಗಿ ಯಾತ್ರೆಗೆ ಬರಬೇಕೆಂದೂ ವಿಜ್ಞಾಪನೆ ಮಾಡಿಕೊಂಡನು.

ಅಳಿಯನ ಪತ್ರದಲ್ಲಿದ್ದ ಸಂಗತಿಯನ್ನು ಕೇಳಿ ಭಾಗೀರಥಿಬಾಯಿಯವರಿಗೆ ಪರಮಾನಂದವಾಯಿತು. ತಾವೂ ಯಾತ್ರೆಗೆ ಹೋಗಬೇಕೆಂದರು. "ಅತ್ತೆ ಅಳಿಯಗೆ ಮರುಳು, ಕತ್ತೆ ಕರುಕೆಗೆ ಮರುಳು, ಹಿತ್ತಲಕೆ ಮರುಳು, ಗೊಡ್ಡೆಮ್ಮೆ" ಎಂಬಂತೆ ಅಳಿಯನ ದೊಡ್ಡಸ್ತಿಕೆಗೆ ಅವರು ಮರುಳಾಗಿದ್ದರು. ಗಂಗಾಧರರಾಯರು ಮಾತ್ರ, ಅಳಿಯನು ತಮ್ಮ ಸರ್ವಸ್ವವನ್ನು ಹೀರಿದನೆಂಬ ರೊಚ್ಚಿನಿಂದಲೂ, ಕೈಯೊಳಗೆ ಕಾಸಿಲ್ಲದ ಕಿಚ್ಚಿನಿಂದಲೂ ಯಾತ್ರೆಗೆ ಹೋಗುವುದಕ್ಕೆ ಹಿಂಜರಿದರು. ಭಾಗೀರಥಿಬಾಯಿಯವರು ಪತಿಯನ್ನು ಪೀಡಿಸತೊಡಗಿದರು:— "ನಮ.ಗೇನು ಗಂಡಸು ಮಕ್ಕಳಿಲ್ಲ. ಸತ್ತಮ್ಯಾಲ ನೀರುಬಿಡೋ ಅವರು ದಿಕ್ಕಿಲ್ಲ. ನಮ್ಮಗತಿ ನಾವಃ ಕಂಡುಕೋಬೇಕು. ಅಳಿಯ ಬರ್ರಿ ಅಂತ ಬರದಾನ. ಅವರ ಸಂಗತಿ ಹೋಗಿ ಬಂದರ ನಮ್ಮ ಪಾಸೆಲ್ಲಾ ಪರಿಹಾರ ಆಗತದ; ಸದ್ಗತಿ ಆಗತದ. ಈ ವಿಚಾರ ನಿಮಗ ಯಾಕ ಬರಬಾರದು

ಗಂಗಾಧರರಾಯರು "ಮಾಡಿದ ಮಹಾಪಾತಕ ಮಹಾಯಾತ್ರಿಯಿಂದ ಹೋಗೂದಿನ. ಮಂದಿಯ ಗೋಳುಕಟ್ಟಿ, ಗಂಗೀವಳಗ ಮುಳುಗಿ ಬಂದರ ಬರೋ ಭಾಗ್ಯ ಏನು? ನಿನ್ನ ಅಳಿಯನ ಮಾತಿಗೆ ಮರುಳಾಗೋವಲ್ಲ ನಾನು ನಮ್ಮನ್ನ ಕಾಶೀಯಾತ್ರೆಗೆ ಕರಕೊಂಡು ಹೋಗೋದು ಅವನದೊಂದು ಕುತಂತ್ರ. ನಾ ಅದರಾಗ ಸಿಗಲಾರೆ. ಬೇಕಾದರ ನೀವೊ ಬ್ಯಾಕೇ ಅವನ ಸಂಗಾತ ಹೋಗು. ಇರೋ ಒಂದು ಮನಿ ಒತ್ತಿಹಾಕಿ ರುಡ್ಡು ತಂದು ಕೊಡತೇನಿ" ಎಂದು ಆವೇಶದಿಂದ ನುಡಿದರು.

ಬಾಯಿಯವರು ತೆಪ್ಪಗಾದರು. ರಾಯರು ಕಾಗದ ಬರೆದು, ತಮಗೆ ಯಾತ್ರೆಗೆ ಹೊರಡುವುದಕ್ಕೆ ಈಗ ಅನುಕೂಲವಿಲ್ಲವೆಂದು ತಿಳಿಸಿಬಿಟ್ಟರು.

ಮುದ್ದೂರಲ್ಲಿದ್ದ ಒಡಕಣ್ಣನ ತಂದೆತಾಯಿಗಳಿಬ್ಬರೂ ತೀರಿಕೊಂಡಿದ್ದರು. ಅವನ ಅಣ್ಣ ಶಂಕರರಾಯನ ಹೆಂಡತಿಯೂ ಮೃತಳಾಗಿದ್ದಳು.

ಒಡಕಣ್ಣನು ಅವನನ್ನು ಕರೆಯಿಸಿ, ತಂದೆತಾಯಿಗಳ ಉದ್ಧಾರ ಮಾಡಲಿಕ್ಕೆ ನೀನೂ ಹೊರಡಬೇಕೆಂದು ಹುರಿದುಂಬಿಸಿದನು. ಭೋಳೆ ಶಂಕರರಾಯನು ಇವನ ಮಾತಿನ ಮಬ್ಬಿಗೆ ಬಿದ್ದನು, ಇವನ ತಮ್ಮ ನೀಲಕಂಠರಾಯನು "ಒಡಕ ವತನದಾರರ ಕುಲಕಂಟಕ. ಅವನ ಜೊತಿಗೆ ಯಾತ್ರಿಗೆ ಹೋಗ ಬ್ಯಾಡ" ಎಂದು ಅಣ್ಣನಿಗೆ ತಿಳಿಸಿದರೂ, ಶಂಕರರಾಯನು ಅವನನ್ನು ಕಡೆ ಗಣಿಸಿ, ಕಾಶೀಯಾತ್ರೆಗೆ ಹೋಗುವುದನ್ನು ನಿಶ್ಚಯಿಸಿ ಕೈಯಲ್ಲಿ ಐನೂರು ರೂಪಾಯಿಗಳನ್ನು ತಂದುಕೊಟ್ಟನು. ಗಂಗಾಧರರಾಯರೊಬ್ಬರು ಹೊರಟಿದ್ದರೆ ಒಡಕಣ್ಣನ ಯಾತ್ರೆಯು ಕಾಸಿಲ್ಲದೆ ಮುಗಿಯುತ್ತಿತ್ತು. ಅದೊಂದು ಹೊಂಚು ತಪ್ಪಿತೆಂದು ಅವನಿಗೆ ಖೇದವಾಯಿತು.

ಮೊದಲಿಗೆ ಗೊತ್ತು ಮಾಡಿದಂತೆ ಜ್ಯೇಷ್ಠಶುದ್ಧ ಸಪ್ತಮಿಯ ದಿನ ಒಡಕಣ್ಣನು ಕಾಶೀಯಾತ್ರೆಗೆ ಹೊರಟನು. ಮಾರ್ಗದಲ್ಲಿ ಗಂಗೆಯೊಬ್ಬಳು ಸೇವಕಳು; ಶಂಕರರಾಯನೊಬ್ಬನು ಸೇವಕನು ಒಡಕಣ್ಣನೂ ಚಂದ್ರಾವತಿಬಾಯಿಯವರು ಚಕ್ಕಂದದಿಂದ ತಿರುಗುವವರು. ಹುಬ್ಬಳ್ಳಿಯಲ್ಲಿ ಉಗಿಬಂಡಿಯನ್ನು ಹತ್ತಿ ಪುಣೆಗೆ ಬಂದು, ಒಂದು ಧರ್ಮಶಾಲೆಯಲ್ಲಿ ಇಳಿದುಕೊಂಡರು. ಗಂಗೆಯನ್ನು ಅಡುಗೆ ಮಾಡುವುದಕ್ಕೂ, ಶಂಕರರಾಯನನ್ನು ಸಾಮಾನು ಬಿಚ್ಚಿ ಹಾಕುವುದಕ್ಕೂ ಹಚ್ಚಿ, ಒಡಕಣ್ಣ ಚಂದ್ರಾವತಿಬಾಯಿಯವರು ಪುಣೆಯ ವೈಭವವನ್ನು ನೋಡಲು ಕುದುರೆಯ ಬಂಡಿಯಲ್ಲಿ ಹೊರಟರು.

ಶನಿವಾರವಾಡೆ, ತುಳಸೀಬಾಗದಲ್ಲಿರುವ ಗುಡಿಗಳು, ಮಂಡಾಯಿ, ವಸ್ತುಸಂಗ್ರಹಾಲಯ, ಪರ್ವತಿಯ ಗುಡ್ಡ, ಅಲ್ಲಿರುವ ಬಂಗಾರದ ಮೂರ್ತಿಗಳು— ಇವನ್ನೆಲ್ಲ ನೋಡಿ ಅವರು ಬೆರಗಾದರು. ಬಳಿಕ ಗುಡ್ಡವನ್ನಿಳಿದು ಪೇಟೆಯ ವೈಭವವನ್ನು ನೋಡುತ್ತಾ, ಮೋಡಕಾ ಬಜಾರಕ್ಕೆ ಬಂದರು. ಅಲ್ಲಿ ಒಡಕಣ್ಣನು ಒಂದು ಉಣ್ಣೆಯ ಕೋಟನ್ನು ಐದು ರೂಪಾಯಿಗಳಿಗೆ ಕೊಂಡುಕೊಂಡನು. ಮತ್ತೆ ಕುದುರೆಯ ಬಂಡಿಯೇರಿ ಹೊರಟರು. ಒಡಕಣ್ಣನು ಗಾಡಿ ಹೊಡೆಯುವವನಿಗೆ ತಾನು ಕೊಂಡ ಕೋಟನ್ನು ಹೆಮ್ಮೆಯಿಂದ ತೋರಿಸಿದನು. ಗಾಡಿಯವನು ಅದಕ್ಕೆ "ಹೆಣದ ಮೇಲಿನ ಕೋಟು" ಎಂದು ಹೆಸರಿಟ್ಟನು. ಒಡಕನು ಗಾಬರಿಯಾಗಿ, ಗಾಡಿಯನ್ನು ಇಳಿದು ಅಲ್ಲಿಯೇ

ಅದನ್ನು ಒಂದು ರೂಪಾಯಿಗೆ ಮಾರಿದನು. ನಾಲ್ಕು ರೂಪಾಯಿ ಹೋದು ವೆಂದು ಹಳಹಳಿಸುತ್ತಾ, ಮತ್ತೆ ಬಂಡಿಯೇರಿ, ತಾವು ಇಳಿದುಕೊಂಡ ಧರ್ಮ ಶಾಲೆಗೆ ಚಂದ್ರಾವತಿಬಾಯಿಯವರೊಡನೆ ಬಂದಿಳಿದನು.

ಕುದುರೆಗಾಡಿಯವನಿಗೆ ಮೊದಲಿಗೆ ಗಾಡಿಯ ಬಾಡಿಗೆಯನ್ನು ಗೊತ್ತು ಮಾಡಿರಲ್ಲ. "ನೀವು ಕೊಟ್ಟದ್ದು ಕೊಡಿರಿ" ಎಂದು ಹೇಳಿ, ಅವನು ಇವ ರನ್ನು ಕರೆದೊಯ್ದನು. ಒಡಕಣ್ಣನು ಗಾಡಿಯಿಂದಿಳಿದ ಬಳಿಕ, ಅವನು ಬಾಡಿಗೆ ಐದು ರೂಪಾಯಿ ಎಂದನು. ಒಡಕಣ್ಣರು ತನ್ನ ಹರಕುಮುರುಕು ಮರಾಠಿಯಲ್ಲಿ "ನೀನು ಮೊದಲೇ ಏಕೆ ಹೀಗೆ ಹೇಳಲಿಲ್ಲ?" ಎಂದು ಕೇಳಿ ದನು. ಇವನ ಸ್ವರೂಪವನ್ನೂ ಭಾಷೆಯನ್ನೂ ಕಂಡುಕೊಂಡು ಪುಣೆಯ ಗಾಡಿಯವನು "ಇಲ್ಲಿ ಮೈಲಿಗೆ ನಾಲ್ಕಾಣೆ ಬಾಡಿಗೆ. ನಾನು ಇಲ್ಲಿಂದ ಹೊರಟು, ನಿಮ್ಮನ್ನು ಇಪ್ಪತ್ತೈದು ಮೈಲು ಸುತ್ತರಿಸಿಕೊಂಡು ಬಂದಿದ್ದೇನೆ ಎಂದ ಮೇಲೆ ಐದು ರೂಪಾಯಿಯಾದರೂ ಬೇಡವೇನು?" ಎಂದು ಮುಂ ತಾಗಿ ಜಡಿದು ನುಡಿದನು. ಒಡಕಣ್ಣನು ಒಂದೆ ರೂಪಾಯಿ ಚಾಚಿದನು. ಗಾಡಿಯವನು ಅವನ ರಟ್ಟೆ ಹಿಡಿದೆಳೆದು, "ನಿನ್ನನ್ನು ಪೌರಸಭೆಗೆ ಎಳೆದೊ ಯ್ಯುತ್ತೇನೆ" ಎಂದು ಗದ್ದರಿಸಿದನು. ಒಡಕಣ್ಣನು ಸುತ್ತಲೂ ನೋಡಿದನು ಸುತ್ತಲಿದ್ದ ಜನರು ಗಾಡಿಯವನದೆ ಸರಿಯೆಂದು ಸಾಕ್ಷಿ ಹೇಳಿ ಒಡಕಣ್ಣನಿಂದ ಐದು ರೂಪಾಯಿಗಳನ್ನು ಅವನಿಗೆ ಕೊಡಿಸಿದರು. ಪುಣೆಯನ್ನು ಪೂರ್ತಿ ಯಾಗಿ ನೋಡುವುದಕ್ಕಿಂತ ಮುಂಚಿತವಾಗಿ ಹತ್ತು ರೂಪಾಯಿ ಹಾಳುಮಾ ಡಿಕೊಂಡು ಅವನು ಉಸ್ಸೆಂದು ಧರ್ಮಶಾಲೆಗೆ ಬಂದನು

ಆಗಲೆ ಅಡುಗೆಯಾಗಿತ್ತು ಊಟಮಾಡಿ ಎಲೆ, ಅಡಿಕೆ, ತಂಬಾಕ ತುಂಬಿಕೊಂಡು, ತನ್ನ ಹಾಸಿಗೆಯ ಸುರುಳಿಯನ್ನು ಬಿಚ್ಚಿ ಒಡಕಣ್ಣನು ಒರ ಗಿಕೊಂಡನು. ಒಂದು ತಾಸು ವಾಮುಕುಕ್ಷಿಯಾಗಿ ಎದ್ದ ಬಳಿಕ ಚಂದ್ರಾವ ತಿಬಾಯಿಯವರು ಊರಿಂದ ತಂದಿದ್ದ ಉಂಡೆ ಅವಲಕ್ಕಿಗಳನ್ನು ನುಂಗಿ, ನೀರುಕುಡಿದು, ಮತ್ತೆ ಎಲ್ಲಿಯಾದರೂ ತಿರುಗಾಡಿ ಬರಬೇಕೆಂದು ಯೋಚಿಸಿ ದನು. ಮುಳಾಮುಠಾ ನದಿಯ ಹೊರಗಿರುವ ಪುಣೆಯ ಅರ್ವಾಚೀನ ವೈಭ ವವನ್ನು ನೋಡುವ ಮನಸ್ಸಾಗಿದ್ದರಿಂದ ಅತ್ತಕಡೆಗೆ ಹೋಗಬೇಕೆಂದನು

ಅವನು ಬಗಲಕಸಿ ಅಂಗಿಯನ್ನು ಹಾಕಿಕೊಂಡು, ಅದರ ಮೇಲೆ ಕಂಠೀ ಕವಡಾನಿನ ಅಂಗಿಯನ್ನು ತೊಟ್ಟು, ಜರದ ರುಮಾಲನ್ನು ಸುತ್ತಿಕೊಂಡು, ಸೆಲ್ಲೆಯನ್ನು ಹೊದ್ದು, ಕಾಲಲ್ಲಿ ಜೋಡು ಮೆಟ್ಟಿ, ಸಡಗರದಿಂದ ಒಬ್ಬನೆ ಹೊರಟನು. ಚಂದ್ರಾವತಿಬಾಯಿಯವರು ತಾವೂ ಬರುತ್ತೇವೆಂದರು. ಒಡ ಕಣ್ಣನು ಬೆಳಗ್ಗೆ ಕುದುರೆಯ ಗಾಡಿಯವನಿಗೆ ಐದು ರೂಪಾಯಿ ತೆತ್ತು ಸಪ ಗಂಡದ್ದರಿಂದ, "ನಾ ನಡಕೋತ ಹೋಗತೇನಿ. ನನ್ನ ಸಂಗತಿ ಬರೋದು ಆದೀತೆ?" ಎಂದನು. ಚಂದ್ರಾವತಿಬಾಯಿಯವರು, "ನನ್ನ ಕಾಲಾಗ ಏನು ಬೆಂಡಿಯ ರಸ ಇಳಿದಿಲ್ಲ. ನಾನೂ ನಡಕೋತ ಬರತೇನಿ ಊರಾಗ ಮೂಲಿ ಹಿಡಿದು ಕೂತಹಾಂಗ ಇಲ್ಯೊ ಕೂಡಬೇಕೆ? ನನ್ನ ಕಣ್ಣೇನು ಪರಟೆ ತೂತಿಕೆ? ನೀ ಹಿಂಗ ನನ್ನ ಬಿಟ್ಟು ಬಿಟ್ಟು ಚಕ್ಕಂದದಿಂದ ತಿರುಗಲಿಕ್ಕೆಹತ್ತಿ ದರ ನಾ ಮುಂದಕ ಯಾತ್ರೀಗೆ ಬರೋದಿಲ್ಲ. ಊರಿಗೆ ತಿರಗಿ ಹೋಗತೇನಿ" ಎಂದು ಬೆದರಿಸಿದರು.

ಅವನು ನಿರ್ವಾಹವಿಲ್ಲದೆ ಒಪ್ಪಿಕೊಂಡು, ಮುಗುಳುನಗೆ ನಕ್ಕು ಅವ ರನ್ನು ಕರೆದುಕೊಂಡು ಹೊರಟನು. ಚಂದ್ರಾವತಿಬಾಯಿಯವರು ಟೋಪು ಸೆರಗಿನ ಚೌಕಳಿಯ ಕೆಂಪು ಸೀರೆಯನ್ನುಟ್ಟುಕೊಂಡು ಬಂದರು. ದಾರಿಯಲ್ಲಿ ಅವರು ಅಲ್ಲಲ್ಲಿ ನಿಲ್ಲುತ್ತ ಒಡಕಣ್ಣನಿಗೆ "ಅದೇನು? ಇದೇನು?" ಎಂದು ಬೆರ ಳುತೋರಿಸಿ ಕೇಳುತ್ತಿದ್ದರು ಅವನು ಅಲ್ಲಿ ತೂಗಬಿಟ್ಟ ಫಳಿಗಳ ಮೇಲಿನ ಬರೆಹವನ್ನು ಓದಿಹೇಳುತ್ತಿದ್ದನು.

ಮಾರ್ಗದಲ್ಲಿ ಹೋಗಬರುವ. ಕುಚೋದ್ಯಗಾರರು ಈ ವ್ಯಕ್ತಿಗಳ ಹುಚ್ಚಾಟವನ್ನು ನೋಡಿ, "ಅರೇ ಕಾನಡೀ ಅಪ್ಪಾ! ಕಾನಡೀ ಅಮ್ಮಾ." ಎಂದು ಚೇಷ್ಟೆ ಮಾಡುತ್ತಿದ್ದರು. ಇದಾವುದರ ಕಡೆಗೂ ಒಡಕಣ್ಣನ ಲಕ್ಷ್ಯ ವಿರಲಿಲ್ಲ. ಕುದುರೆಯ ಮೇಲೆ ಕುಳಿತ ಶಿವಾಜಿಯ ಪ್ರತಿಮೆಯನ್ನು ಬೆರಗಾಗಿ ನೋಡುತ್ತಾ, ನಡುಬೀದಿಯಲ್ಲಿ ನಿಂತಿದ್ದನು. ಕುದುರೆಯ ಗಾಡಿಯವನೊ ಬ್ಬನು ಗಂಟೆ ಹೊಡೆಯುತ್ತಾ ಬಂದರೂ, ಈ ವ್ಯಕ್ತಿ ಓರೆಯಾಗದ್ದರಿಂದ, ಗಾಡಿಯವನು ತನ್ನ ಕೈಯೊಳಗಿನ ಚಬಕದಿಂದ ಒಡಕಣ್ಣನ ಕಾಲಿಗೊಂದು ಬಾರು ಎಳೆದು, ತನ್ನ ಗಾಡಿಯನ್ನು ಹೊರಳಿಸಿಕೊಂಡು ಹೋಗಿ ಚೌಕಿಯ

ಲ್ಲಿಯ ಸಿಪಾಯಿಗೆ ವರದಿಕೊಟ್ಟನು ಸಿಪಾಯಿಯು ನೇರವಾಗಿ ಬಂದು, ಒಡಕಣ್ಣನನ್ನು ರಟ್ಟೆಹಿಡಿದು ಎಳೆದುಕೊಂಡು ಹೋಗಿ, ಚೌಕಿಯಲ್ಲಿ ಕುಳ್ಳಿರಿಸಿದನು. ಚಂದ್ರಾವತಿಬಾಯಿಯವರು ಗಾಬರಿಯಾಗಿ ಅಳುತ್ತ, ಅವರ ಬೆನ್ನುಹತ್ತಿಬಂದರು. ಒಡಕಣ್ಣನು ದೀನನಾಗಿ ಆ ಸಿಪಾಯಿಗೆ ಬೇಡಿಕೊಂಡು ಎರಡು ರೂಪಾಯಿ ಕೊಟ್ಟು ಬಿಡುಗಡೆಹೊಂದಿದನು. ಸಿಪಾಯಿಯು ಅವನನ್ನು ಬೆದರಿಸಿ, ಬೀದಿಯ ಬಲಗಡೆಯಕಟ್ಟೆ (foot fath)ಯ ಮೇಲೆಯೆ ಹೋಗಬೇಕೆಂದು ಹೇಳಿ, ಕಳಿಸಿದನು. ಒಡಕಣ್ಣನು ಇನ್ನು ಮುಂದೆ ಹೋಗುವುದು ತರವಲ್ಲವೆಂದು ಬಂದ ದಾರಿಯಿಂದ ಧರ್ಮಶಾಲೆಗೆ ಹಿಂದಿರುಗಿದನು. ಮರುದಿನ ಬೆಳಗಿನಲ್ಲಿ ಪುಣೆಗೆಶರಣುಹೊಡೆದು ನಾಶೀಕಕ್ಕೆ ತೆರಳಿದನು.

## ೧೦. ಕಾಶೀದರ್ಶನ

ನಾಸಿಕ ಸ್ಟೇಶನದಲ್ಲಿ ಗಂಗಾಧರ ದೀಕ್ಷಿತರೆಂಬ ಕ್ಷೇತ್ರಪುರೋಹಿತರೊಬ್ಬರು ಬಂದು ಒಡಕಣ್ಣನನ್ನು ತಮ್ಮ ಮನೆಗೆ ಕರೆದೊಯ್ದರು. ಒಡಕಣ್ಣನೂ ಶಂಕರರಾಯನೂ ಕ್ಷೇತ್ರವಿಧಿಗಾಗಿ ನಡೆದರು. ಗಂಗೆಗೆ ಅಡುಗೆ ಮಾಡುವುದೂ ಸಾಮಾನುಗಳನ್ನು ಕಾಯುವುದೂ ತಪ್ಪಿದ್ದರಿಂದ ಅವಳು ತನ್ನ ಅತ್ತೆಯೊಡನೆ ಗೋದಾವರಿಗೆ ಹೋಗಿ, ಮೈತೊಳೆದುಕೊಂಡಳು. ಒದ್ದೆಯಾದ ಬಟ್ಟೆಗಳಿಂದಲೆ ಅಲ್ಲಿರುವ ದೇವಾಲಯಗಳಿಗೆಲ್ಲ ಹೋಗಿ, ದೇವರೆದುರಿಗೆ ಕೈಜೋಡಿಸಿಕೊಂಡು ನಿಂತು, ದೇವರಿಗೊಂದು ಕಾಯಿ ಒಡೆಯುವ ಸ್ವಾತಂತ್ರ್ಯವೂ ತನಗಿಲ್ಲದ್ದಕ್ಕಾಗಿ ಮಿಡುಕಿ, "ಈ ಯಮಯಾತನೆಯಿಂದ ಮುಕ್ತಗೊಳಿಸು" ಎಂದು ಬೇಡಿಕೊಂಡಳು. ಚಂದ್ರಾವತಿಬಾಯಿಯವರು ಗಂಗೆಯಿಂದ ತಮ್ಮ ಸೀರೆಯನ್ನು ಒಣಹಾಕಿಸಿ, ಅದು ಆರಿದ ಮೇಲೆ ಮೈತೊಳೆದುಕೊಂಡು, ತಿದ್ದಿ ತಿದ್ದಿ ಸೀರೆಯನ್ನುಟ್ಟು, ಒಡಕಣ್ಣನ ಮಾರ್ಗಪ್ರತೀಕ್ಷೆ ಮಾಡುತ್ತಾ ಕುಳಿತರು. ಒಡಕಣ್ಣನು ಕ್ಷೇತ್ರವಿಧಿಯನ್ನು ತೀರಿಸಿಕೊಂಡು ಅಲ್ಲಿಗೆ ಬಂದು, ಸ್ನಾನ ಮಾಡಿ, ಬಹಳಹೊತ್ತಾಗಿದೆಯೆಂದು, ಇಳಿದುಕೊಂಡ ಮನೆಯ ಕಡೆಗೆ ಹೊರಟನು. ಗಂಗೆಯು ತಮ್ಮ ಜತೆಯಲ್ಲಿಲ್ಲದ್ದನ್ನು ಕಂಡು ಅವಳೆಲ್ಲಿರುವಳೆಂದು ಚಂದ್ರಾವತಿಬಾಯಿಯವರನ್ನೂ ಕೇಳಿದನು.

ಬಾಯಿಯವರು, "ಈಗೇನು ಆಕಿ ಕಣ್ಣ ಉಚ್ಚಿ ಬಿಟ್ಟ ತುಡುಗ ಆಕಳಆಗ್ಯಾಳ ಗುಡಿಗುಡಿ ತಿರಗತ ಹೊಂಟಾಳ. ಆಕಿನ್ನ ನಾ ಎಲ್ಲಿ ಕಾಯಲಿ?" ಎಂದರು ಅಷ್ಟರಲ್ಲಿ ಗಂಗೆಯು ದುಡುದುಡು ನಡೆಯುತ್ತ ಅವರ ಹಿಂದಿನಿಂದ ಬಂದಳು. ಒಡಕಣ್ಣನು ಅವಳನ್ನು ಕೆಕ್ಕಳಿಸಿ ನೋಡಿ ಮುಂದೆ ನಡೆದನು.

ಸಾಯಂಕಾಲದಲ್ಲಿ ಚಂದ್ರಾವತಿಬಾಯಿಯವರೂ ಒಡಕಣ್ಣನೂ ಚಕ್ಕಂದದಿಂದ ತಿರುಗಾಡುತ್ತ ನಾಶಿಕ ಪಟ್ಟಣವನ್ನು ಸುತ್ತುವರಿದರು. ಗಂಗೆಯು ಒಡಕಣ್ಣನ ಕೆಟ್ಟ ನೋಟಕ್ಕೆ ಬೆದರಿ, ತಾವು ಇಳಿದುಕೊಂಡ ಮನೆಯಲ್ಲಿಯೆ ಕುಳಿತುಕೊಂಡಳು. ಶಂಕರರಾಯನೂ ತನ್ನ ಇಚ್ಛಾನುಸಾರವಾಗಿ ಊರೆಲ್ಲ ತಿರುಗಾಡಿಬಂದನು. ಎರಡು ತಾಸು ರಾತ್ರಿಗೆ ಎಲ್ಲರೂ ಗಂಗಾಧರ ಭಟ್ಟರ ಮನೆಯಲ್ಲಿ ಕೂಡಿದರು, ಉಪಹಾರವಾದ ಮೇಲೆ ಒಡಕನು ಗಂಗಾಧರ ಭಟ್ಟರಿಗೆ ತನ್ನ ದೊಡ್ಡಸ್ತಿಕೆಯನ್ನು ತನ್ನದೇ ಆದೊಂದು ಮರಾಠಿಯಲ್ಲಿ ಬಣ್ಣಿಸಿದನು. ಒಡಕಣ್ಣನಿಗಿರುವ ಮಹಾರಾಷ್ಟ್ರಭಾಷೆಯ ಅಗಾಧ ಪಾಂಡಿತ್ಯವನ್ನು ನೋಡಿ ಭಟ್ಟರು ಮುಗುಳ್ನಗೆ ನಗುತ್ತ ತಲೆಯಲ್ಲಾಡಿಸುತ್ತಿದ್ದರು. ಚಂದ್ರಾವತಿಬಾಯಿಯವರು ಬೆಪ್ಪಾಗಿ ಬಾಯಿ ತೆರೆದುಕೊಂಡು ಕುಳಿತಿದ್ದರು.

ಮರುದಿವಸ ತೀರ್ಥಶ್ರಾದ್ಧವಾಯಿತು; ವೃಷ್ಟಾನ್ನ ಭೋಜನವಾಯಿತು. ಒಡಕಣ್ಣನು ಗಂಗಾಧರಭಟ್ಟರಿಗೆ ದೊಡ್ಡದೊಂದು ಸಂಭಾವನೆಯನ್ನು ಕೊಡುವೆನೆಂದು ಹೇಳಿದ್ದರಿಂದ ಅವರು ಇವನಿಂದ ಬಹಳ ದುಡ್ಡನ್ನೆತ್ತಲಿಲ್ಲ. ಅದರ ಮರುದಿನ ಭಟ್ಟರು ಒಡಕಣ್ಣನನ್ನೂ ಅವನ ಪರಿವಾರದವರನ್ನೂ ಪಂಚವಟಿಗೆ ಕರೆದೊಯ್ದರು. ಎಲ್ಲರೂ ಗೋದಾವರಿಯಲ್ಲಿ ಮಿಂದು ಸೀತಾರಾಮರ ಗುಡಿಗೆ ಬಂದರು. ದೇವರಿಗೆ ಕೈಮುಗಿದು ಗುಡಿಯ ಸೌಂದರ್ಯನಿರೀಕ್ಷಣೆಗೆ ಹೊರಟರು. ಗಂಗೆಯು ಮಾತ್ರ ಸಾಷ್ಟಾಂಗ ನಮಸ್ಕಾರ ಮಾಡಿ, ದೇವರ ಮೂರ್ತಿಗಳನ್ನು ದಿಟ್ಟಿಸಿ ನೋಡುತ್ತಾ ಕೈಜೋಡಿಸಿಕೊಂಡು ನಿಂತಳು. ಶ್ರೀರಾಮಚಂದ್ರನ ಬಲದಲ್ಲಿರುವ ಸೀತಾಮಾತೆಯನ್ನು ನೋಡಿ ಅವಳ ಕಣ್ಣುಗಳಲ್ಲಿ ದಳದಳ ನೀರು ಸುರಿಯತೊಡಗಿದುವು. ರಾಮಾಯಣದ ಕತೆಯನ್ನೆಲ್ಲಾ ಅವಳು ನೆನಸಿಕೊಂಡಳು. ಇದೇ ಪಂಚವಟಿಯಲ್ಲಿ ಸೀತೆ ವಿಪತ್ತಿಗೊಳಗಾದಳು; ಮಿತಿಯಿಲ್ಲದ ಕಷ್ಟಗಳನ್ನು ಅನುಭವಿಸಿ,

ಕೊನೆಗೆ ಪತಿಸಮಾಗಮವನ್ನು ಹೊಂದಿ, ಕಷ್ಟಗಳನ್ನೆಲ್ಲ ಮರೆತಳು. ಆದರೆ ತನ್ನ ಗತಿಯೇನು? ಈ ಜನ್ಮದಲ್ಲಿಯಂತೂ ಪತಿಸಮಾಗಮವು ತನಗಿಲ್ಲ. ಸೀತೆಯು ಪತಿಯನ್ನಗಲಿದ್ದರೂ ಪತಿಯ ಮೂರ್ತಿಯು ಅವಳ ಹೃದಯದಲ್ಲಿ ಅವಳ ಮೂರ್ತಿಯು ಪತಿಯ ಹೃದಯದಲ್ಲಿ ಒಡಮೂಡಿದ್ದುವು. ಸೀತೆಗೂ ತನಗೂ ಎಷ್ಟು ಅಂತರ! ಪತಿಯ ಸಾನ್ನಿಧ್ಯದಲ್ಲಿದ್ದರೂ ತನಗೆ ಪತಿಯಿಲ್ಲ!

ಗಂಗೆಗೆ ಕರುಳು ಹಿಂಡಿದಂತಾಯಿತು. "ದೇವೀ, ನಾನು ಅಭಾಗ್ಯಳು, ನಿನ್ನ ದರ್ಶನಕ್ಕೆ ಅಯೋಗ್ಯಳು, ಮಹಾ ಪಾಪಿ. ನನ್ನ ಪಾಪ ಎಲ್ಲಾ ಪರಿಹಾರ ಮಾಡಿ ಪರಿಶುದ್ಧ ಮಾಡುವುದು ನಿನಗೇ ಕೂಡಿದ್ದು. ನೀನೇ ನನ್ನ ತಾಯಿ, ಶ್ರೀರಾಮದೇವರೇ ನನ್ನ ತಂದೆ, ನೀವೇ ನನ್ನ ಬಳಗ. ನನಗ ಯಾರೂ ಇಲ್ಲ. ಈ ಯಮಯಾತನೆ ತಾಳಲಾರೆ. ಅನುಗ್ರಹಮಾಡು." ಎಂದು ಕಳಕಳಿಯಿಂದ ಮನದಲ್ಲಿಯೆ ನುಡಿಯುತ್ತ ಅವಳು ಕುಳಿತುಕೊಂಡಳು

ಅವಳ ಆದಾತ್ಮ್ಯವನ್ನು ನೋಡಿದವರು ಬೆರಗಾದರು. ಅರ್ಚಕನು "ತಾಯೀ ಏಳು ನಿನ್ನ ಇಷ್ಟಾರ್ಥ ಪೂರ್ಣವಾಗುವುದು" ಎಂದು ಹರಸಿ ಅವಳಿಗೆ ಸೀತಾದೇವಿಯ ಕುಂಕುಮವನ್ನು ತಂದುಕೊಟ್ಟನು, ಗಂಗೆಯು ಪ್ರಸನ್ನಚಿತ್ತಳಾಗಿ, ಎದ್ದುನಿಂತಳು. ಅಷ್ಟರಲ್ಲಿ ಒಡಕಣ್ಣನೂ ಅಲ್ಲಿಗೆ ಬಂದು, ದೇವರಿಗೆ ಹಣ್ಣುಕಾಯಿಗಳನ್ನರ್ಪಿಸಿ, ಮಂಗಳಾರತಿ ಮಾಡಿಸಿದನು. ಅಂದು ಅಲ್ಲಿಯೆ ಗಂಗಾರಾಧನೆಯನ್ನು ಮಾಡಿಸಿದನು. ಬಳಿಕ ಅವರೆಲ್ಲರೂ ತಾವಿಳಿದುಕೊಂಡ ಮನೆಗೆ ಮರಳಿದರು.

ಮುಂದೆ ಎರಡು ದಿನವಿದ್ದು, ಭಟ್ಟರಿಗೆ ಹತ್ತು ರೂಪಾಯಿ ಸಂಭಾವನೆಯಿತ್ತು, ಒಡಕಣ್ಣನು ಪರಿವಾರದೊಡನೆ ನಾಸಿಕವನ್ನು ಬಿಟ್ಟು ಹೊರಟು, ಪ್ರಯಾಗಕ್ಕೆ ಬಂದನು. ಅಲ್ಲೊಬ್ಬ ಕ್ಷೇತ್ರಪುರೋಹಿತನ ಮನೆಯಲ್ಲಿ ಇಳಿದುಕೊಂಡು, ಎಲ್ಲರೂ ತ್ರಿವೇಣೀಸಂಗಮಕ್ಕೆ ಬಂದರು. ಕ್ಷೇತ್ರಪುರೋಹಿತರು ಒಡಕಣ್ಣನಿಂದ ಐವತ್ತು ರೂಪಾಯಿಗಳನ್ನು ಸೆಳೆದುಕೊಂಡು ಧಾರ್ಮಿಕ ವಿಧಿಗಳನ್ನೆಲ್ಲ ತೀರಿಸಿದರು. ಅಲ್ಲಿ ಗಂಗೆಯು ವೇಣೀದಾನವನ್ನು ಕೊಟ್ಟು, ತನ್ನ ಪೂರ್ವಾರ್ಜಿತ ಪಾಪಗಳೆಲ್ಲ ಪರಿಹಾರವಾದುವೆಂದು ಭಾವಿಸಿದಳು. ಸ್ನಾನ ಮಾಡುತ್ತಿರುವಾಗ ತನ್ನ ದುರ್ದೈವವನ್ನು ನೆನೆದು, ಮುಂದೆ ಹೋಗಿ ಮುಳುಗಿಬಿಟ್ಟಳು.

ಅಲ್ಲಿಯೆಇದ್ದ ಕೆಲವರು ಗಟ್ಟಿಗರು ಧಾವಿಸಿ, ನೀರಲ್ಲಿಈಸುಬಿದ್ದು,ಹೊರ ತೆಗೆದುಕೊಂಡು ಬಂದು ಅವಳುಚೇತರಿಸಿಕೊಳ್ಳುವ ಉಪಚಾರಗಳನ್ನು ಮಾಡಿ ದರು. ತುಸುಹೊತ್ತಿನಲ್ಲಿ ಗಂಗೆಗೆ ಎಚ್ಚರವಾಯಿತು. ಚಂದ್ರಾವತಿಬಾಯಿಯ ವರು, "ನಮಗೇನು ಇದಿ ಗಂಟುಬಿದ್ದೇ ನೀನು? ನಾಸಿಕದಾಗ ಗುಡಿಗುಡಿ ಮೆರ ಕೋತಹೊಂಟಿ. ಇಲ್ಲಿ ನೀರಾಗ ಹೊಂಟದ್ದಿ. ಮುಳಿಗಿ ಹೋಗಿದ್ದಿ ಅತ್ತಲಾಗಿ ಹಾಳಾಗಿ ಹೋಗಬಾರದಾಗಿತ್ತೇ? ನಿನಗ ಮುಕ್ತಿ ಆಗತಿತ್ತು; ನಮಗ ಅಷ್ಟು ಪರಿಹಾರ ಆಗತಿತ್ತು. ಇನ್ನೊಂದು ಚಲೋ ಹೆಣ್ಣು ತಂದು ನಮ್ಮ ಒಡಕಣ್ಣನ ಬಾಳೇ ನಡಿಸತಿದ್ದೆ. ನೀ ಯಾಕ ಸತ್ತೀ! ನಮ್ಮ ಮನೆತನ ನೀಗಿ ಹಿಡೀ ಲಿಕ್ಕೇ ನೀ ಬಂದೀದಿ." ಎಂದು ಅವಳ ಸೋಟಿ ಸೋಟಿ ತಿವಿದರು.

ಗಂಗೆಯು "ಹೌದು ತಾಯೀ, ನಾನು ನದೀ ಕೂಡಬೇಕಂತ ಹೊಂ ಟಿದ್ದೆ. ನಾ ಪಾಪಿ, ನನ್ನ ನದೀ ಕರಕೊಳ್ಳಲಿಲ್ಲ. ಏನು ಮಾಡಲಿ? ನನ್ನ ಕರ್ಮದ ಫಲ ಇನ್ನೂ ಅನುಭೋಗಸಬೇಕು" ಎಂದು ದೀನಳಾಗಿ ಉತ್ತರವಿ ತ್ತಳು. ಆಗ ಒಡಕಣ್ಣನು ಏರಿಬಂದು, "ಏ, ನಿನ್ನ ನಾಲಿಗಿ ಉದ್ದ ಆಗೇ ದೇನು? ಎದುರುವಾದಸತೀಯಾ?" ಎಂದು ಸಿಟ್ಟಿನಿಂದ ಅವಳನ್ನು ಬಲ ವಾಗಿ ಬಡಿಯತೊಡಗಿದನು. ಅಲ್ಲಿದ್ದ ಯಾತ್ರಿಕರು ಕ್ಷೇತ್ರದಲ್ಲಿ ಇಂತಹ ಅಕೃತ್ಯಗಳನ್ನು ಮಾಡುವುದು ಸರಿಯಲ್ಲವೆಂದು ಒಡಕಣ್ಣನಿಗೆ ಬುದ್ಧಿ ಹೇಳಿ, ಅವನನ್ನು ಸಮಾಧಾನಪಡಿಸಿದರು.

ಪ್ರಯಾಗದಲ್ಲಿ ಅವರು ಒಂದು ವಾರ ಇದ್ದರು. ಒಡಕಣ್ಣನು ಮುಂ ಜಾನೆ ಭಾಗೀರಥಿಯಲ್ಲಿ ಸ್ನಾನ ಮಾಡಿ, ಚಂದ್ರಾವತಿಬಾಯಿಯವರೊಂದಿಗೆ ಅಲ್ಲಿರುವ ದೇವಾಲಯಗಳನ್ನು ಹುಡುಕುತ್ತ ತಿರುಗುವನು. ಇಳಿಹೊತ್ತಿನ ಮುಂದೆ ತಾನೊಬ್ಬನೆ ಹೊರಟು ಊರೊಳಗಿನ ಭವ್ಯ ಕಟ್ಟಡಗಳನ್ನೂ, ಮನೋರಂಜಕ ಸ್ಥಳಗಳನ್ನೂ ನೋಡಿ, ಇರುಳಾಯಿತೆಂದರೆ ನಾಟ್ಯಗೃಹದ ಲ್ಲಿಯೂ ವಾರಾಂಗನೆಯರ ವಿಲಾಸದಲ್ಲಿಯೂ ವಿಹರಿಸುವನು.

ಗಂಗೆಯ ಪರಿಯೆ ಜೇರೆ. ಅವಳು ದಿನಾಲು ತ್ರಿವೇಣೀಸಂಗಮದಲ್ಲಿ ಮೈತೊಳೆದುಕೊಂಡು, ಸತ್ಪುರುಷರ ಸಮಾಗಮಾಕಾಂಕ್ಷಿಯಾಗಿ ಮೂರು ತಾಸು ಹೊತ್ತೇರುವವರೆಗೆ ದೇವರಧ್ಯಾನ ಮಾಡುವಳು. ಅವಳಿಗೆ ಅಲ್ಲಿ

ಒಂದು ಬಗೆಯ ವಿಲಕ್ಷಣವಾದ ಮಾರ್ಪಾಟು ಉಂಟಾಗಿದ್ದಿತು. ದೇವಾ ಯಗಳನ್ನು ಬಿಟ್ಟು ಮತ್ತಾವ ಕಟ್ಟಡಗಳನ್ನೂ ಆಕೆಯು ನೋಡಲಿಲ್ಲ ದೇವರ ನಾಮಭಜನೆಯ ಮಾತಲ್ಲದೆ ಇನ್ನಾವ ಮಾತನ್ನೂ ಆಡಲಿಲ್ಲ ಅದೊಂದು ವೈರಾಗ್ಯದ ಸ್ಥಿತಿ. ಈ ಸ್ಥಿತಿಯನ್ನು ತಾನು ಹೊಂದುವುದಕ್ಕೆ ತನ್ನ ಪತಿಯೂ, ಅತ್ತೆಯೂ ಮಾಡಿದ ಉಪಕಾರವೇ ಕಾರಣವೆಂದು ಅವಳು ಹರುಷಪಟ್ಟಳು. ಪ್ರಯಾಗವು ಒಡಕಣ್ಣನಿಗೆ ವಿಲಾಸಸ್ಥಾನವಾದರೆ ಗಂಗೆಗೆ ಗುರುಸ್ಥಾನವಾಯಿತು.

ಪ್ರಯಾಗದಿಂದ ಒಡಕಣ್ಣನು ಕಾಶಿಗೆಬಂದನು. ಅಲ್ಲಿ ಒಂದು ತಿಂಗಳು ಇರಬೇಕೆಂದು ಮಾಡಿದ್ದರಿಂದ ವಿಶ್ವನಾಥಭಟ್ಟರೆಂಬ ಕ್ಷೇತ್ರಪುರೋಹಿತರನ್ನು ಗೊತ್ತುಮಾಡಿಕೊಂಡು, ಅವರ ಸಹಾಯದಿಂದ ಒಂದು ಸಣ್ಣ ಮನೆಯನ್ನು ಬಾಡಿಗೆ ಹಿಡಿದನು. ಮನೆಗೆಲಸವೆಲ್ಲ ಮತ್ತೆ ಗಂಗೆಯ ಪಾಲಿಗೆ ಬಂತು. ಗಂಗೆಯು ಮಣಿಕರ್ಣಿಕೆಯಲ್ಲಿ ಸ್ನಾನಮಾಡಿ, ವಿಶ್ವೇಶ್ವರನನ್ನು ಪೂಜಿಸಿ ಬಂದು ಮನೆಗೆಲಸಗಳಿಗೆ ತೊಡಗುತ್ತಿದ್ದಳು.

ಒಡಕಣ್ಣನೂ ಶಂಕರರಾಯನೂ ವೈದಿಕವಿಧಾನಗಳನ್ನೆಲ್ಲ ಮುಗಿಸಿದರು, ದುರ್ಗಾಕುಂಡದಲ್ಲಿ ಸ್ನಾನಮಾಡಿ ವಿಶ್ವೇಶ್ವರನನ್ನು ಪೂಜಿಸಿದರು. ಚಂದ್ರಾವತಿಬಾಯಿಯವರೂ ಒಡಕಣ್ಣನೂ ಒಂದುಗೂಡಿ ಊರಲ್ಲಿ ಸ್ವೇಚ್ಛೆಯಿಂದ ಸಂಚರಿಸುವುದಕ್ಕೆ ಆರಂಭಿಸಿದರು. ಅವರ ಅಂತರಾತ್ಮದಲ್ಲಿ ಪಶ್ಚಾತ್ತಾಪದ ಅಂಕುರವೆ ಮೂಡಿದ್ದಿಲ್ಲ. ಅವರು ಯಾತ್ರೆಗೆ ಬಂದದ್ದು ಆತ್ಮಶುದ್ಧಿಗೇನು? ಬಂದ ಕಲಂಕವನ್ನು ಬಾಹ್ಯಾಡಂಬರಗಳಿಂದ ತೊಳೆದು ಜನರಲ್ಲಿ ಪ್ರತಿಷ್ಠೆ ಪಡೆಯಲಿಕ್ಕೆ ಬಂದವರವರು. ಅವರಿಗೆ ಗಂಗಾಸ್ನಾನವು ಗಟಾರದಲ್ಲಿ ಮುಳುಗಿದಂತೆಯೂ, ದೇವತಾದರ್ಶನವು ಪೆಪ್ಪಗಳನ್ನು ನೋಡಿದಂತೆಯೂ ಎನೆಸಿದರೆ ಏನೂ ಆಶ್ಚರ್ಯವಲ್ಲ.

ಒಡಕಣ್ಣನು ಬಿಂದು ಮಾಧವನ ಗುಡಿಗೆ ಹೋದಾಗ ಅಲ್ಲೊಬ್ಬ ಕನ್ನಡ ಕೀರ್ತನಕಾರನು

"ಯಾಕೆ ಯಾತ್ರೆಯ ಮಾಡುತಿರ್ಪರಲ್ಲೇನಿಹುದು।
ಸಾಕುಬಿಡು ತಮ್ಮೊಳೀ ದುರ್ಗುಣಗಳಿರುತಿರಲು॥

ಪರನಿಂದೆ ಪರವಧೂಸಂಗ ಕುಟಿಲ ಕುಯುಕ್ತಿ।
ಪರಹಿಂಸೆ ಕಪಟ ನಿರ್ದಯ ಕಠಿಣ ವಚನ॥
ಗುರುನಿರಾಕರಣೆ ಮದಮೋಹ ರಾಗದ್ವೇಷ।
ದುರಿತಾದಿ ದುರ್ಗುಣಂಗಳು ತಪ್ಪೋದಿಂಲೂ॥

ಎಂಬ ದಾಸರ ಪದವನ್ನು ಮನೋಹರವಾಗಿ ಹಾಡುತ್ತಿದ್ದನು. ಒಡಕಣ್ಣನು ಅಲ್ಲಿ ನಿಲ್ಲಲಾರದೆ, ವಿಶ್ವೇಶ್ವರನ ಗುಡಿಗೆ ಹೋದನು. ಅಲ್ಲಿ ಕಾಶೀಖಂಡ ಪುರಾಣವು ನಡೆದಿತ್ತು. ಪುರಾಣಿಕರು, "ಯಾವನು ತಾನು ಮಾಡಿದ ದುಷ್ಕರ್ಮಗಳ ಬಗ್ಗೆ ತಳಮಳಿಸಿ, ತನ್ನ ಪಾಪಗಳನ್ನೆಲ್ಲ ಕಳೆದುಕೊಳ್ಳಬೇಕೆಂಬ ಸದ್ಬುದ್ಧಿಯಿಂದ ತೀರ್ಥಗಳಲ್ಲಿ ಸ್ನಾನಮಾಡುವನೋ ಅವನೇ ಈ ತೀರ್ಥದ ಫಲವನ್ನು ಹೊಂದುವನು" ಎಂದು ಹೇಳಿ,

ಅಶ್ರದ್ಧದಾನಃ ಪಾಪಾತ್ಮಾ ನಾಸ್ತಿಕೋ ಛಿನ್ನಸಂಶಯಃ।
ಹೇತುನಷ್ಟಶ್ಚ ಪಂಚೈತೇ ನ ತೀರ್ಥಫಲಭಾಗಿನಃ ॥

ಎಂಬ ಶ್ಲೋಕವನ್ನು ಅರ್ಥಸಹಿತವಾಗಿ ವಿವರಿಸತೊಡಗಿದರು. ಒಡಕಣ್ಣನಿಗೆ ಅದು ರುಚಿಸಲಿಲ್ಲ. ಅಲ್ಲಿಂದ ಕಾಲ್ತೆಗೆದು ಬಿಟ್ಟನು.

ಕ್ಷೇತ್ರಪುರೋಹಿತರಿಂದ ಧಾರ್ಮಿಕನೆಂಬ ಬಿರುದನ್ನು ಪಡೆಯುವುದಕ್ಕಾಗಿಯೂ ಬೊಮ್ಮಗೇರಿಯಲ್ಲಿ ಬಹುಮಾನವನ್ನು ಪಡೆಯುವುದಕ್ಕಾಗಿಯೂ ಒಡಕಣ್ಣನು ಕಾಶಿಯೊಳಗಿನ ಪ್ರಸಿದ್ಧ ದೇವಾಲಯಗಳನ್ನೆಲ್ಲ ನೋಡಬೇಕಾಗಿತ್ತು. ಅವನು ಕಾಶಿಯೊಳಗಿನ ಎಲ್ಲ ಘಾಟುಗಳಲ್ಲಿಯೂ ಸ್ನಾನಮಾಡಿದನು; ಬಿಂದು ಮಾಧವನಿಗೆ ಹತ್ತುರೂಪಾಯಿ ಮುಡಿಪು ಕೊಟ್ಟನು; ಧುಂಡಿರಾಜನ ದರ್ಶನ ಪಡೆದನು; ಕಾಲಭೈರವನನ್ನೂ ಕಂಡು ಬಂದನು; ಗುಹೆಯಲ್ಲಿ ಹೋಗಿಬಂದನು. ಭವಾನಿಗೆ ಸೀರೆ ಕುಪ್ಪಸಗಳನ್ನು ಕೊಟ್ಟು, ವಿಶ್ವೇಶ್ವರನಿಗೆ ಲಘುರುದ್ರಾಭಿಷೇಕ ಮಾಡಿಸಿ, ಬ್ರಾಹ್ಮಣರಿಗೆ ಭೋಜನಮಾಡಿಸಿದನು. ಹದಿನೈದುದಿನ ತಿರುಗಾಡಿ, ಚಂದ್ರಾವತಿಬಾಯಿಯವರೊಂದಿಗೆ ಅಲ್ಲಿಯ ದೇವಾಲಯಗಳನೆಲ್ಲ ಕಂಡುಬಂದನು.

## ೧೧. ಯಮುನೂರ ಯಾತ್ರೆ.

ಗಂಗೆಯು ಅಡಿಗೆಮಾಡುವುದರಲ್ಲಿಯೂ, ಅತಿಥಿಸತ್ಕಾರದಲ್ಲಿಯೂ, ದೇವತಾಧ್ಯಾನದಲ್ಲಿಯೂ ಕಾಲಕಳೆಯುತ್ತಿದ್ದಳು. ಆಕೆಗೆ ದೇವಾಲಯಗ

ಳನ್ನು ಯಾರು ತೋರಿಸಬೇಕು? ಮಣಿಕರ್ಣಿಕೆಗೆ ಸ್ನಾನಕ್ಕೆಂದು ಹೋದಾಗಲೆ ಒಂದೆರಡು ಗುಡಿಗಳಿಗೆ ಹೋಗಿ ಬರುತ್ತಿದ್ದಳು. ಸಾಧುಸಂತರನ್ನು ಕಂಡರೆ ಅವಳಿಗೆ ಬಹಳಭಕ್ತಿ.

ಒಂದು ದಿವಸ ಆಕೆಯು ಎಲ್ಲರಿಗೂ ಊಟಕ್ಕೆ ಬಡಿಸುತ್ತಿದ್ದಳು. ಮನೆಯ ಮುಂದೊಬ್ಬ ಸನ್ಯಾಸಿಯು ಬಂದು "ಭವತಿ ಭಿಕ್ಷಾಂ ದೇಹಿ"ಎಂದು ಕೂಗಿದನು. ಕೂಡಲೆ ಗಂಗೆಯು ಬಡಿಸುವುದನ್ನು ಬಿಟ್ಟು, ತಾನು ಸಿದ್ಧಪಡಿಸಿದ ಊಟದ ಸಾಮಾನುಗಳನ್ನೆಲ್ಲ ಒಂದು ಪಂಚಪಾತ್ರೆಯಲ್ಲಿ ಹಾಕಿಕೊಂಡು ಬಂದು ಆ ಸನ್ಯಾಸಿಗೆ ನೀಡಿ, ಅವನ ಪಾದಗಳಿಗೆ ಸಾಷ್ಟಾಂಗ ನಮಸ್ಕಾರಹಾಕಿ ನಿಂತುಕೊಂಡಳು. ಅವನನ್ನು ನೋಡುತ್ತಿದ್ದಂತೆಯ ಅವಳ ಮೈಮೇಲೆ ಮುಳ್ಳುಗಳೆದ್ದವು; ಕಣ್ಣುಗಳಿಂದ ಆನಂದಾಶ್ರುಗಳು ಸುರಿಯತೊಡಗಿದುವು. ಅವಳು ಅವನೆದುರು ಕೈ ಜೋಡಿಸಿ, "ಮಹಾತ್ಮಾ ಅನುಗ್ರಹಮಾಡು" ಎಂದು ಬೇಡಿಕೊಂಡಳು. ಸನ್ಯಾಸಿಯು ಅವಳನ್ನು ತೀಕ್ಷ್ಣವಾಗಿ ದಿಟ್ಟಿಸಿನೋಡಿ, ಅವಳ ತಲೆಯಮೇಲೆ ತನ್ನ ವರದ ಹಸ್ತವನ್ನಿಟ್ಟು, ಬಲಗಿವಿಯಲ್ಲಿ ಯಾವುದೋ ಒಂದು ಮಂತ್ರಮನ್ನು ಉಪದೇಶಿಸಿ "ಒಂದು ಲಕ್ಷ ಜಪಮಾಡು" ಎಂದು ತನ್ನದೊಂದು ರುದ್ರಾಕ್ಷಿಯಸರವನ್ನು ಅವಳ ಕೈಗಿತ್ತನು. ಗಂಗೆಯು ಮೇಲೆ ಮುಖಮಾಡುವಷ್ಟರಲ್ಲಿ ಅವನು ಹೊರಟುಹೋಗಿದ್ದನು

ಗಂಗೆಗೆ ಅವನು ದೇವರೆ ಎಂಬ ಭಾವನೆ. ದೇವರು ತನ್ನಿಂದ ಭಿಕ್ಷೆಯನ್ನು ಸ್ವೀಕರಿಸಿದನು! ತಾನು ಧನ್ಯಳು; ತನ್ನ ಜನ್ಮ ಸಾರ್ಥಕವಾಯಿತು. ಎಂಬ ಭಾವೋದ್ರೇಕದಿಂದ ಅವಳು "ದತ್ತಗುರೋ, ದತ್ತಗುರೋ" ಎಂದು ಭಜನೆಮಾಡುತ್ತ ಅಲ್ಲಿಯೆ ನಿಂತುಬಿಟ್ಟಳು. ಅರ್ಧ ಊಟಕ್ಕೆ ಬಡಿಸಿ, ಭಿಕ್ಷೆ ಹಾಕಲಿಕ್ಕೆ ಹೋದವಳು ಇನ್ನೂ ಯಾಕೆ ಬರಲಿಲ್ಲವೆಂದು ಚಂದ್ರಾವತಿಬಾಯಿಯವರು ಹೊರಗೆಬಂದು, ಇವಳ ಹುಚ್ಚಾಟವನ್ನು ನೋಡಿದರು. ಅವರು ಮುಗುಳುನಗುತ್ತ ಒಳಗೆ ಹೋಗಿ "ನಿನ್ನ ಹೇಣ್ತಿಗೆ ದೊಡ್ಡದೆವ್ವ ಬಡಧಾಂಗ ಕಾಣ್ತದ. .ಅದನ್ನಷ್ಟು ಬಿಡಿಸಿ, ಆಕೀನ್ನ ಕರಕೊಂಡು ಬಾ" ಎಂದು ವ್ಯಂಗ್ಯವಾಗಿ ನುಡಿದರು.

ಒಡಕಣ್ಣನು ಹೊರಗೆ ಬಂದು ಅವಳ ಬೆನ್ನಮೇಲೊಂದು ಬಲವಾದ ಒದಕೆಕೊಟ್ಟು, ಅವಳು ಮುಗ್ಗುರಿಸಿ ಬೀಳುವ ಹಾಗೆಮಾಡಿದನು. ಆ ನೋವಿನಿಂದ ಎಚ್ಚತ್ತು ಗದಗದ ನಡುಗುತ್ತ ಗಂಗೆಯು ಒಳಗೆ ಬಂದಳು. ಒಡಕಣ್ಣನು "ಆ ದೊಡ್ಡದೆವ್ವಾ ಬಿಡಿಸೇನಿ ನೋಡು" ಎಂದು ಬಾಯಿಯವರ ಮುಂದೆ ಹೆಮ್ಮೆಯಿಂದ ಹೇಳಿ ಕುಳಿತನು. ಗಂಗೆಯು ತನಗಾದ ನೋವನ್ನು ನುಂಗಿಕೊಂಡು ಊಟಕ್ಕೆ ಬಡಿಸತೊಡಗಿದಳು.

ಸನ್ಯಾಸಿಯು ತನಗೆ ಕೊಟ್ಟ ಅಕ್ಷಮಾಲೆಯನ್ನು ಅವಳು ಎಂದೂ ಹೊರಗೆಡಹಲಿಲ್ಲ. ತಾನೊಬ್ಬಳೆ ಇದ್ದಾಗ ಅದನ್ನು ಹೊರಗೆತೆಗೆದು, ಸನ್ಯಾಸಿಯು ಹೇಳಿಕೊಟ್ಟ ಮಂತ್ರವನ್ನು ಜಪಿಸುತ್ತಿದ್ದಳು. ಅವಳು ಒಂದು ಕ್ಷಣ ಜಪಮಾಡಬೇಕಲ್ಲವೇ ? ಅದೇನೋ ಒಂದು ಬಗೆಯ ಶಾಂತಿ ಅವಳಲ್ಲಿ ನೆಲೆಸಿತು. ಅವಳ ಮುಖದಲ್ಲೊಂದು ವಿಲಕ್ಷಣವಾದ ತೇಜವು ಒಡಮೂಡಿತು. ಸಹೃದಯರು ಅವಳನ್ನು ಕಂಡಿದ್ದರೆ ತಪಸ್ವಿನಿ ಎಂದು ಕರೆಯಬಹುದಾಗಿತ್ತು. ಒಡಕಣ್ಣ ಚಂದ್ರಾವತಿಬಾಯಿಯವರಿಗೆ ಮಾತ್ರ ಅವಳೊಬ್ಬ ದೊಡ್ಡ ಪಿಶಾಚಿಯಂತೆ ಕಾಣತೊಡಗಿದಳು. ಅದಕ್ಕಾಗಿ ಅವರು ಅವಳಿಗೆ ಹೆಚ್ಚುಹೆಚ್ಚಾಗಿ ತಾಪವನ್ನು ಕೊಡಹತ್ತಿದರು. ಅವರು ತಾಪಕೊಟ್ಟರೂ "ಪಿಶಾಚಿ" ಹಾಗೆಯೆ ಉಳಿಯಿತು.

ಯಾತ್ರೆಗೆ ಬಂದವರು ಇವಳನ್ನೆ ನೋಡುತ್ತ ಕುಳಿತರೆ ಹೇಗೆ? ಒಡಕಣ್ಣನು ಪರಿವಾರದೊಂದಿಗೆ ಗಯಾಕ್ಷೇತ್ರಕ್ಕೆ ತೆರಳಿದನು. ಅಲ್ಲಿಯೂ ಒಬ್ಬ ಕ್ಷೇತ್ರಪುರೋಹಿತನನ್ನು ಹಿಡಿದು ತಮ್ಮ ವಿಧಿಗಳನ್ನು ಮುಗಿಸಿದನು ಅಲ್ಲಿ ವಿಷ್ಣುಪಾದದ ಮೇಲೆ ಪಿಂಡವನ್ನು ಹಾಕಲಿಕ್ಕೆ ಗಯಾವಾಳರು ಎರಡುನೂರು ರೂಪಾಯಿ ಕೇಳಿದರು; ಅದಕ್ಕೆ ಒಡಕಣ್ಣನು ಒಪ್ಪಲಿಲ್ಲ. ಕಡೆಗೆ ಮಾತಿಗೆ ಮಾತು ಬೆಳೆದು ಅವನು ಅಲ್ಲಿಯೆ ಫಲ್ಗುನದಿಯಲ್ಲಿ ಪಿಂಡವನ್ನು ಒಗೆದು ಬಂದನು ಗಯಾವಾಳರು ಇವನಿಗೆ ಪಿತೃಘಾತಕಿ ಎಂದರು. ಒಡಕಣ್ಣನು ಅವರನ್ನು ಕಡೆಗಣಿಸಿ, ಪಾಟಣಾ ಪಟ್ಟಣಕ್ಕೆ ಹೋದನು; ಅಲ್ಲಿ ಎರಡುದಿವಸ ಮನಸ್ವೀ ವಿಲಾಸಮಾಡಿ, ದಣಿದು, ಮಾತೃಗಯೆಗೆ ಬಂದನು. ಮಾತೃಗಯೆಯಲ್ಲಿ ಪಿಂಡಪ್ರದಾನಮಾಡಿದರೆ ಪಾಪಗಳೆಲ್ಲವೂ ಪರಿಹಾರವಾಗುವವೆಂದ

ಅವನು ನಂಬಿದ್ದನು. ಪಿಂಡಪ್ರದಾನ ಮಾಡುವುದರೊಳಗಾಗಿ ಅವನ ಪಾಪದ ಫಲವು ಹಠಾತ್ತಾಗಿ ಅವನನ್ನು ಆವರಿಸಿತು. ಇಷ್ಟು ದಿನಗಳ ಸ್ವೇಚ್ಛಾಚಾರದ ಪ್ರಭಾವವೆಲ್ಲಾ ಒಟ್ಟಾಗಿ ಬಂದು, ಅವನನ್ನು ನೆಲಕ್ಕೆ ಕೆಡಹಿತು.

ಕೆಟ್ಟಜ್ವರ ಹುಟ್ಟಿ, ಅವನು ಎಚ್ಚರವಿಲ್ಲದೆ ಬಡಬಡಿಸಹತ್ತಿದನು· ಚಂದ್ರಾವತಿಬಾಯಿಯವರು ಹೌಹಾರಿದರು. ಆಗ ಮಾತ್ರ ಗಂಗೆಗೆ ಪತಿ ಸೇವೆಯ ಯೋಗವು ದೊರೆಯಿತು. ತನ್ನ ಕುಂಕುಮದ ಸೌಭಾಗ್ಯವನ್ನು ಕಾಯಬೇಕೆಂದು ತನ್ನ ಸದ್ಗುರುವಿಗೆ ಅವಳು ಮೊರೆಯಿಟ್ಟಳು. ಸದ್ಗುರುವಿನ ನಾಮವನ್ನು ಒಡಕಣ್ಣನ ಕಿವಿಯಲ್ಲಿ ಅನ್ನುತ್ತಾ ತನಗೆ ಸನ್ಯಾಸಿಯು ಕೊಟ್ಟ ರುದ್ರಾಕ್ಷಿಯ ಸರವನ್ನು ತೊಳೆದು, ಆ ನೀರನ್ನು ಅವನ ಬಾಯಲ್ಲಿ ಹಾಕಿದಳು.

ಒಡಕಣ್ಣನಿಗೆ ಎಚ್ಚರಹುಟ್ಟಿತು; ಮುಂದೆ ನಾಲ್ಕಾರು ದಿನಗಳಲ್ಲಿ ಅವನಿಗೆ ಬೇನೆಯೂ ಗುಣಮುಖವಾಯಿತು. ತನ್ನ ಗುರುವಿನ ಪ್ರಭಾವದಿಂದಲೆ ತನ್ನ ಪತಿಗೆ ಗುಣವಾಯಿತೆಂದು ಗಂಗೆಯು ಭಾವಿಸಿದಳು. ಒಡಕಣ್ಣನು ಏನೆಂದೂ ಭಾವಿಸಲಿಲ್ಲ. ಗುಣವಾದೊಡನೆಯೆ ಮಥುರೆಗೆ ಹೋಗಿ, ಶ್ರೀಕೃಷ್ಣನನ್ನು ನೋಡಿಕೊಂಡು ವೃಂದಾವನಕ್ಕೆ ತೆರಳಿದನು. ವೃದಾವನದಲ್ಲಿ ಮೂರುದಿನವಿದ್ದು ಚಂದ್ರಾವತಿಬಾಯಿಯವರೊಂದಿಗೆ ವನವಿಹಾರ ಮಾಡಿದನು. ಅಲ್ಲಿ ಗಂಗೆಯು ಮೂವತ್ತುಸಾವಿರ ಜಪವನ್ನು ಮುಗಿಸಿದಳು.

ಒಡಕಣ್ಣನ ಪರಿವಾರವು ಹರಿದ್ವಾರಕ್ಕೆ ಹೋಗಿ ಕಾಶಿಗೆ ಮರುಳುವಷ್ಟರಲ್ಲಿ ಅವರು ತಂದಿದ್ದ ದುಡ್ಡೆಲ್ಲ ವೆಚ್ಚವಾಗಿತ್ತು. “ಕೂಡಲೆ ಐದುನೂರು ರೂಪಾಯಿ ಕಳಿಸಿಕೊಡಬೇಕು.” ಎಂದು ಗಂಗಾಧರರಾಯರಿಗೊಂದು, ಸೆಟ್ಟರ ಬಸೆಟ್ಟೆಪ್ಪನಿಗೊಂದು- ಹೀಗೆ ಎರಡು ಪತ್ರಗಳನ್ನು ಒಡಕಣ್ಣನು ಬರೆದು ಹಾಕಿದನು.

ಗಂಗಾಧರರಾಯರು ಕಾಗದವನ್ನೋದಿ ತಲೆಯಲ್ಲಾಡಿಸಿ ತಮ್ಮ ಹೆಂಡತಿಯ ಬಳಿಗೆಬಂದು, “ಇಕಾ ನಿನ್ನ ಅಳಿಯನ ಪತ್ರ. ಕ್ಷೇಮದಿಂದ ಎಲ್ಲಾಯಾತ್ರೆಮಾಡಿ ಮತ್ತೆ ಕಾಶಿಗೆ ಬಂದಾರಂತ. ಈಗ ನಮಗೊಂದು ಗಾಣ ಹಾಕ್ಯಾನ: ನಾವು ಐನೂರು ರೂಪಾಯಿ ಕಳಿಸಿದರ ಕಾಶೀಯಾತಿ

ಮಾಡಿದ ಪುಣ್ಯ ಎಲ್ಲಾ ನಮಗs ಬರತದಂತ. ಅವನ ಮಾತು ಬಲು ಮಿದು; ಹೃದಯಮಾತ್ರ ಕಲ್ಲು. ನಮ್ಮ ಮನಿ ಎಲ್ಲಾ ತೊಳೆದುಬಿಟ್ಟಾನ. ಇನ್ನೂ ಐನೂರು ರೂಪಾಯಿ ಎಲ್ಲಿಂದ ತರಲಿ?" ಎಂದು ನುಡಿದರು

ಅದಕ್ಕೆ ಭಾಗೀರತಿಬಾಯಿಯವರು, "ನಿಮಗೇನು ಅವರು ದಾನ ಕೇಳೋದಿಲ್ಲ. ಪರದೇಶಕ್ಕ ಹೋಗ್ಯಾರ; ದುಡ್ಡು ಕಮ್ಮಿ ಆಗೇದ. ಅಲ್ಲೇನು ಆಪ್ತರs ಇಷ್ಟರs? ಊರಿಗೆ ಬಂದವ್ಯಾಲಿ ನಿಮ್ಮ ದುಡ್ಡು ನಿಮಗ ಕೊಡ ತಾರ. ಜೀವ ಒತ್ತಿಯಿಟ್ಟಾದರೂ ದುಡ್ಡು ಕಳಿಸಬೇಕು" ಎಂದು ಕಳಕಳಿ ಯಿಂದ ಮಾತಾಡಿದರು.

ಗಂಗಾಧರರಾಯರು, "ಕಬ್ಬಿಣ ಕುಡಿದ ನೀರು ತಿರುಗಿ ಬಂದೀತೇನು? ಅವನಿಗೇನು ದುಡ್ಡು ಕಮ್ಮಿ ಆಗೇದ? ನಮ್ಮ ದುಡ್ಡು ಎತ್ತಲಿಕ್ಕೆ ಮತ್ತೊಂದು ಹಂಚಿಕಿ ಹೂಡ್ಯಾನ. ಅವನ ಕಾಶೀಯಾತ್ರೀ ಪುಣ್ಯ ಅವಗs ಇರಲಿ. ನಾನೇನು ಅವಗ ದುಡ್ಡು ಕಳಿಸೋದಿಲ್ಲ" ಎಂದು ಸ್ಪಷ್ಟವಾಗಿ ನುಡಿದರು.

ಅದರಂತೆ ಅವರು ದುಡ್ಡನ್ನೂ ಕಳಿಸಲಿಲ್ಲ. ಸೆಟ್ಟರ ಬಸೆಟ್ಟೆಪ್ಪನು ಮಾತ್ರ ಒಡಕಣ್ಣನು ಯಾತ್ರೆಗೆ ಹೋಗುವ ಮುಂಚೆ ತನ್ನ ಬಳಿಯಲ್ಲಿಟ್ಟು ಹೋದ ಹಣದಲ್ಲಿ ಐನೂರು ರಪಾಯಿಗಳನ್ನು ಕೂಡಲೆ ಮನಿಯಾರ್ಡರ್ ಮಾಡಿದನು. ಆ ರೂಪಾಯಿಗಳು ಬರುವವರೆಗೆ ಒಡಕಣ್ಣನು ಕಾಶಿಯ ಲ್ಲಿಯೆ ಉಳಿಯಬೇಕಾಯಿತು.

ನಮ್ಮ ಗಂಗಾಂಬೆಯು ಕಾಶಿಗೆ ಬಂದಮೇಲೆ ಸಾಧುಸಂತರ ಸಹವಾಸ ದಲ್ಲಿಯೆ ಹೊತ್ತುಗಳೆಯತೊಡಗಿದಳು. ಅದರಿಂದ ಅವಳಿಗೆ ಒಡಕಣ್ಣನ ಮುಷ್ಟಿಪ್ರಹಾರವು ಮೇಲಿಂದಮೇಲೆ ಆಗತೊಡಗಿತು! ದೇಹದ ಅಭಿಮಾನ ವನ್ನೆ ತೊರೆದ ಅವಳಿಗೆ ಯಾವ ಅರಿವೂ ಇದ್ದಿಲ್ಲ. ದುರ್ಗಾಷ್ಟಮಿಯ ದಿವಸ ಅವಳ ಲಕ್ಷಜಪವು ಮುಗಿಯಿತು.

ಅಂದು ಭವಾನಿಯ ಗುಡಿಯಲ್ಲಿ ನವಚಂಡಿಯ ಹೋಮವು ನಡೆದಿತ್ತು. ಭಕ್ತವೃಂದವು ಕಿಕ್ಕಿರಿದು ನೆರೆದಿತ್ತು. ಗಂಗೆಯು ಅಲ್ಲಿಗೆ ಹೋಗಿ ದುರ್ಗಾ ಮೂರ್ತಿಯನ್ನು ದಿಟ್ಟಿಸಿ ನೋಡುತ್ತ, ಆದಿಶಕ್ತಿ! ಭವಾನೀ! ದುರ್ಗೆ! ಲೋಕಮಾತೇ, ದೀನಳಾದ ನನ್ನನ್ನು ಉದ್ಧರಿಸು. ಇವತ್ತು ನನ್ನದೇಹದ

ಪೂರ್ಣಾಹುತಿ ತಕ್ಕೊ!" ಎಂದು ಅನನ್ಯಗತಿಕಳಾಗಿ ಬೇಡಿಕೊಂಡಳು. ಅಷ್ಟರಲ್ಲಿ ನವಚಂಡಿಯ ಹೋಮವಾಗಿ ಪೂರ್ಣಾಹುತಿಯಾಯಿತು. ಅಗ್ನಿ ಕುಂಡದಿಂದ ಜ್ಯೋತಿಯೊಂದು ಹೊರಟುಬಂದು ತನ್ನ ಮುಖದಲ್ಲಿ ಅಡಗಿ ದಂತೆ ಅವಳಿಗೆ ಭಾಸವಾಯಿತು. ಅವಳ ಮೈಯಲ್ಲಿ ಪುಳಕವೆದ್ದಿತು. ಗಂಗಾಂಬೆಯು ಭವಾನಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ, ಮನೆಗೆ ಹೋದಳು.

ಮರುದಿಸವ ಬೆಳಗಾಗುತ್ತಲೆ ಅವಳು ಮಣಿಕರ್ಣಿಕೆಗೆಬಂದು ಸ್ನಾನ ತೊ ಳೆದುಕೊಂಡು, ಭಕ್ತಿಯಿಂದ ಗಂಗೆಯನ್ನು ಪೂಜಿಸಿ, "ದೇವಿ ನನಗ ಮುಕ್ತಿ ಕೊಡು. ಇಂದಿಗೆ ನನ್ನ ಪಾಪ ಎಲ್ಲಾ ಪರಿಹಾರ ಆದವು. ನಿನ್ನ ಹೆಸರು ಇಟಗೊಂಡದ್ದಕ್ಕ ಸಾರ್ಥಕಮಾಡು" ಎಂದು ಬೇಡಿಕೊಂಡು, ಮೂರು ಬೊಗಸೆ ಗಂಗೋದಕವನ್ನು ಕುಡಿದು ಮೆಟ್ಟಲುಗಳನ್ನು ಹತ್ತಿದಳು. ಅರ್ಧ ಮೇಲಕ್ಕೆ ಬಂದಿರಬಹುದು; ಅವಳೆದುರಿಗೊಬ್ಬ ಸನ್ಯಾಸಿಯು ಬಂದು ನಿಂತನು. ಮುಖವೆತ್ತಿನೋಡುತ್ತಾಳೆ— ತನ್ನಿಂದ ಭಿಕ್ಷೆಯನ್ನು ತೆಗೆದು ಕೊಂಡ ಸನ್ಯಾಸಿ!

ಅವಳು ಅವನಿಗೆ ಸಾಷ್ಟಾಂಗ ಪ್ರಣಾಮಮಾಡಿ, ತಾನು ತಂದ ಗಂಗೋದಕದಿಂದ ಅವನ ಪಾದಗಳನ್ನು ತೊಳೆದಳು. ಅವನು "ತಾಯೀ ನಿನ್ನ ಜಪಪೂರ್ಣವಾಯಿತು. ನನ್ನ ಜಪಮಾಲೆಯನ್ನು ನನಗೆಕೊಡು" ಎಂದು ಹೇಳಿ ಆ ರುದ್ರಾಕ್ಷಿಯ ಮಾಲೆಯನ್ನು ಅವಳಿಂದ ತೆಗೆದುಕೊಂಡನು ಗಂಗಾಂಬೆಯು ಮತ್ತೆ ನಮಸ್ಕಾರ ಮಾಡಬೇಕೆನ್ನುವಷ್ಟರಲ್ಲಿ ಅವನು ಅಲ್ಲಿ ಇರಲಿಲ್ಲ! ಅವಳು ಶ್ರೀ ಗುರು ದೇವದತ್ತ" ಎಂದು ದೊಡ್ಡದನಿಯಿಂದ ಕೂಗುತ್ತಾ ಮನೆಗೆ ಬಂದಳು.

ಅವಳ ಸ್ಥಿತಿಯನ್ನು ನೋಡಿ ಬಾಯಿಯವರೂ, ಒಡಕಣ್ಣನೂ ಇವ ಳಿಗೆ ಭೂತಬಾಧೆಯಾಗಿದೆಯೆಂದು ತಿಳಿದು, ಅವಳನ್ನು ಒಂದು ಕೋಣೆಯಲ್ಲಿ ಹಾಕಿ ಬಾಗಿಲಿಕ್ಕಿದರು. ಅಂದು ಅವಳು ಬೆಳತನಕ ಅಖಂಡವಾಗಿ ದತ್ತನಾಮ ಭಜನೆಯನ್ನು ಮಾಡಿದಳು. ಬೆಳಗಾದಮೇಲೆ ಒಡಕಣ್ಣನು ಗಾಬರಿಯಾಗಿ ಕೋಣೆಯೊಳಗೆ ಬಂದನು. ಕೂಡಲೆ ಗಂಗಾಂಬೆಯು ಒಡಕಣ್ಣನ ಪಾದ ಗಳನ್ನು ಗಟ್ಟಿಯಾಗಿ ಹಿಡಿದುಕೊಂಡು, "ಶ್ರೀ ಗುರು ದೇವದತ್ತ" ಎನ್ನುತ್ತ ಅವನ ಪಾದಗಳಮೇಲೆಯೆ ಪ್ರಾಣಬಿಟ್ಟಳು. ಈ ಅದ್ಭುತವನ್ನು ನೋಡಿ ಒಡಕಣ್ಣನ ಕಲ್ಲೆದೆಯು ಸಹ ತಲ್ಲಣಿಸಿತು.

ಗಂಗಾಂಬೆಯ ಸ್ಮಶಾನಯಾತ್ರೆಗೆ ಕಾಶಿಯೊಳಗಿನ ಸಂತಸಮೂಹವೆಲ್ಲ ಕೂಡಿತು. ಅವಳ ಚಿತೆಯ ಧುನಿಯನ್ನು "ಗಂಗಾಧುನಿ"ಯೆಂದು ಕರೆಯುವರು. ಇಂದಿಗೂ ಒಬ್ಬ ಸಾಧುವು ಆ ಧುನಿಯನ್ನು ನಂದದಂತೆ ಕಾಯುತ್ತಿರುವನು.

ಒಡಕಣ್ಣನು ಗಂಗೆಯು ಮೃತಳಾದ ಸುದ್ದಿಯನ್ನು ಲಕ್ಷ್ಮೀಪುರಕ್ಕೂ ಬೊಮ್ಮಗೇರಿಗೂ ತಿಳಿಸಿ, ಅವಳ ಉತ್ತರ ಕ್ರಿಯೆಗಳನ್ನು ಕಾಸಿಯಲ್ಲಿಯೆ ಮುಗಿಸಿ ಚಂದ್ರಾವತಿಬಾಯಿಯವರೊಂದಿಗೆ ಮುಂಬಯಿ ಪಟ್ಟಣದ ಮೇಲೆ ಹಾಯ್ದು, ಬೊಮ್ಮಗೇರಿಗೆ ಬಂದನು. ಮಾರ್ಗದಲ್ಲಿ ಅವನಿಗೆ ಶ್ರೀಪಾದ ಭಟ್ಟರೆಂಬೊಬ್ಬ ಅಧ್ಯಾಪಕರು ಕೂಡಿದರು. ತನ್ನ ತಂತ್ರಕ್ಕೆ ಅನುಕೂಲವಾಗಲೆಂದು ಒಡಕಣ್ಣನು ಭಸ್ಮರುದ್ರಾಕ್ಷಿಗಳನ್ನು ಧರಿಸಿ, ಎರಡುತಾಸು ಅನುಷ್ಠಾನಮಾಡುವುದನ್ನೂ ಶ್ರೀಪಾದ ಭಟ್ಟರಿಂದ ವೇದಶ್ರವಣವನ್ನೂ ಆರಂಭಿಸಿದರು.

ಅವನ ಹೃದಯವನ್ನು ಬಲ್ಲ ಊರು ಹಿರಿಯರು ಇದಕ್ಕೆ ಮರುಳಾಗದೆ, "ಇವನು ಮಾಡಿದ್ದು ಯಾತ್ರೆಯಲ್ಲ ಯವನೂರ ಯಾತ್ರೆ" ಎಂದು ಹೀಯಾಳಿಸತೊಡಗಿದರು.

## ೧೨. ಗೋಮುಖವ್ಯಾಘ್ರ.

ಒಡಕಣ್ಣನು ಕಾಶೀಯಾತ್ರೆಯನ್ನು ಮುಗಿಸಿಕೊಂಡು ಬೊಮ್ಮಗೇರಿಗೆ ಬಂದ ಬಳಿಕ ಸತ್ಕರ್ಮಾನುಷ್ಠಾನಗಳಲ್ಲಿಯೆ ಕಾಲಕಳೆಯ ತೊಡಗಿದನು. ದಿನಾಲು ಪ್ರಾತಃಸ್ನಾನವೇನು, ಪಂಚಮಹಾಯಜ್ಞಗಳೇನು, ಗುರುಚರಿತ್ರೆಯ ಪಾರಾಯಣವೇನು! ಭಸ್ಮರುದ್ರಾಕ್ಷಿಗಳಿಂದ ಭೂಷಿತನಾಗಿ ಹಾಗೆಯೆ ಹೊರಗೆ ಬಂದು, ಶ್ರೀಪಾದ ಭಟ್ಟರಿಗೆ ನಮಸ್ಕಾರಮಾಡಿ ವೇದಾಧ್ಯಯನಕ್ಕೆ ತೊಡಗುವನು. ಮಧ್ಯಾಹ್ನದಲ್ಲಿ ಅತಿಥಿ ಅಭ್ಯಾಗತರ ಸತ್ಕಾರ. ಅಡುಗೆ ಸೀರುಗಳ ದೆಸೆಯಿಂದ ಒಬ್ಬ ಬ್ರಾಹ್ಮಣನನ್ನೆ ಅವನು ನಿಯಮಿಸಿದನು. ಶ್ರೀಪಾದಭಟ್ಟರೂ ಅವನಲ್ಲಿಯೆ ಭೋಜನಮಾಡುವರು. ಮಧ್ಯಾಹ್ನದಲ್ಲಿ ತನ್ನ ಮನೆಗೆ ಬಂದವರ ಮುಂದೆ ಒಡಕಣ್ಣನು ತಾನುಮಾಡಿದ ಯಾತ್ರೆಯ ವೈಭವವನ್ನು ವರ್ಣಿಸಿ, ಕ್ಷೇತ್ರ ಯಾತ್ರೆಗಳಿಂದ ತನಗುಂಟಾದ ವೈರಾಗ

ವನ್ನು ವಿವರಿಸುವನು. ಇಸ್ಪೇಟಿನ ಆಟದಿಂದ ವ್ಯರ್ಥ ಕಾಲಹರಣಮಾಡು ವುದು ವಿಹಿತವಲ್ಲವೆಂದು ಉಪದೇಶಿಸಹತ್ತಿದನು.

"ನರಜನ್ಮದ ಸಾಫಲ್ಯಕ್ಕ ಎಲ್ಲರೂ ಸತ್ಕಾರ್ಮಾನುಷ್ಠಾನ ಮಾಡ ಬೇಕು. ಈ ದೇಹ ಅಶಾಶ್ವತ. ಇದು ಗಟ್ಟಿಮುಟ್ಟ ಇರುವಾಗಲೆ ನಮ್ಮ ಮುಂದಿನಮಾರ್ಗ ನಾವು ಕಂಡುಕೋಬೇಕು. ಹೆಂಡಿರು, ಮಕ್ಕಳು, ಧನ, ಧಾನ್ಯ-ಯಾವುದೂ ನಮ್ಮ ಬೆನ್ನಹತ್ತಿ ಬರೋದಿಲ್ಲ. ನಮ್ಮ ಕರ್ಮ ಮಾತ್ರ ಬರೋದು. ಈ ಸೃಷ್ಟಿಯೊಳಗ ಯಾವುದೂ ಸ್ಥಿರಅಲ್ಲ" ಎಂಬ ತತ್ವೋ ಪದೇಶವನ್ನು ಅವನು ಅವರಿಗೆಲ್ಲ ನೀಡುವನು. ಮತ್ತೆ "ಬ್ರಾಹ್ಮಣರು ವೇದಾಧ್ಯಯನ ಮಾಡಲಿಕ್ಕೇಬೇಕು. ಅಧ್ಯಯನ ಮಾಡದವ ಬ್ರಾಹ್ಮಣ ಅಲ್ಲ. ಅದಕ್ಕs ಮತ್ತ ನಾನು ಈಗ ಅಧ್ಯಯನ ಮಾಡೋದು. ದೊಡ್ಡ ಅಧ್ಯಾಪಕರನ್ನು ಕರಕೊಂಡು ಬಂದೇನಿ. ಅವರ ಯೋಗ ಕ್ಷೇಮ ನಾ ನೋಡಿಕೋತೇನಿ. ನಿಮ್ಮ ಬಹ್ರಚಾರಿಗಳನ್ನೆಲ್ಲಾ ಅಧ್ಯಯನಕ್ಕೆ ಹಚ್ಚಿರಿ" ಎಂದು ಬ್ರಾಹ್ಮಣರಿಗೆಲ್ಲ ಹೇಳಿಕೊಳ್ಳುವನು.

ಬರುಬರುತ್ತ ಒಡಕಣ್ಣನ ಮನೆಯು ವೇದಾಧ್ಯಯನದ ಪಾಠಶಾಲೆ ಯಾಯಿತು. ಹತ್ತುಜನ ವಿದ್ಯಾರ್ಥಿಗಳು ಅಲ್ಲಿ ವೇದಾಧ್ಯಯನ ಮಾಡತೊಡ ಗಿದರು. ಊರೊಳಗಿನ ಬಣಗಳಕಡೆಗೂ, ನ್ಯಾಯನಿರ್ಣಯಗಳಕಡೆಗೂ ಒಡಕಣ್ಣನು ಉದಾಸೀನತೆಯನ್ನು ತೋರಿಸಹತ್ತಿದನು. ಕಾಶೀಯಾತ್ರೆ ಯಿಂದ ಒಡಕಣ್ಣನ ಹೃದಯದಲ್ಲಿ ಸ್ಥಿತ್ಯಂತರವಾಗಿದೆಯೆಂದು ಊರೊಳಗಿನ ಮರುಳು ಜನರು ಭಾವಿಸಿದರು. ಆದರೆ ಇವನ ಹಟ್ಟುಮೆಟ್ಟುಗಳನ್ನು ಬಲ್ಲವರು, ಬಹುದಿವಸ ಯಾತ್ರೆಮಾಡಿ ಬಕಧ್ಯಾನ ಕಲಿತುಬಂದಿರುವ ಒಡಕ ಇದೇನೊ ಹೊಸಹೊಂಚು ಹಾಕಿದ್ದಾನೆಂದು ಅವನನ್ನು ಹೀಯಾಳಿಸಿದರು. ಒಡಕಣ್ಣನು ಇವರ ಮಾತಿಗೆ ಬೆಲೆಕೊಡಲಿಲ್ಲ; ತನ್ನನ್ನು ನಿಂದಿಸುವ ಜನರಿಗೆ ಬಹುಮಾನ ಕೊಡಹತ್ತಿದನು. ಇದರಿಂದ ಅವನ ಪ್ರತಿಕಕ್ಷಿಗಳ ಹೃದಯವು ಸಹ ಕರಗತೊಡಗಿತು. ಅವನು ಶ್ರೀಪಾದಭಟ್ಟರ ಹೆಂಡತಿ ಮಕ್ಕಳನ್ನು ಬೊಮ್ಮೀಗೇರಿಗೆ ಕರೆತಂದು, ಅವರಿಗೊಂದು ಮನೆಯನ್ನು ಕೊಟ್ಟನು. ಅವರ ಮನೆತನದ ವೆಚ್ಚದಲ್ಲಿ ಅರ್ಧ ಭಾಗವನ್ನು ತಾನು ಹೊತ್ತು, ಉಳಿದ ರ್ಧವನ್ನು ಅವರ ವಿದ್ಯಾರ್ಥಿಗಳ ಪಾಲಕರ ಮೇಲೆ ಹಾಕಿದನು. ಬರು

ಬರುತ್ತ ಶ್ರೀಪಾದಭಟ್ಟರ ಪ್ರತಿಷ್ಠೆಯೂ ಊರಲ್ಲಿ ಬೆಳೆಯಿತು. ಒಡಕಣ್ಣನ ಉಪದೇಶದಿಂದ ಅವರ ಸಹಪಾಠಿಗಳೂ ಸಾಧುವೇಷಗಳನ್ನು ಧರಿಸಿದರು. ಹೀಗಾಗಿ ಬೊಮ್ಮೀಗೇರಿಯು ಧಾರ್ಮಿಕರ ತವರೂರಾಯಿತು.

ಇಷ್ಟು ದಿನಗಳ ವರೆಗೆ ಒಡಕಣ್ಣನು ತನ್ನ ವತನದ ಮೇಲ್ವಿಚಾರಣೆಯನ್ನು ತಾನೇ ಮಾಡುತ್ತಿದನು. ಈಗ ಅವನು ಅದನ್ನು ಬಿಟ್ಟುಕೊಟ್ಟು, ಭೀಮಣ್ಣನಾಯಕರೆಂಬ ಒಬ್ಬ ವ್ಯವಹಾರಚತುರರನ್ನು ವರ್ಷಕ್ಕೆ ಎರಡು ನೂರು ರೂಪಾಯಿ ಸಂಬಳದಮೇಲೆ ಗೊತ್ತುಮಾಡಿ, ಅವರಿಗೆ ತನ್ನ ಸರ್ವಾಧಿಕಾರಗಳನ್ನು ಒಪ್ಪಿಸಿದನು. ಭೀಮಣ್ಣನಾಯಕರು ಒಡಕಣ್ಣನ ಅಭಿಪ್ರಾಯಗಳನ್ನೂ ಅಂತರಂಗದಲ್ಲಿ ತಿಳಿದುಕೊಂಡು, ಅದರಂತೆಯೆ ತಾವು ಕಾರ್ಯಕ್ಕೆ ತೊಡಗಿದರು.

ಒಡಕಣ್ಣನು ತನ್ನ ಹೊಲಗಳನ್ನು ಮಾಡುತ್ತ ಬಂದ ರೈತರಿಗೆ, "ನೀವು ಈಗ ಕೊಡುತ್ತಿರುವ ಲಾವಣಿಯ ಹಣಕ್ಕೆ ನನ್ನ ಜೀವಮಾನವಿರುವವರೆಗೆ ಹೊಲಗಳನ್ನು ನಿಮಗೆ ನಡಿಸಿಕೊಡುತ್ತೇನೆ" ಎಂದು ವಚನಕೊಟ್ಟು, ಎಲ್ಲ ರೈತರಿಂದ ಲಾವಣಿಯ ಚೀಟಿಗಳನ್ನು ಬರೆಯಿಸಿಕೊಂಡಿದ್ದನು. ಲಾವಣಿಯ ಹಣವನ್ನು ಕೊಟ್ಟ ಬಗ್ಗೆ ಅವನು ಯಾವ ರೈತನಿಗೂ ಪಾವತಿಯನ್ನು ಕೊಟ್ಟಿರಲಿಲ್ಲ. ಅವನ ಮಾತಿನ ಮಬ್ಬಿಗೆ ಬಿದ್ದರೈತರಾದರೂ ಪಾವತಿಗಳನ್ನು ಕೇಳಿರಲಿಲ್ಲ. ತಮ್ಮ ಮನೆತನಕ್ಕೇ ಹೊಲಗಳು ನಡೆಯುವವೆಂಬ ಭ್ರಾಂತಿಯಿಂದ ತಾವು ಮಾಡುವ ಹೊಲಗಳನ್ನೆಲ್ಲ ಅವರು ಉತ್ತಮಸ್ಥಿತಿಯಲ್ಲಿ ಇಟ್ಟಿದ್ದರು. ತಾವು ಕೊಡುವ ಲಾಣಿಯ ಹಣವನ್ನು ಹೊತ್ತಿಗೆ ಸರಿಯಾಗಿ ಕೊಟ್ಟದ್ದಲ್ಲದೆ, ಮೇಲೆ ಎರಡುಸಲ ಲಗ್ನದ ಪಟ್ಟಿಯನ್ನು ಕೂಡ ಅವರು ಕೊಟ್ಟಿದ್ದರು. ಈ ವರ್ಷ ಲಾವಣಿಯನ್ನೆತ್ತುವುದಕ್ಕೆ ಒಡಕಣ್ಣನ ಬದಲಾಗಿ ಭೀಮಣ್ಣನಾಯಕರು ಬಂದರು.

ಅವರು ಮೊದಲಿಗೆ ದೊಡ್ಡೀಕೊಪ್ಪಕ್ಕೆ ಹೋಗಿ ಭರಮಣ್ಣನಿಗೆ "ನೀನು ಮೂರು ವರ್ಷದ ಲಾವಣೀಹಣ ಕೊಟ್ಟಿಲ್ಲ. ಈಗ ಮುನ್ನೂರು ರೂಪಾಯಿ ಕೊಡಬೇಕು. ಇಲ್ಲದಿದ್ರ ನಿನ್ನ ಮ್ಯಾಲೆ ದಿವಾಣಿಕೋರ್ಟಿನೊಳಗ ದಾವೇ ಮಾಡತೇನಿ" ಎಂದು ಹೇಳಿಕಳುಹಿದರು. ಭರಮಣ್ಣನು ಸಿಟ್ಟು ಬೆಂಕಿಯಾಗಿ, ಅವರ ಹತ್ತಿರಬಂದು, "ಆ ಕಳ್ಳ ತಪ್ಪಿಸಿಗೊಂಡು ಕುಂತು ನಿಮ್ಮನ್ನ

ಮುಂದ ವ್ಯಾಡ್ಯಾನೇನು? ಅವಾ ಯಾರ ಶಗಣಿ ತಿನಬೇಕಂತಾವ? ಮ್ಯಾಗ ದೊಡ್ಡ ಮನಶಾ ಅಂತ. ವರ್ಸಾ ವರ್ಸಾ ಎಲ್ಲಾರಕಿಂತ ಮೊದಲಃ ನಮ್ಮಪ್ಪ ಹಪ್ತೇವು ಕೊಡತಿದ್ದ. ಈ ವರ್ಸಾ ಭಾಳ ತೊಂದರಿ ಐತಿಅಂತ ಉತ್ರೂ ಕರೆದೂ ಮುಂದಿನ ವರ್ಷದ ರೊಕ್ಕಾನೂ ಇಸಗೊಂಡು ಹೋಗ್ಯಾನ; ಮ್ಯಾಗ ನಮ್ಮ ಮನ್ಯಾಗ ಒಂದು ಕಾರಭಾರಾನೂ ಮಾಡಿ ಹೋಗ್ಯಾನ. ಆ ಕಳ್ಳ ದೇಸಾಯೀನ್ನ ಕರೆಕೊಂಡು ಬಾ. ಎಲ್ಲಾ ಹೇಳತೇನಿ" ಎಂದು ಆವೇಶದಿಂದ ಮಾತಾಡಿದನು.

ಅದಕ್ಕೆ ಭೀಮಣ್ಣನಾಯಕರು "ಇಕಾನೋಡು! ನಿಮ್ಮಪ್ಪ ಬರಕೊಟ್ಟ ಮೂರು ವರ್ಷದ ಕಾಗದ. ನಿಮ್ಮಪ್ಪ ರೂಪಾಯಿ ಕೊಟ್ಟದ್ರ ಪಾವತೀ ತೋರಿಸು. ಎಟ್ಟಿ ಮಾತಾಡಿದ್ರ ನಿನ್ನ ಗತಿ ನೆಟ್ಟಗಾಗಲಿಕ್ಕಿಲ್ಲ" ಎಂದು ಆರ್ಭಟಿಸಿದರು.

ಭರಮಣ್ಣನು "ಅಲಲಲ! ನನ್ನ ಗತಿ ಏನು ಮಾಡತೀ? ಮಾಡಿ ಯಾರ ಮಾಡೊ ನೋಡೋಣ." ಎಂದು ಎದೆಯುಬ್ಬಿಸಿಕೊಂಡು ಅವರೆ ದುರಿಗೆ ನಿಂತನು.

ಒಡಕಣ್ಣನ ಕುತಂತ್ರವನ್ನು ಅರಿಯದ ಭೀಮಣ್ಣನಾಯಕರೂ ರೈತರ ಮೇಲೆ ತಮ್ಮ ದರ್ಪವನ್ನು ಕೂಡಿಸಬೇಕೆಂಬ ಹೆಮ್ಮೆಯಿಂದ, "ಯಾಕ ನಾ ಯಾರಂತ ತಿಳಿದೀದಿ? ನಿನ್ನ ಮೆಟ್ಟಿ ತುಳಿಸಿಬಿಟ್ಟೇನು! ಹಿಂದಕ ಸರದು ಮಾತಾಡು" ಎಂದರು.

ಭರಮಣ್ಣನು ಸಿಟ್ಟು ತಲೆಗೇರಿ, "ಎಲೇ ಹಾರವಾ! ನನ್ನ ತುಳಿತೀಯಾ? ಬಂದಾರಾ ಬಾ. ನಿನ್ನ ಒಂದು ಕೈ ನೋಡೇ ಬಿಡತೀನಿ" ಎಂದು ಗರ್ಜಿಸಿ, ಭೀಮಣ್ಣನಾಯಕರ ಎದೆಯಮೇಲೆ ಹಾರಿ ಕುಳಿತು, ಚೆನ್ನಾಗಿ ಗುದ್ದತೊಡ ಗಿದನು. ಇವನು ಆ ದೇಸಾಯಿಯ ಮೇಲಿನ ಕಿಚ್ಚನ್ನು ಈ ಬಡಹಾರುವನ ಮೇಲೆಯೇ ಬಿಟ್ಟರೆ ಈ ಬಡಪ್ರಾಣಿಯು ಬದುಕುವುದಿಲ್ಲವೆಂದು ತಿಳಿದು ಅಲ್ಲಿ ಕೂಡಿದ ಜನರು ಭರಮಣ್ಣನ ರಟ್ಟೆಯನ್ನು ಹಿಡಿದು, ಹಿಂದಕ್ಕೆಳೆದು, ನಾಯ ಕರನ್ನು ಅವನ ಕೈಯಿಂದ ಮುಕ್ತಗೊಳಿಸಿದರು. ನಾಯಕರಿಗೆ ಹೊಟ್ಟೆ ಯೊಳಗಿನ ಸಿಟ್ಟು ರಟ್ಟೆಯೊಳಗಿಲ್ಲ. ಮಾಡುವುದೇನು? ವ್ಯೆ ಮೆತ್ತಗೆ ಮಾಡಿಸಿಕೊಂಡು, ಮತ್ತೊಂದ ಹಳ್ಳಿಗೆ ತೆರಳಿದರು.

ಅಲ್ಲಿಯೂ ಅವರು ಮೂರು ವರ್ಷಗಳ ಲಾವಣಿಯ ಹಣವನ್ನು ಕೇಳಿದರು. (ಆದರೆ ರೈತರ ಮೈಮೇಲೆ ಪರಿಹಾಯ್ದು ಹೋಗಲಿಲ್ಲ.) ರೈತರು ಗಾಬರಿಯಾಗಿ, ಒಡಕಣ್ಣನ ಮನೆಗೆ ಎಡತಾಕಹತ್ತಿದರು, ಒಡಕಣ್ಣನು, "ನಾನು ಎಲ್ಲಾ ಅಧಿಕಾರ ನಾಯಕರಿಗೇ ಕೊಟ್ಟೇನಿ. ನನಗ ಯಾವುದೂ ಗೊತ್ತಿಲ್ಲ. ಲೆಕ್ಕ, ಪತ್ರ—ಎಲ್ಲಾ ಅವರ ಕಡಿಗೇ ಅವ. ಅವರನ್ನs ಕೇಳ್ರಿ "ಎಂದು ಹಾರಿಸಿಕೊಂಡನು. ರೈತರೆಲ್ಲ ಗೋಳಿಡುತ್ತ ಅವನ ಬಾಗಿಲ ಮುಂದೆ ಕುಳಿತುಬಿಟ್ಟರು.

ಒಡಕಣ್ಣನು ಭೀಮಣ್ಣನಾಯಕರಿಗೆ ತನ್ನ ಅಭಿಪ್ರಾಯವನ್ನು ಗುಪ್ತವಾಗಿ ತಿಳಿಸಿದನು. ಸರಿ. ಅವನ ಮನೆಯಲ್ಲಿ ಬೊಮ್ಮೀಗೇರಿಯ ಪಂಚರ ಸಭೆಯು ಸೇರಿತು. ಸಭೆಯಲ್ಲಿ ರೈತರು ತಮ್ಮ ಅಭಿಪ್ರಾಯವನ್ನು ತಿಳಿಸಿದರು. ನಾಯಕರು, "ನನಗ ಹಿಂದಿನದು ಏನೂ ಗೊತ್ತಿಲ್ಲ. ನಾನು ಕಾಗದದ ಮ್ಯಾಲಿಂದ ಲಾವಣಿ ವಸೂಲಮಾಡಾವ. ಹಿಂದಿನವರ್ಷ ಹಣಕೊಟ್ಟಬಗ್ಗೆ ಲೇಖೀ ತೋರಿಸಿರಿ. ಅಂದ್ರನಾ ಏನೂ ಹಣಾ ಕೇಳೂದಿಲ್ಲ." ಎಂದು ತಮ್ಮ ಹೇಳಿಕೆಯನ್ನು ಪಂಚರಿಗೊಪ್ಪಿಸಿದರು.

ಪಂಚರು ತಮ್ಮ ತಮ್ಮೊಳಗೆ ಏನೇನೊ ಗುಪ್ತವಾಗಿ ಮಾತಾಡಿಕೊಂಡು, ಕೊನೆಗೆ ತಮ್ಮ ನಿರ್ಣಯವನ್ನು ಹೇಳಿದರು: "ಎಲ್ಲ ರೈತರೂ ಸುಳ್ಳಹೇಳುವರೆಂದೂ ನಾವು ನಂಬುವದಿಲ್ಲ. ನಿಮ್ಮ ಕಾಗದ ಪತ್ರಗಳು ಸುಳ್ಳೆಂದೂ ಎನ್ನುವದಿಲ್ಲ. ಒಮ್ಮೆಲೆ ಮೂರು ವರ್ಷದ ಹಣಕೊಡುವುದು ಬಡರೈತರಿಂದ ಆಗುವುದಿಲ್ಲ. ಆದ್ದರಿಂದ ಸದ್ಯಕ್ಕೆ ಒಂದು ವರ್ಷದ ಲಾವಣಿಯ ಹಣವನ್ನು ಕೊಡಬೇಕು. ಮುಂದಿನ ವರ್ಷದಿಂದ ನೂರಕ್ಕೆ ಇಪ್ಪತ್ತರಂತೆ ಹೆಚ್ಚು ಲಾವಣಿ ಕೊಡಲಿಕ್ಕೆ ಒಪ್ಪಬೇಕು. ಈ ಕರಾರಿಗೆ ಒಪ್ಪದವರ ಮೇಲೆ ಕೋರ್ಟನಲ್ಲಿ ವ್ಯಾಜ್ಯನಡೆಯಿಸಬೇಕು.

ಪುಕ್ಕರಾದ ರೈತರು ಕೆಲವರು, ತಾವು ಹಸನ ಮಾಡಿಟ್ಟ ಹೊಲಗಳು ತಮ್ಮ ಕೈಬಿಟ್ಟು ಹೋದಾವೆಂಬ ಭಯದಿಂದ ಈ ನಿರ್ಣಯಕ್ಕೆ ಒಪ್ಪಿಕೊಂಡರು. ಗಟ್ಟಿಗರರಾದ ಕೆಲವರು ಒಪ್ಪಲಿಲ್ಲ. ಇಂತಹರ ಮೇಲೆ ನಾಯಕರು ವ್ಯಾಜ್ಯವನ್ನು ಹೂಡಿದರು.

ಮೊದಲನೆಯ ವ್ಯಾಜ್ಯವು ದೊಡ್ಡೀಕೊಪ್ಪದ ಕೆಂಚಣ್ಣನ ಮೇಲೆಯೆ ನಡೆಯಿತು. ಕೆಂಚಣ್ಣನು ಎರಡು ವರ್ಷಗಳವರೆಗೆ ನ್ಯಾಯಾಸನಕ್ಕೆ ಎಡ

ತಾಕಿ, ಇನ್ನೂರು ರೂಪಾಯಿ ಕಳೆದುಕೊಂಡು, ಕೊನೆಗೆ ಒಡಕಣ್ಣನಿಗೆ ಮುನ್ನೂರು ರೂಪಾಯಿ ಕೊಡಬೇಕಾಯಿತು. ಎಷ್ಟೋ ವರ್ಷಗಳಿಂದ ಮಾಡುತ್ತಬಂದ ಹೊಲವೂ ಅವನ ಕೈ ಬಿಟ್ಟಿತು. ಇದನ್ನು ನೋಡಿ ಉಳಿದ ರೈತರು ಬೆದರಿ, ನಾಯಕರ ಸಂಗಡ ಒಪ್ಪಂದ ಮಾಡಿಕೊಂಡರು. ಈ ತಂತ್ರದಿಂದ ಒಡಕಣ್ಣನ ಉತ್ಪನ್ನವು ಐದು ನೂರು ರೂಪಾಯಿ ಹೆಚ್ಚಾಯಿತು. ಹನುಮಾರದಲ್ಲಿಯೂ ಇದೇ ತಂತ್ರದ ಫಲವಾಗಿ ಮತ್ತೆ ಐದುನೂರು ರೂಪಾಯಿ ಹೆಚ್ಚಿಗೆ ದೊರೆಯತೊಡಗಿತು.

ಇದೇ ಸಮಯದಲ್ಲಿ ಉತ್ತರದಿಂದ ಭಯಂಕರವಾದ ಪಿಡುಗೊಂದು ಕರ್ನಾಟಕಕ್ಕೆಬಂತು. ಹುಲಿಗೆ ಬೆದರದ ಮಲೆನಾಡಿನ ಹಳ್ಳಿಗರು ಇಲಿಗಳಿಗೆ ಹೆದರಹತ್ತಿದರು. ಬೊಮ್ಮೀಗೇರಿಯಲ್ಲಿ ಮೊದಲು ಹಬ್ಬಿದ ಈ "ಗುಳ್ಳಿಯಬೇನೆ"ಗೆ ಮುನ್ನೂರು ಜನರು ಬಲಿಯಾದರು. ಎಷ್ಟೋ ಜನರು ಇದಕ್ಕೆ ಬೆದರಿ ಅಡವಿಯಲ್ಲಿ ಅಡಗಿಕೊಂಡು ಕುಳಿತರು. ಈ ಪಿಡುಗು ಮುಂದೆ ಹಬ್ಬದಂತೆ ಸರಕಾರದವರು ಹಳ್ಳಿಗರ ಮೇಲೆ ಬಹಳ ನಿರ್ಬಂಧಗಳನ್ನು ಹಾಕಿದರು. ಅಲ್ಲಲ್ಲಿ ಒತ್ತಾಯವೂ ನಡೆಯಿತು. ಗುಳ್ಳಿಯ ರೋಗದಿಂದ ಸತ್ತವರನ್ನು ಅವರ ಆಪ್ತೇಷ್ಟರು ನೋಡಲಿಕ್ಕೆ ಬರುವುದು ಕೂಡ ಕಟಾಯಿತು. ಸಂತೆಪೇಟೆಗಳಿಗಳಿಗೆ ಹೋಗುವುದು ನಿಂತು ಹಳ್ಳಿಯ ಜನಕ್ಕೆ ಬೇಕಾದ ಪದಾರ್ಥಗಳೇ ದೊರೆಯದಂತಾದುವು. ರೋಗ ಹಬ್ಬಿದ ಊರಿಗೆ ಹೋದವರು ಮರಳಿ ತಮ್ಮ ಊರನ್ನು ಸೇರಬೇಕಾದರೆ ಏಳು ದಿವಸ ಊರ ಹೊರಗಿನ ಹುಲ್ಲ ಗುಡಿಸಲ(ಕ್ವಾರಂಟಾಯಿನ್)ದಲ್ಲಿ ಕೊಳಿತು, ತಮ್ಮ ಮನೆಗೆ ಬರಬೇಕಾಗಿತ್ತು. ಇಷ್ಟು ವ್ಯವಸ್ಥೆಯನ್ನಿಟ್ಟರೂ ಈ ಪಿಡುಗು ಮುಂದೆ ಕಾಲುಚಾಚಿತು. ಬೊಮ್ಮೀಗೇರಿಯಲ್ಲಿ ಈ ರೋಗದ ಬಾಧೆಯು ತುಸು ಕಡಿಮೆಯಾಗುವಷ್ಟರಲ್ಲಿ ಸುತ್ತಲಿನ ಹಳ್ಳಿಗಳಲ್ಲಿ ಅದು ಒತ್ತರದಿಂದ ಪಸರಿಸಿತು.

ಮುದ್ದೂರಿನಲ್ಲಿಯೂ ಈ ಗುಳ್ಳಿಯ ಬೇನೆ ಮನೆಮಾಡಿತು. ಒಡಕಣ್ಣನ ತಮ್ಮ, ಅವನ ಸೋದರತ್ತೆ' ಆಕೆಯ ಗಂಡ, ಮೊದಲಾದವರು ಗುಳ್ಳಿಯೆದ್ದು ಪ್ರಾಣಬಿಟ್ಟನು. ಉಳಿದವರೆಂದರೆ ಶಂಕರರಾಯ, ಅವನ ತಮ್ಮನ ಹೆಂಡತಿ, ಅವಳ ಚಿಕ್ಕಮಗ, ಹಾಗೂ ಅವನ ಸೋದರತ್ತೆಯುವೆರಡು ಚಿಕ್ಕ

ಮಕ್ಕಳು. ಊರೆಲ್ಲ ತೆರವಾಯಿತು. ಶಂಕರರಾಯನು ಗಾಬರಿಯಾಗಿ, ಒಡ ಕಣ್ಣನಿಗೆ, "ನಾನು ಇಲ್ಲಿ ನಿಲ್ಲುವಂತಿಲ್ಲ. ನೀನು ಆಶ್ರಯ ಕೊಟ್ಟರೆ ಒಳಿತು. ಇಲ್ಲದಿದ್ದರೆ ನಾನು ದೇಶಭ್ರಷ್ಟನಾಗುವೆನು" ಎಂದು ತಿಳಿಸಿದನು. ಕೂಡಲೆ ಒಡಕಣ್ಣನು ಭೀಮಣ್ಣಾಯಕರನ್ನು ಮುದ್ದೂರಿಗೆ ಕಳುಹಿ, ತನ್ನ ಆಪ್ತರನ್ನು ಬೊಮ್ಮೇಗೇರಿಗೆ ಬರಮಾಡಿಕೊಂಡನು.

ಒಡಕಣ್ಣನು ಮೃದುವಚನಗಳಿಂದ ಶಂಕರರಾಯನನ್ನು ಮರುಳು ಗೊಳಿಸಿ, ಅವನ ಎಲ್ಲ ಬಂಗಾರದ ಒಡವೆಗಳನ್ನೂ, ಹತ್ತುಸಾವಿರ ರೂಪಾಯಿ ಗಳನ್ನೂ, ತನ್ನ ವಶಕ್ಕೆ ತೆಗೆದುಕೊಂಡನು. ತನ್ನ ತಮ್ಮನಾದ ನೀಲ ಕಂಠನು ತನಗೆ ಮಾಡಿದ ಅಪಮಾನದ ಸೇಡನ್ನು ಅವನ ಹೆಂಡತಿ ಮಕ್ಕಳ ಮೇಲಾದರೂ ತೀರಿಸಿಕೊಳ್ಳಬೇಕೆಂದು ಒಡಕಣ್ಣನ ಹಠವಿತ್ತು. ಅದಕ್ಕಾಗಿ ಅವನು ಶಂಕರರಾಯನನ್ನು ಗುಪ್ತಸ್ಥಳಕ್ಕೆ ಕರೆದೊಯ್ದು, "ನೀನು ನನ್ನಲ್ಲಿ ತಂದಿಟ್ಟ ಹಣ ಎಲ್ಲಾ ನಿನಗೊಬ್ಬಗ ಸಲ್ಲತಕ್ಕದು. ನಿನ್ನ ತಮ್ಮನ ಮಗ ಈಗ ಚಿಕ್ಕವ ಇದ್ದರೂ ಮುಂದ ನಿನಗ ಭಾಗಾದಿ ಆಗುವ. ಮುಳ್ಳು ಸಣ್ಣದು ಅಂತ ಅದರ ಮ್ಯಾಲ ದಯಾ ತೋರಿಸಲಿಕ್ಕೆ ಬರೋದಿಲ್ಲ. ಅದಕ್ಕ, ನೀನು ನನ್ನಲ್ಲಿ ಇಟ್ಟ ಭಂಗಾರ, ದಡ್ಡು ಇದರ ಸುದ್ದಿ ಯಾರಮುಂದೂ ಹೇಳಬ್ಯಾಡ. ಹಿರಿಯರು ಏನೂ ಸಂಪಾದಿಸಲಿಲ್ಲ ಅಂತ ಕಂಡಕಂಡವರ ಮುಂದ ಹೇಳತಿರು" ಎಂದು ಉಪದೇಶಮಾಡಿದನು. ಇವನ ತಂತ್ರವನ್ನರಿಯದ ಶಂಕರರಾಯರು ಅದಕ್ಕೆ ಒಪ್ಪಿದನು. ಒಡಕಣ್ಣನು ತನ್ನ ನಾದಿನಿಯಮೇಲೂ, ಅವಳ ಮಕ್ಕಳ ಮೇಲೂ ಬಹಳ ಅಕ್ಕರತೆಯನ್ನು ತೋರಹತ್ತಿದನು. ಇದರಿಂದಾಗಿ ಇವನೇ ತಮ್ಮ ಆಪದ್ಬಾಂಧವನೆಂದು ಅವರು ಭಾವಿಸಿದರು. ಒಂದು ವರ್ಷದವರೆಗೆ ಅವರೆಲ್ಲರು ಅವನ ಮನೆಯಲ್ಲಿಯೇ ವಾಸವಾಗಿದ್ದು, ಬಳಿಕ ಬೊಮ್ಮೇಗೇರಿ ಯಲ್ಲಿಯೆ ಬೇರೊಂದು ಮನೆಯನ್ನು ಗೊತ್ತುಮಾಡಿಕೊಂಡು, ಅಲ್ಲಿ ಇರ ತೊಡಗಿದರು. ಅವರು ಬೇರೆ ಹೋದರೂ ಅವರ ಮನೆತನದ ಮೇಲ್ವಿಚಾರ ಣೆಯನ್ನು ಒಡಕಣ್ಣನೇ ಮಾಡುತ್ತಿದ್ದನು.

ಗೌರಿಯ ಮರಣದನಂತರ ಒಡಕಣ್ಣನಿಗೂ ಲಕ್ಷ್ಮಣ ಜೋಯಿಸರಿಗೂ ವಿಶೇಷ ಬಳಕೆಯಿರಲಿಲ್ಲ. ಊರಲ್ಲಿ ಶ್ರೀಪಾದಭಟ್ಟರ ಪ್ರತಿಷ್ಠೆಯು ಬೆಳೆದ

ಬಳಿಕ ಅವರು ಜೋಯಿಸರಿಗೆ ಉಪದೇಶಮಾಡಿ ಒಡಕಣ್ಣನ ಬಾಂಧವ್ಯವನ್ನು ದೃಢಗೊಳಿಸಿದರು. ಒಡಕಣ್ಣನು ಅವರಿಗೆ ನೆರವಾಗತೊಡಗಿದನು. ಮೆಲ್ಲ ಮೆಲ್ಲಗೆ ಜೋಯಿಸರ ಬಳಿಕೆಯು ದೇಸಾಯರ ಮನೆಯಲ್ಲಿ ಬೆಳೆಯ ತೊಡಗಿತು. ಜೋಯಿಸರು ಅವನೊಡನೆ ಆಪ್ತಾಲೋಚನೆಯನ್ನು ಕೂಡ ಮಾಡ ತೊಡಗಿದರು. ಅವರಿಗೆ ಒಡಕಣ್ಣನು ಒಳ್ಳೆಯವನಾಗಿಯೆ ಕಂಡನು: ಏನೊ, ಹುಡುಗುತನದಲ್ಲಿ ಅಕೃತ್ಯಗಳನ್ನು ಮಾಡಿವನು. ಈಗ ತಲೆಗೆ ಬಡಿದದ್ದ ರಿಂದ ಪಶ್ಚಾತ್ತಾಪಹುಟ್ಟಿ ಹಿಂದಿನ ವೃತ್ತಿಯನ್ನು ಬಿಟ್ಟು ಬಿಟ್ಟಿದ್ದಾನೆ. ಕಾಶೀಯಾತ್ರೆಯನ್ನು ಮಾಡಿದ್ದಾನೆ, ಸತ್ಕರ್ಮಾನುಷ್ಠಾನಗಳಲ್ಲಿ ಕಾಲ ಕಳೆ ಯುತ್ತಿದ್ದಾನೆ. ಅನ್ಯಾಯಕ್ಕೆ ಆಶ್ರಯಕೊಟ್ಟಿದ್ದಾನೆ. ಎಂದ ಮೇಲೆ ಇವನ ಹೃದಯ ಪರಿವರ್ತನೆಯಾಗಿರಲಿಕ್ಕೆಬೇಕು. ಅಲ್ಲದೆ ಏನು ?

ಹೀಗೆ ಯೋಚಿಸಿ ಜೋಯಿಸರು ಅವನನ್ನು ಪ್ರೀತಿಯಿಂದ ಕಾಣತೊಡ ಗಿದರು. ಒಂದು ಹೊತ್ತಿನಲ್ಲಿ ತಮ್ಮ ಮನೆತನದ ಗುಟ್ಟನ್ನು ಕೂಡ ಅವನಿಗೆ ಹೇಳಿಬಿಟ್ಟರು. ಒಡಕಣ್ಣನು ಕುಶಾಗ್ರಮತಿ. ಆಪ್ತಾಲೋಚನೆಯಲ್ಲಿ ಜೋಯಿ ಸರಿಗೆ, " ನಿಮಗ ಈಗ ವಯಸ್ಸು ಬಹಳ ಆಗೇದ. ಹೊಲದ ವ್ಯವಸ್ಥಾ ನೋಡೋದು ನಿಮ್ಮಿಂದ ಆಗೋದಿಲ್ಲ. ನಿಮ್ಮ ಕರ್ಮಾನುಷ್ಠಾನಕೂ ತೊಂದರಿ ಆಗತದ. ಅದಕ್ಕ ಒಬ್ಬ ಕಾರಕೂನನ್ನ ಯಾಕ ನೇಮಿಸಿಕೋ ಬಾರದು? " ಎಂದು ಮಾತು ತೆಗೆದನು. ಪ್ರೀತಿಗೆಪಾತ್ರನಾದ ಒಡಕಣ್ಣನ ಮಾತಿಗೆ ಅವರು ಅಲ್ಲವೆಂದಾರೆಯೆ ? ಒಡಕಣ್ಣನು ತನಗೆ ಅತಿ ನಂಬಿಗಸ್ಥ ನಾದ ಭೀಮಾಚಾರ್ಯರನ್ನು ಜೋಯಿಸರ ಕಾರಕೂನನ್ನಾಗಿ ನಿಯಮಿಸಿ ದನು. ಭೀಮಾಚಾರ್ಯರು ಕೆಲದಿನಗಳಲ್ಲಿಯೆ ಜೋಯಿಸರ ಮನೆಯ ಮರ್ಮವನೆಲ್ಲ ತಿಳಿದುಕೊಂಡರು. ಇನ್ನೇಕೆ ತಡ ? ಒಡಕಣ್ಣನು ಭೀಮಾ ಚಾರ್ಯರನ್ನೂ, ತನ್ನ ಹಸ್ತಕರಾದ ಹತ್ತೆಂಟು ಜನ ಮುತ್ಸದ್ದಿಗಳನ್ನೂ ಗುಪ್ತ ವಾಗಿ ಕರೆಯಿಸಿ, ಅವರಿಗೊಂದು ಸಂಗತಿಯನ್ನು ತಿಳಿಸಿಬಿಟ್ಟನು; ನಿಮ್ಮಮೇಲೆ ಬಂದದನ್ನು ನಾನು ನೋಡಿಕೊಳ್ಳುವನೆಂಬ ಅಭಯವಚನವನ್ನು ಅವರಿಗೆ ನೀಡಿದನು.

ಮರುದಿವಸವೇ ಭೀಮಾಚಾರ್ಯರು ಜೋಯಿಸರ ಹೊಲಗಳನ್ನು ಲಾವಣಿ ಮಾಡುವುದಕ್ಕೆಂದು ಹಳ್ಳಿಗೆ ಹೋದರು. ಅಂದು ನಟ್ಟಿರುಳಿನ ಸಮ

ಯಕ್ಕೆ ಜೋಯಿಸರ ಮನೆಯ ಹಿತ್ತಲ ಬಾಗಿಲಿಗೆ ಕನ್ನ ಬಿತ್ತು. ಕಳ್ಳರು ಒಳನುಗ್ಗಿ, ನಡುಮನೆಯಲ್ಲಿ ಮಲಗಿದ್ದ ಜೋಯಿಸರ ಮಗಳನ್ನು ಹಿತ್ತಲಕ್ಕೆ ಹೊತ್ತುಕೊಂಡು ಹೋದರು. ಬಳಿಕ ಜೋಯಿಸರು ಮಲಗಿದ ಕೋಣೆಗೆ ಹೊರಚಿಲಕವನ್ನು ಹಾಕಿ, ಮನೆಯೊಳಗಿನ ಬೆಳ್ಳಿ ಬಂಗಾರದ ಒಡವೆಗಳನ್ನೂ, ದೇವರ ಜಗಲಿಯ ಬುಡದಲ್ಲಿ ಹೂಳಿಟ್ಟಿದ್ದ ಹತ್ತುಸಾವಿರ ರೂಪಾಯಿಗಳನ್ನೂ ಎತ್ತಿಕೊಂಡು ಹೋಗಿಬಿಟ್ಟರು.

ಈ ಗಲಭೆಗೆ ಎಚ್ಚತ್ತ ಜೋಯಿಸರು "ಅಯ್ಯೋ! ಮನೀಹಾಳಾತು. ಕಳ್ಳರೋ ಕಳ್ಳರು!" ಎಂದು ಕೆಟ್ಟದನಿಯಿಂದ ಚೀರುತ್ತ ಶಂಖವಾದ್ಯವನ್ನು ಪುಟಿಸಹತ್ತಿದರು. ಓಣಿಯೊಳಗಿನ ಜನರೆಲ್ಲ ಕೂಡಿದರು. ಈ ಗದ್ದಲವನ್ನು ಕೇಳಿ ಒಡಕಣ್ಣನೂ ಓಡುತ್ತ ಬಂದನು. ಎಲ್ಲಿದ್ದಾರೆ ಕಳ್ಳರು?

ಒಡಕಣ್ಣನು ಕೋಣೆಯ ಚಿಲಕವನ್ನು ತೆಗೆದೊಡನೆ ಜೋಯಿಸರು ಹೊರಗೆ ಧುಮ್ಮಿಕ್ಕಿದರು. ನಡುಮನೆಯಲ್ಲಿ ಮಗಳಿದ್ದಿಲ್ಲ! ಅವರು "ಅಯ್ಯಯ್ಯೋ ಮಗಳ ಮೈಮ್ಯಾಲ ಮೂರು ಸೇರು ಭಂಗಾರ ಇತ್ತು." ಎಂದು ಎದೆಎದೆ ಬಡಿದು ಕೊಳ್ಳಹತ್ತಿದರು. ಅಷ್ಟರಲ್ಲಿ ಕೂಡಿದ ಜನರು ಸುತ್ತಲೂ ಹುಡುಕಿ, ಹಿತ್ತಲಲ್ಲಿ ಎಚ್ಚರದಪ್ಪಿ ಬಿದ್ದವಳನ್ನು ಎತ್ತಿಕೊಂಡು ಬಂದರು. ಅವಳ ಮೈಮೇಲೆ ಒಂದಾದರೂ ಬಂಗಾರದ ಒಡವೆಯಿದ್ದಿಲ್ಲ. ಜೋಯಿಸರು ದೇವರ ಮನೆಗೆ ಧಾವಿಸಿದರು. ಅಲ್ಲೊಂದು ದೊಡ್ಡ ತಗ್ಗು ಬಿದ್ದಿತ್ತು. ಆಗ ಅವರು ಎದೆಯನ್ನು ಹುಚ್ಚೆದ್ದು ಬಡಿದುಕೊಳ್ಳುತ್ತಾ "ನನ್ನ ಸರ್ವಸ್ವ ಹಾಳಾತೂ! ಇನ್ನ ನಾನು ಜೀವ ಇಡೂದಿಲ್ಲ. ಭಾವೀ ಪಾಲಾಗತೇನಿ" ಎಂದು ಹಿತ್ತಲಕಡೆಗೆ ಓಡತೊಡಗಿದರು. ಒಡಕಣ್ಣನು ಜಗ್ಗಿ ಹಿಡಿದು, "ಹೀಂಗ ಪ್ರಾಣಾ ಕಳಕೊಂಡರ ಆಗೋದೇನು? ನಾಳೆ ಆ ಕಳ್ಳರನ ಗೊತ್ತು ಹಚ್ಚಿ ನಿಮ್ಮ ಒಡವಿ ನಿಮಗ ಸಿಗೂ ಹಾಂಗ ವ್ಯವಸ್ಥಾ ಮಾಡತೇನಿ. ನೀವೇನು ಎದಿ ಒಡಿಯಬ್ಯಾಡ್ರಿ" ಎಂದು ಸಂತೈಸಿ ಅವರನ್ನು ಒಳಗೆ ಕರೆದೊಯ್ದನು. ರುಕ್ಮಿಣೀ ಬಾಯಿಯವರಿಗೆ ಗಾಢನಿದ್ರೆ ಹತ್ತಿದ್ದರಿಂದ ಮಗಳನ್ನು ಎತ್ತಿಕೊಂಡ ಹೋದ ಅರಿವೇ ಅವರಿಗಿದ್ದಿಲ್ಲ.

ಒಡಕಣ್ಣನಿಂದಲೆ ಈ ಅನರ್ಥವಾಗಿಯೆಂದು ಜನರು ಭಾವಿಸಿದರು. ಆದರೆ ಅವರನ್ನು ಕೇಳುವವರಾರು? ಲಕ್ಷ್ಮಣ ಜೋಯಿಸರು ಒಡಕಣ್ಣನನ್ನೆ

ನಂಬಿದರು. ಅವರು ಪೋಲೀಸರನ್ನು ಕರೆಯಿಸಿ, ತನಗೆ ಆಗದವರ ಮನೆ ಗಳನ್ನೆಲ್ಲ ಶೋಧಿಸಿದನು. ಎಷ್ಟೋ ಬಡಜನರು ಬಡಿತಗಳನ್ನು ತಿಂದರು. ಬದುಕು ಮಾತ್ರ ಸಿಗಲಿಲ್ಲ. ಮುಂದೆ ಎರಡು ದಿನಗಳಾದ ಮೇಲೆ ಭೀಮಾಚಾ ರ್ಯರು ಬಂದರು; "ನಾ ಊರಾಗ ಇದ್ರ ಹೀಂಗ ಅನರ್ಥ ಆಗತಿದ್ದಿಲ್ಲ. ತುಡುಗರು ಒಳ್ಳೇ ಹೊತ್ತು ಸಾಧಿಸಿದರು. ಉಪಾಯ ಇಲ್ಲ." ಎಂದು ಹೆಮ್ಮೆಯ ಮಾತಾಡಿ, ಇನ್ನು ತಿಂಗಳೊಪ್ಪತ್ತಿನಲ್ಲಿಯೆ ಆ ಕಳ್ಳರ ಪಾರುಪತ್ಯ ಮಾಡುವವೆಂದು ಪಣತೊಟ್ಟರು. ಜೋಯಿಸರು, "ಕಂಡೂ ಕಂಡೂ ಕೆಂಡ ದಾಗ ಹಾರೇನಿ. ಅದಕ್ಕ ಯಾರೇನು ಮಾಡೋದು? ನನ್ನ ಪ್ರಾರಬ್ಧ!" ಎಂದು ಸರಕಾರಕ್ಕೆ ಮೊರೆ ಹೊಗುವುದನ್ನೂ ಬಿಟ್ಟು ಬಿಟ್ಟರು.

ಒಡಕಣ್ಣಿನ ಹಸ್ತಕರು ಋಣಬಾಧೆಯಿಂದ ಮುಕ್ತರಾದರು. ಮರು ವರ್ಷವೇ ಭೀಮಸೇನಾಚಾರ್ಯರಿಗೆ ಒಡಕಣ್ಣಿನ ಸಹಾಯದಿಂದ ಮದುವೆ ಯಾಯಿತು. ಬೊಮ್ಮೀಗೇರಿಯಲ್ಲಿ ಜೋಯಿಸರು ಹತವೀರ್ಯರಾಗಿ ಒಡ ಕಣ್ಣಿನ ವೈಭವಕ್ಕೆ ಕಳೆಯೇರಿತು.

ಒಡಕಣ್ಣನಿಗೆ ಪ್ರತಿಸ್ಪರ್ಧಿಗಳಾಗಿ ಪ್ರತಿಷ್ಠೆಯುಳ್ಳವರೂ ಇನ್ನೂ ಒಬ್ಬ ಬ್ಬರು ಇದ್ದರು. ಬೊಮ್ಮಿಗೇರಿಯಲ್ಲಿ ಕಲ್ಲಂಭಟ್ಟರ ಮನೆತನಕ್ಕೂ ಗಂಗಾಧರ ದೀಕ್ಷಿತರು ಮನೆತನಕ್ಕೂ ಶರೀರಸಂಬಂಧವಿದ್ದು ಅವರಿಬ್ಬರೂ ಒಂದೇ ಮನೆ ತನದವರಂತೆ ಒಕ್ಕಟ್ಟಿನಿಂದ ನಡೆದುಕೊಳ್ಳುತ್ತಿದ್ದರು. ಇದು ಹೀಗೆಯೆ ಇದ್ದರೆ ಹೇಗೆ? ಈ ಒಕ್ಕಟ್ಟನ್ನು ಮುರಿದೊಗೆಯುವ ಬಗೆಯೇನು ಎಂದು ಹೊಂಚು ಹಾಕಿಕೊಂಡು ಒಡಕಣ್ಣನು ಕುಳಿತಿದ್ದನು. ಹೀಗಿರಲು ಗಂಗಾ ಧರ ದೀಕ್ಷಿತರು ಆಕಸ್ಮಾತ್ತಾಗಿ ಮರಣಹೊಂದಿದರು. ಅವರ ಪಣತದಲ್ಲಿ ಕಲ್ಲಂಭಟ್ಟರು ಇಪ್ಪತ್ತು ಹೇರು ಬತ್ತವನ್ನು ಹಾಕಿದ್ದರು. ಒಡಕಣ್ಣನಿಗೆ ಒಳ್ಳೆಯ ಸಮಯವೊದಗಿತು.

ಗಂಗಾಧರ ದೀಕ್ಷಿತರ ತಮ್ಮ ಗುರುನಾಥನು ವಿದ್ಯಾರ್ಜನೆಗೆಂದು ಧಾರಾ ನಗರದಲ್ಲಿ ಇದ್ದನು. ಅಣ್ಣನ ಮರಣವಾರ್ತೆಯನ್ನು ಕೇಳಿ ಕೂಡಲೆ ಅವನು ಬೊಮ್ಮಿಗೇರಿಗೆ ಬಂದನು. ಒಡಕಣ್ಣನು ಸಮಯವನ್ನು ಕಳೆದುಕೊಳ್ಳದೆ ಗುರುನಾಥ ದೀಕ್ಷಿತನನ್ನು ತನ್ನ ಮನೆಗೆ ಕರೆಕಳುಹಿ. "ಏನಪಾ! ನಿಮ್ಮ

ಅಣ್ಣಂದಿರು ಬಹಳ ಸಾತ್ವಿಕರು. ಈ ಠಕ್ಕು ಕಲ್ಲಂಭಟ್ಟನ ಮ್ಯಾಲ ಅವರು ಒಳ್ಳೇ ವಿಶ್ವಾಸ ಇಟ್ಟಿದ್ದರು. ತಾವು ಕಳಿಸಿದ ಐನೂರು ರೂಪಾಯಿ ಅವನ ಕಡಿಗೆ ಇಟ್ಟದ್ದು ನನಗ ಖಾತ್ರೀ ಗೊತ್ತದ. ಈಗ ಅವರ ಉತ್ತರ ಕ್ರಿಯಾಕ ಆ ರೂಪಾಯಿ ಕೇಳು, ಏನಪಾ. ಅವಾ ಏನು ನಿನಗ ರೂಪಾಯಿ ಕೊಡೋದಿಲ್ಲ. ಅಷ್ಟ ಅಲ್ಲ, ನಿಮ್ಮ ಮನೀ ಪಣತದಾಗಿನ ಭತ್ತ ಎಲ್ಲಾ ತನ್ನದ್ಧ ಅಂತ ನಿನ್ನಮ್ಯಾಲ ತಿರುಗಿ ಬೀಳತಾನ. ನೀನು ಅರೇದವ. ಅವನ ಸೋಸಕ್ಕ ಬಲಿ ಬೀಳಬ್ಯಾಡ. ಹೋದದ್ದು ಹೋತು. ಇದ್ದದ್ದಾದರೂ ಕಾದುಕೋ. ಮತ್ತು ನಿನ್ನಮ್ಯಾಲ ಏನಾದರೂ ಪ್ರಸಂಗ ಬಂದ್ರ ನಾನು ಅದಕ್ಕ ಎದಿಗೊಟ್ಟು ನಿಲ್ಲತೇನಿ. ಅವರ ಸಂಬಂಧ ಮಾತ್ರ ನೀ ಬಿಟ್ಟುಬಿಡಬೇಕು." ಎಂದು ಅವನ ಕಿವಿಯಲ್ಲಿ ಊದಿ ಬಿಟ್ಟನು.

ಮರುದಿವಸ ಗುರುನಾಥನು ಒಡಕಣ್ಣನ ಹೇಳಿಕೆಯಂತೆ ಕಲ್ಲಂಭಟ್ಟರಿಗೆ ರೂಪಾಯಿ ಕೇಳಿದನು. ಅದಕ್ಕೆ ಅವರು ಕೊಟ್ಟ ಉತ್ತರವಾದರೂ ಒಡಕಣ್ಣನು ಹೇಳಿದಂತೆಯೆ ಬಂತು. ಗುರುನಾಥ ದೀಕ್ಷಿತನಿಗೆ ಒಡಕಣ್ಣನಲ್ಲಿ ನಂಬಿಗೆ ಹುಟ್ಟಿತು. ಒಡಕಣ್ಣನು ದೀಕ್ಷಿತರ ಪಣತದಲ್ಲಿದ್ದ ಹತ್ತುಹೇರ ಭತ್ತವನ್ನು ತಾನೆ ಕೊಂಡು ಕೊಂಡು, ರೂಪಾಯಿಗಳನ್ನು ಕೊಟ್ಟು ಗಂಗಾಧರ ದೀಕ್ಷಿತ ಉತ್ತರ ಕ್ರಿಯೆಯನ್ನು ಮಾಡಿಸಿದನು ಕಲ್ಲಂಭಟ್ಟರು ಆ ಭತ್ತವನ್ನು ಮಾರುವಾಗ ಆತಂಕಮಾಡಿದರು. ಆಗ ಒಡಕಣ್ಣನು ಮುಂದರಿದು ಬಂದು, "ಏನು ಭಟ್ಟರ! ನಿಮ್ಮ ಮಿತ್ರರ ಉತ್ತರ ಕ್ರಿಯಾ ಆಗಬಾರದು ಅಂತ ನಿಮ್ಮ ಇಚ್ಛಾ ಏನು? ನೀವು ತಿಳಿದವರು, ಒಳ್ಳೇ ಕರ್ಮಠರು. ಅವರ ಮನಿವಳಗಿನ ಕಾಳು ಅವರು ಮಾರಿದರ ನಿಮಗ್ಯಾಕ ಇಷ್ಟು ರೊಚ್ಚು? ಆಭತ್ತ ನಾ ಮಾರಲಿಕ್ಕೆ ತೊಗೊಂಡೇನಿ. ನೀವು ಹೆಚ್ಚಿಗೆ ಮಾತಾಡಿದರ ಗಚ್ಚಿನಮನಿ ಕಂಡೀರಿ. ಬಲು ಎಚ್ಚರಿಕಿ!" ಎಂದು ಬೆದರಿಸಿದನು.

ಕಲ್ಲಂಭಟ್ಟರ ರೊಚ್ಚು ನೆತ್ತಿಗೇರಿತು; "ಹೌದಪಾ! ನಾವು ಎಂದಿನಿಂದೂ ವೈದಿಕರು, ಕರ್ಮಠರು. ನೀ ಮಾತ್ರ ಕಾಶಿಗೆ ಹೋಗಿ ಹೊಸದಾಗಿ ಕರ್ಮಠಾ ಆಗಿ ಬಂದೀದಿ. ಏನು ಭಸ್ಮ! ಏನು ರುದ್ರಾಕ್ಷಿ! ಅಂಗೀ ಏನು ಬಿಟ್ಟೀದಿ,- ಆ ?- ಮೀಸೀ ಏನು ಬೋಳಿಸೀದಿ! ಅಧ್ಯಯನ ಬ್ಯಾರೆ ನಡಿ

ಸಿದಿ. ಭಸ್ಮ ಆಲ್ಲೋ ಅದು. ಹೆರವರ ಮನೀ ಸುಟ್ಟು ಬೂದಿ. ಈ ರುದ್ರಾಕ್ಷಿ, ಮಂದೀ ಮನೀ ಗಂಟು ಎಬ್ಬಿಸಿ ಕಂಟಕ ಆಗಿ ನಿಂತದ್ದರ ಚಿನ್ಹ. ನೀ ಅಂಗೀ ಬಿಟ್ಟಿದ್ದು ನಾಚಿಕೀ ಬಿಟ್ಟೇದಿ ಅಂತ ತೋರಿಸಲಿಕ್ಕೆ. ನೀ ಮಿಷೀ ಬೋಳಿಸಿದ್ದು ಊರ ಜನರ ತಲಿ ಬೋಳಿಸೋದಕ್ಕ ಸಾಕ್ಷಿ. ಮೂರ್ಖಾ, ನಿನ್ನಂಥಾ ಕಪಟೀ ಕರ್ಮಠ ...ಚ್ಚಾಗಿ, ಶುದ್ಧ ಕರ್ಮಠರು ಮೂಲೆಗುಂಪಾದರು. ನಂಬಿದ ಜನರನ್ನ ...ಂಗೋ ಡಾಂಭಿಕ ಕರ್ಮಠರು ಕರ್ಮಠರಲ್ಲಾ, ಗೋಮುಖ ವ್ಯಾಘ್ರ ಅವು ! ನಿನ್ನ ಶ್ರೇಷ್ಠತಾ ಇನ್ನೂ ಎಷ್ಟು ದಿನ ನಡೀತದೋ ನೋಡೋಣ. ಗೋಮುಖವ್ಯಾಘ್ರ, ನಿನ್ನ ಘಾಳಿ ಬ್ಯಾಡ ನಮಗ" ಎಂದು ಮರ್ಮಭೇದಕ, ನುಡಿಗಳನ್ನಾಡಿ ಅವರು ಅಲ್ಲಿಂದ ಹೊರಟು ಹೋದರು.

## ೧೩. ವಿರಕ್ತನ ಮದುವೆ

ಅಂದು ದೇಸಾಯರ ಮನೆಯಲ್ಲಿ ಕಾಶಿಯ ಸಮಾರಾಧನೆ ಊರೊಳಗಿನ ಬ್ರಾಹ್ಮಣರಿಗೆಲ್ಲ ಮಂಡಿಗೆಯ ಊಟ. ಎಲ್ಲರೂ ಗಂಟಲುಮುಟ್ಟ ಮಂಡಿಗೆಯನ್ನು ಜಡಿದು, ಪಡಸಾಲೆಯಲ್ಲಿ ತಾಂಬೂಲವನ್ನು ಸೇವಿಸುತ್ತಿದ್ದರು. ಒಡಕಣ್ಣನು ಬ್ರಹ್ಮವೃಂದಕ್ಕೆಲ್ಲ ದಕ್ಷಿಣೆಯನ್ನು ಕೊಡುತ್ತಿದ್ದನು. ಒಡಕಣ್ಣನ ಆಶ್ರಿತ ಬ್ರಾಹ್ಮಣನು ಕೆಂಪು ಅಕ್ಷತೆಗಳನ್ನು ತಂದು ಎಲ್ಲರಿಗೂ ಹಂಚಿದನು. ಶ್ರೀಪಾದಭಟ್ಟರು ತಮ್ಮ ಶಿಷ್ಯರೊಂದಿಗೆ ಉಚ್ಚ ಸ್ವರದಿಂದ ಋಗ್ವೇದದ ಒಂದು ವರ್ಗವನ್ನೂ, "ಬ್ರಾಹ್ಮಣ"ದ ಒಂದು ಭಾಗವನ್ನೂ ಉದ್ಘೋಷಿಸಿದರು. ಒಡಕಣ್ಣ ದೇಸಾಯಿಯು ಬ್ರಹ್ಮವರ್ಗಕ್ಕೆ ನಮಸ್ಕಾರ ಮಾಡಿ ಆಶೀರ್ವದಿಸಬೇಕೆಂದು ಬೇಡಿಕೊಂಡನು. ಬ್ರಾಹ್ಮಣರು ತಮ್ಮ ಕೈಯೊಳಗಿನ ಅಕ್ಷತೆಗಳನ್ನು ಅವನ ತಲೆಯ ಮೇಲೊಗೆದು, "ಪುತ್ರಪೌತ್ರ ಸಂಪನ್ನನಾಗಿ ಶತಾಯುಷೀಭವ" ಎಂಬ ಸರ್ವದಾಸಿದ್ಧವಾದ ಹರಕೆಯನ್ನು ಅವನಿಗೆ ದಯಪಾಲಿಸಿದರು.

ಆಗ ಅಲ್ಲಿ ಕುಳಿತ ಕುಲಕರ್ಣಿ ನೀಲಕಂಠರಾಯರು, "ದೇಸಾಯರ! ಬ್ರಾಹ್ಮಣರ ಆಶೀರ್ವಾದ ಸುಳ್ಳಾಗಬಾರದು. ಮುಂದಿನ ವರ್ಷದೊಳಗಾಗಿ ನೀವು ಸಂತಾನ ಪಡದು ಮತ್ತ ನಮಗ ಮಂಡಿಗೀ ಭೋಜನ ಮಾಡಿಸಬೇಕು. ನೋಡಿರಿ! "ಎಂದು ಮುಗುಳುನಗೆ ತೂರಿದರು. ಅದಕ್ಕೆ ಸಾವ

ಕಾರ ಶ್ರೀನಿವಾಸರಾಯರು "ಹೌದು. ನಮ್ಮ ಇಚ್ಛಾನೂ ಹಾಂಗs ಅದ. ಆದರ ದೇಸಾಯರು ಲಗ್ನಾನ ಮಾಡಿಕ್ಕೊಳ್ಳೋದಿಲ್ಲ ಅಂತಾರ! ಅಂಬಮ್ಯಾಲೇ ಅವರಿಗೆ ಮಕ್ಕಳು—?" ಎಂದು ತಮ್ಮ ಸಂಶಯವನ್ನು ಮುಂದಿಟ್ಟರು.

ಶಂಕರಶಾಸ್ತ್ರಿಗಳು "ಯಾತ್ರೀ ಮಾಡಿ ಬಂದ ಬಳಿಕ ದೇಸಾಯರ ಸ್ಥಿತೀನ ವಿಚಿತ್ರ ಆಗೇದ. ಇವರಿಗೆ ಒಂದು ತರಹಾ ವೈರಾಗ್ಯ ಹುಟ್ಟೇದ. ಇದೇನು ಸ್ಮಶಾನವೈರಾಗ್ಯನೋ, ಅಭಾವ ವೈರಾಗ್ಯನೋ— ಯಾರಿಗೆ ಗೊತ್ತು?" ಎಂದು ವ್ಯಂಗ್ಯವಾಗಿ ದನಿಯೆಳೆದರು.

ನೀಲಕಂಠರಾಯರು, "ಶಾಸ್ತ್ರಿಗಳ! ದೇಸಾಯರಿಗೆ ತಮ್ಮ ಇಬ್ಬರು ಹೆಂಡಂದಿರು ತೀರಿಕೊಂಡದ್ದಕ್ಕ ಸ್ಮಶಾನ ವೈರಾಗ್ಯ ಹುಟ್ಟಿದ್ದರೂ ಹುಟ್ಟಿರಬಹುದು. ಆದರ ಆ ವೈರಾಗ್ಯ ಬಹಳ ದಿನ ನೆಲ್ಲೋದಲ್ಲ. ಅಭಾವವೈರಾಗ ಅಂತೂ ಇವರಿಗೆ ಹುಟ್ಟೋ ಸಂಭವನs ಇಲ್ಲ. ಮೂರುಸಾವಿರದ ಮ್ಯಾಲ ಉತ್ಪನ್ನ ಮೂವತ್ತೆರಡರ ಒಳಗ ವಯಸ್ಸು. ಮನಿವಳಗ ಬೇಕಾದಷ್ಟು ಧನಕನಕ ಸಂಪತ್ತು! ಇಂಥವರಿಗೆ ಯಾರು ಹೆಣ್ಣು ಕೊಡಲಿಕ್ಕಿಲ್ಲ? ಆ? ಇವರು ಲಗ್ನಕ್ಕ ಹೂ ಅನ್ನಲಿ ಮತ್ತ— ಝಟ್‌ಪಟ್, ಇಂದಿಗೆ ಹದಿನೈದು ದಿನದಾಗ ನಾ ಲಗ್ನಾ ಮಾಡಿಸಿಬಿಡತೇನಿ." ಎಂದು ಉತ್ಸಾಹದಿಂದ ನುಡಿದರು.

ಸಾವಕಾರ ಶ್ರೀನಿವಾಸರಾಯರೂ ಅದಕ್ಕೆ ಹಿಮ್ಮೇಳವಾಗಿ, "ಹೌದು ಹೌದು ಎಲ್ಲಾರೂ ಪ್ರಯತ್ನ ಮಾಡಿ, ದೇಸಾಯರ ಮನವೊಲಿಸಿ, ಈ ವರ್ಷ ಅವರ ಲಗ್ನಾ ಮಾಡೇಬಿಡಬೇಕು. ಊರಿಗೇ ದೊಡ್ಡ ಮನೆತನ. ಇಂಥಾ ಮನೆತನ ಮುಂದ ನಡೆಯೋ ಹಾಂಗ ಮಾಡೋದು ನಮ್ಮಕರ್ತವ್ಯ ಏನು ದೇಸಾಯರ? ನೀವು ವಿವಾಹಕ್ಕ ಒಪ್ಪಿಗೀ ಕೊಡಬೇಕು." ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಒಡಕಣ್ಣನು ತತ್ವ ಬೋಧೆಯನ್ನೆ ಆರಂಭಿಸಿದನು. "ಎಲ್ಲೀ ಹೆಂಡರೂ ಎಲ್ಲೀ ಮಕ್ಕಳೂ! ಯಾರಿಂದಾನೂ ನಮಗ ಉಪಯೋಗ ಇಲ್ಲ. ಎಲ್ಲಾ ಸುಖ ಅನುಭೋಗಿಸೇನಿ. ನಮ್ಮ ಗತೀ ನಾವs ಕಂಡುಕೋಬೇಕು. ನಮ್ಮಲ್ಲೆ ಹತ್ತೆಂಟು ವಿದ್ಯಾರ್ಥಿಗಳು ಅಧ್ಯಯನ ಮಾಡತಾರಲ್ಲಾ. ಅವರು ನನ್ನ ಮಕ್ಕಳು ಅಂತ ತಿಳಕೊಂಡೇನಿ. ಕೈಕಾಲು ಗಟ್ಟಿರೋ ಕಾಲಕ್ಕ ಆದಷ್ಟು

ಸತ್ಕರ್ಮಾನುಷ್ಠಾನಾ ಮಾಡಬೇಕೂ ಅಂತ ನಿಶ್ಚಯ ಮಾಡೇನಿ. ಹೆಣ್ಣು ಕೊಡಲಿಕ್ಕೆ ನಾಕಾರು ಮಂದಿ ಬಂದು ಎಡತಾಕಿದರು. ಮತ್ತ ಎಲ್ಲಿ ಕೊಳ ಪಾಟಲದಾಗ ಬೀಳಲೀ ಅಂತ ಅವರಿಗೆ ನಾನು ಲಗ್ನಾ ಮಾಡಕೊಂಬೋದಿಲ್ಲಾಂತ ಹೇಳಿಕಳಿಸಿಬಿಟ್ಟೆ. ಸುಮ್ಮನ ನನ್ನ ಯಾಕ ಬಂಧನದಾಗ ಹಾಕತೀರಿ?"

ಅವನ ಉದಾಸೀನತೆಯ ಮಾತನ್ನು ಕೇಳಿ ಶ್ರೀಪಾದಭಟ್ಟರು, "ನಿಮ್ಮ ಮಾತು ನನ್ನ ಮನಸ್ಸಿಗೇನು ಬರೋದಿಲ್ಲ. ದೊಡ್ಡ ವೃಕ್ಷದ ಆಶ್ರಯದಾಗ ನೂರಾರು ಪಕ್ಷಿಗೋಳು ಇರತಾವ. ಆ ಗಿಡಾ ಕಡಿಯೋದೇನು ವಿಹಿತ ಅಲ್ಲ. ನೀವು ಲಗ್ನಾ ಮಾಡಿಕೊಂಡು ಮನೆತನಾ ಮುಂದ ಸಾಗಿಸಲಿಕ್ಕೆಬೇಕು. ನನ್ನ ಮಾತು ನೀವು ನಡಸದಿದ್ರ ನಿಮ್ಮ ಆಶ್ರಯದಾಗ ನಾ ಇರೋವಲ್ಲ" ಎಂದು ನಿಷ್ಠುರವಾಗಿ ನುಡಿದರು. ಅದಕ್ಕೆ ಅಲ್ಲಿ ನೆರೆದ ಬ್ರಾಹ್ಮಣರೆಲ್ಲ ತಲೆಯಲ್ಲಾಡಿಸಿ ತಮ್ಮ ಒಪ್ಪಿಗೆಯನ್ನು ಸೂಚಿಸಿದರು. ಒಡಕಣ್ಣನು, "ಗುರು ಹಿರೇರ ಮಾತು ಮೀರಬೇಕೂ ಅಂತ ನನ್ನ ಇಚ್ಛಾ ಇಲ್ಲ. ಆತು. ನಿಮ್ಮ ಮನಸ್ಸಿಗೆ ತಿಳಿದಾಂಗ ಮಾಡ್ರಿ. ಆದರ ಲಗ್ನದ ಯಾವ ಕೆಲಸದಾಗೂ ನಾ ಭಾಗ ತೊಗೋಂಬೋವ ಅಲ್ಲ" ಎಂದು ನಿರಾಸೆಯುಳ್ಳವನಂತೆ ನುಡಿದನು.

ಆಗ ನೀಲಕಂಠರಾಯರು, "ಆತು, ದೇಸಾಯರ ಒಪ್ಪಿಗಿ ಸಿಕ್ಕಹಾಂಗಾತು. ಇನ್ನು ಎಂಟು ದಿವಸದಾಗ ಒಳ್ಳೇ ಗಟ್ಟಿಮುಟ್ಟ ಕನ್ಯಾ ತರತೇನಿ. ಎಲ್ಲಾರೂ ಕೂಡಿ ದೇಸಾಯರ ಮಂಗಲಕಾರ್ಯ ಮಾಡಿಬಿಡೋಣ." ಎಂದು ಆನಂದದಿಂದ ನುಡಿದರು. ಅಲ್ಲಿ ಕೂಡಿದ್ದ ಬ್ರಾಹ್ಮಣರೂ ಸಂತೋಷದಿಂದ "ಆತು, ಲಗೂನ ಹೋಳಿಗಿ ಎಬ್ಬಿಸಿರಲ್ಲ. ನಿಮಗ ಬೇಕಾದ ಸಹಾಯ ನಾವು ಮಾಡತೇವಿ" ಎಂದು ನುಡಿದು ತಮ್ಮ ತಮ್ಮ ಮನೆಗೆ ತೆರಳಿದರು.

ಶಾನುಭೋಗ ನೀಲಕಂಠರಾಯರು ದೇಸಾಯರ ಮದುವೆಯ ಬಗ್ಗೆ ಆಸ್ಥೆ ವಹಿಸಿದ್ದು ಆಶ್ಚರ್ಯವೇನೂ ಅಲ್ಲ. ಅವರ ಸೋದರತ್ತೆಯ ಮಗಳೊಬ್ಬಳು ಉಪವರಳಾಗಿದ್ದಳು. ಅವಳ ಹೆಸರು ಸಾವಿತ್ರಿ. ಚಿಕ್ಕಂದಿನಲ್ಲಿಯೆ ಅವಳು ತಂದೆಯನ್ನು ಕಳೆದುಕೊಂಡಿದ್ದಳು. ಅವಳ ತಾಯಿ ಹಾಗು ಅಜ್ಜಿ ಅವಳನ್ನು ಒಬ್ಬಳೇ ಮಗಳೆಂದು ಅಕ್ಕರತೆಯಿಂದ ಜೋಪಾನ ಮಾಡಿದ್ದರು.

ತಾಯಿಗೆ ಪ್ರತಿವರ್ಷ ಇನ್ನೂರು ರೂಪಾಯಿ ಉತ್ಪನ್ನವುಳ್ಳ ಜಮೀನು ತಂದೆಯಿಂದ ದೊರೆತಿದ್ದುವು. ಈ ಆಸ್ತಿಯನ್ನೆಲ್ಲ ತನ್ನ ಮಗಳಿಗೇ ಮಾಡಿ, ದೊಡ್ಡ ಮನೆತನಕ್ಕೆ ಮಗಳನ್ನು ಕೊಡಬೇಕೆಂದು ಸಾವಿತ್ರಿಯ ತಾಯಿಯು ಬಯಸುತ್ತಿದ್ದಳು. ನೀಲಕಂಠರಾಯರು ಅವಳ ಮುಂದೆ ಒಡಕಣ್ಣನ ವಯ, ಉತ್ಪನ್ನ, ಸಂಪತ್ತು, ಕಾಶೀಯಾತ್ರೆಗಳನ್ನು ಬಣ್ಣಿಸಿ, "ಏನು? ಅವರು ಚಿಕ್ಕಂದಿನಲ್ಲೆ ಸ್ವಲ್ಪ ಎಟ್ಟ ಇದ್ದರು. ಈಗ ಒಳ್ಳೇ ಸಾತ್ವಿಕರಾಗ್ಯಾರ. ನಿಮ್ಮ ಸಾವಿತ್ರೀನ್ನ ಕೊಡೋ ಹಾಂಗಿದ್ದರ ವಿಚಾರಸತೇನಿ. ನಮ್ಮೂರಾಗ ಇದೊಂದು ದೊಡ್ಡ ಮನೆತನಾ ಅದ ನೋಡ್ರಿ" ಎಂದು ಮಾತು ತೆಗೆದರು. ಅದಕ್ಕೆ ಅವಳು, "ಅವರ ಆಸ್ತಿ ಏನು ನನಗ ಅರೇದ್ದಲ್ಲ. ಅದರ ಚಂದ್ರಾವತೀಬಾಯಿಯವರ ಸಂಬಂಧ ಊರಾಗ ಬಹಳ ಗೊಂದಲ ಅದ. ಆಕೇನೂ ಕಾಶೀಯಾತ್ರಾ ಮಾಡಿ ಬಂದಾಳ. ದಿವಸಾನೂ ಆಗ್ಯಾವ. ಹಿಂದಿನಹಾಂಗ ಈಗ ಮೆರೆಯೋ ಸಂಭವ ಇಲ್ಲ. ಆತು, ವರದಕ್ಷಿಣೆ ಏನು ಕೇಳತಾರೋ—ವಿಚಾರಿಸಿರಿ" ಎಂದು ತನ್ನ ಒಪ್ಪಿಗೆಯನ್ನು ಕೊಟ್ಟಳು.

ನೀಲಕಂಠರಾಯರು ಒಡಕಣ್ಣನ ಮುಂದೆ ಲಗ್ನದ ಪ್ರಸ್ತಾಪವನ್ನೆತ್ತಿದರು. ಒಡಕಣ್ಣನು "ನಾ ಏನೂ ಮಾತಾಡೋದಿಲ್ಲ. ನಮ್ಮ ಗುರುಗೋಳು ಶ್ರೀಪಾದಭಟ್ಟರು, ನಮ್ಮ ಸರ್ವಾಧಿಕಾರಿ ಭೀಮಣ್ಣನಾಯಕರು ಅವರೂ ನೀವೂ ಕೂಡಿಕೊಂಡು ಏನು ವಿಚಾರಮಾಡಿ ತಿಳಿಸತೀರೋ ಅದಕ್ಕ ನಾ ಒಪ್ಪಿಕೋತೇನಿ. ನನಗೇನು ಲಗ್ನ ಬೇಕಾಗಿದ್ದಿಲ್ಲ. ನಿಮ್ಮೆಲ್ಲಾರ ಆಗ್ರಹಕ್ಕ ಒಪ್ಪೇನಿ." ಎಂದು ಎಲ್ಲವನ್ನೂ ಹಾರಿಸಿ ಮಾತಾಡಿದನು. ಆದರೂ ನೀಲಕಂಠರಾಯರು ತಮ್ಮ ಸೋದರತ್ತೆಯ ಮಗಳು ಹದಿಮೂರು ವರ್ಷದವಳಿರುವಳೆಂದೂ ಅವಳ ತಾಯಿ ಅಜ್ಜಿಯರು ತಮ್ಮ ಇನ್ನೂರು ರೂಪಾಯಿ ಉತ್ಪನ್ನದ ಆಸ್ತಿಯನ್ನು ಅವಳಿಗೇ ಮಾಡುವರೆಂದೂ ವಿವರಿಸಿದರು. ಒಡಕಣ್ಣನು, "ನನಗೇನು ಆಸ್ತಿ ಕಮ್ಮಿ ಆಗಿಲ್ಲ. ಹೆರವರ ಆಸ್ತಿ ನನಗ ಬೇಕಾಗಿಲ್ಲ. ವರದಕ್ಷಿಣೀ ಮಾತು ನಾ ಆಡೋದಿಲ್ಲ. ನಿಮ್ಮೆಲ್ಲಾರ ಮನಸ್ಸಿಗೆ ಬಂದ ಹಾಗೆ ಮಾಡ್ರಿ" ಎಂದು ನೀಲಕಂಠರಾಯರ ಮೇಲೆಯೇ ಎಲ್ಲ ಹೊರೆಯನ್ನು ಹಾಕಿದನು.

ನೀಲಕಂಠರಾಯರು ಸಾವಿತ್ರಿಯ ಗೋತ್ರ ನಕ್ಷತ್ರಗಳೊಂದಿಗೆ ಶ್ರೀಪಾದಭಟ್ಟರನ್ನು ಕಂಡು, ಘಟಿತಾರ್ಥವು ಕೂಡಿ ಬರುವುದೆಂಬುದನ್ನು ಖಚಿತ ಪಡಿಸಿದರು. ಬಳಿಕ ಭೀಮಣ್ಣನಾಯಕರನ್ನು ಕರೆದು ವರದಕ್ಷಿಣೆಯ ಮಾತೆತ್ತಿದರು ನಾಯಕರು, "ನಮ್ಮ ವ್ಯಾಲೇ ಅವರು ಭಾರ ಹಾಕ್ಯಾರ ಅಂತ ನಾವು ಅವರಿಗೆ ಅನ್ಯಾಯ ಮಾಡಲಿಕ್ಕೆ ಬರೋದಿಲ್ಲ. ದೇಸಾಯರ ಹಿಂದಿನ ಲಗ್ನದ ಕಾಲಕ್ಕಿದ್ದ ಉತ್ಪನ್ನಕ್ಕಿಂತ ಈಗ ಒಂದು ಸಾವಿರ ರೂಪಾಯಿ ಉತ್ಪನ್ನ ಹೆಚ್ಚಾಗೇದ. ಆಗ ನಾಕು ಸಾವಿರ ರೂಪಾಯಿ ವರದಕ್ಷಿಣೆ ಗೊಗೊಂಡಿದ್ರು. ಈಗ ಅದಕಿಂತ ಕಡಮಿ ತಕ್ಕೊಂಡ್ರ ಅವರ ಮರ್ಯಾದಿಗೆ ಕುಂದು ಬರತದ. ಕನಿಷ್ಠ ನಾಕುಸಾವಿರ ವರದಕ್ಷಿಣೀ ವ್ಯಾಲ ವರೋಪಚಾರ ಕೊಡೋಹಾಂಗಿದ್ರ ವಿಚಾರಸಿರಿ" ಎಂದು ತಮ್ಮ ಅಭಿಪ್ರಾಯವನ್ನು ತಿಳಿಸಿದರು.

ನೀಲಕಂಠರಾಯರು ತಮ್ಮ ಸೋದರತ್ತೆಗೆ ಈ ವಿಷಯವನ್ನು ತಿಳಿಸಿದರು. ತಮಗೆ ಅಷ್ಟು ಕೊಡುವ ಯೋಗ್ಯತೆಯಿಲ್ಲದ್ದರಿಂದ ಅದೇ ಬೆಲೆಯ ಆಸ್ತಿಯನ್ನೆ ಅಳಿಯನಿಗೆ ಕೊಡುವೆವೆಂದು ಸಾವಿತ್ರಿಯ ತಾಯಿಯವರು ತಿಳಿಸಿದರು. ನೀಲಕಂಠರಾಯರು ಒಡಕಣ್ಣನಿಗೆ ಆಸ್ತಿಯ ಆಸೆಯಿಲ್ಲವೆಂದೂ, ಹೇಗಾದರೂ ಮಗಳಿಗೇ ಕೊಡುವ ಆಸ್ತಿಯನ್ನು ಈಗಲೆ ಮಾರಿ ಆ ಹಣವನ್ನು ವರದಕ್ಷಿಣೆಯಾಗಿ ಕೊಟ್ಟುಬಿಡುವುದು ಯುಕ್ತವೆಂದೂ ಸೂಚಿಸಿ, ತಮ್ಮ ಸೋದರತ್ತೆಯನ್ನು ಒಪ್ಪಿಗೆಯನ್ನು ಪಡೆದರು.

ಸರಿ. ಶ್ರೀಪಾದಭಟ್ಟರ ಮಧ್ಯಸ್ಥಿಕೆಯಿಂದ ನಾಲ್ಕು ಸಾವಿರ ವರದಕ್ಷಿಣೆ ಹಾಗೂ ವರೋಪಚಾರ ಕೊಡುವುದನ್ನು ಗೊತ್ತುಮಾಡಿಕೊಂಡು, ಒಡಕಣ್ಣನಿಗೆ ಸಾವಿತ್ರಿಯನ್ನು ಕೊಡುವ ನಿಶ್ಚಯ ಕಾರ್ಯವನ್ನು ಮರುದಿನವೆ ಅವರು ಸಾಂಗಗೊಳಿಸಿದರು. ಭೀಮಣ್ಣನಾಯಕರು ಒಡಕಣ್ಣನ ರೈತರಿಂದ ಒಂದು ಸಾವಿರ ರೂಪಾಯಿ ಲಗ್ನದ ಪಟ್ಟಿಯನ್ನೂ ಎತ್ತಿಕೊಂಡು ಬಂದರು.

ಮುಂದೆ ಒಂದು ತಿಂಗಳಲ್ಲಿಯೆ ಒಡಕಣ್ಣನ ಮೂರನೆಯ ಮದುವೆಯಾಯಿತು. ಆರು ತಿಂಗಳಲ್ಲಿ ಸಾವಿತ್ರಿಯು ಗಂಡನ ಮನೆಗೆ ಬಂದಳು. ಚಂದ್ರಾವತಿಬಾಯಿಯವರಿಗೆ ಮತ್ತೆ ಅತ್ತೆಯ ಅಧಿಕಾರವು ಪ್ರಾಪ್ತವಾಯಿತು ಒಡಕಣ್ಣನಂತೂ ಎಲ್ಲ ವಿಷಯಕ್ಕೂ ವೈರಾಗ್ಯವನ್ನು ತಾಳಿಬಿಟ್ಟಿದ್ದನು.

ಸಾವಿತ್ರಿಗೆ ಅವನ ಮನೆಯ ಕೊತ್ತಾಗಿ ದುಡಿಯುವ ಹೊತ್ತು ಬಂತು. ಇದರಿಂದ ಅವಳ ತಾಯಿ ಅಜ್ಜಿಯವರಿಗೂ, ಚಂದ್ರಾವತಿಬಾಯಿಯವರಿಗೂ ಮನಸ್ತಾಪವಾಯಿತು. ಮುಂದೆ ಸಾವಿತ್ರಿಗೆ ತವರುಮನೆಯನ್ನೂ ಕಾಣುವುದೂ ದುಸ್ತರವಾಯಿತು. ಅವಳ ತಾಯಿಯು ಮಗಳ ದೆಸೆಯಿಂದ ತನ್ನ ಆಸ್ತಿಯನ್ನೆಲ್ಲ ಮಾರಿದ್ದರಿಂದ, ಅವರ ಉಪಜೀವನಕ್ಕೂ ಬಹಳ ತೊಂದರೆಯಾಯಿತು. ದೊಡ್ಡವರ ಸಂಬಂಧ ಮಾಡಿದ್ದು ದೊಡ್ಡ ತಪ್ಪಾಯಿತೆಂದು ಅವರು ಹಳಹಳಿಸಹತ್ತಿದರು. ಅವರಿಗೇನಾದರೇನು" ಒಡಕಣ್ಣನಿಗೆ ವೈರಾಗ್ಯದಿಂದ ಐದಾರು ಸಾವಿರ ರೂಪಾಯಿಗಳ ಸಂಪಾದನೆಯಾಯಿತು.

## ೧೪. ಪಂಚಪಿಶಾಚಿಗಳು

ಕಾಶಿಯಿಂದ ಸಾಧುವಿನ ಸೋಗು ಹಾಕಿಕೊಂಡು ಬಂದ ಬಳಿಕ ತನ್ನ ಅಂತರಂಗವು ಬಯಲಿಗೆ ಬೀಳದಂತೆ ಅವನು ಬಹಳ ದಕ್ಷತೆಯನ್ನು ವಹಿಸಿದ್ದನು. ಅವನು ಸಾಧುವಾದರೇನು? ಹದಿನಾರು ವರ್ಷದ ನೀಲವ್ವ ಒಬ್ಬಳು ಅವನ ಬಳಿಯಲ್ಲಿಯೆ ಇದ್ದಳು. ನೀಲವ್ವನೆಂದರೆ ಅವನ ಮನೆಯ ಒಕ್ಕಲಗಿತ್ತಿಯಾದ ಸಾವಕ್ಕನ ಮಗಳು ಅವಳನ್ನು ಹೊನ್ನಾಪುರದ ಹನುಮಣ್ಣನಿಗೆ ಕೊಟ್ಟು ಮದುವೆಯೂ ಆಗಿತ್ತು. ಹನುಮಪ್ಪನ ಮನೆಗೆ ಹೋದ ಬಳಿಕ ನೀಲವ್ವನಿಗೂ, ಅವಳ ಗಂಡನ ಸೂಳೆಗೂ ಬಡಿದಾಟವೆ ನಡೆಯಿತು. ಕೊನೆಗೆ ಅವಳು ಗಂಡನ ಕಣ್ಣುತಪ್ಪಿಸಿ, ತಾಯಿಯ ಬಳಿಗೆ ಓಡಿಬಂದಳು. ಗಂಡನ ಅವಿವೇಕತನವನ್ನು ಉಪ್ಪುಕಾರಹಚ್ಚಿ ಬಣ್ಣಿಸಿದಳು. ಅವನೊಡನೆ ಬಾಳುವೆ ಮಾಡುವುದು ಮಗಳಿಗೇ ಬೇಡಾಗಿತ್ತೆಂಬುದು ಸಾವಕ್ಕನಿಗೇನು ಗೊತ್ತು? ಸಾವಕ್ಕನು ಅಳಿಯನ ಮೇಲೆ ಉರಿದುಬಿದ್ದಳು. ಅವನು ಹೆಂಡತಿಯನ್ನು ಕರೆಯಲಿಕ್ಕೆ ಬಂದರೂ, ಅವಳು ನೀಲವ್ವನನ್ನು ಕಳಿಸಿಕೊಡಲಿಲ್ಲ. ಹನುಮಪ್ಪನಿಗೆ ತಲೆತಿರುಗಿತು. ತನ್ನ ಕೆಲವು ಜನ ಸ್ನೇಹಿತರ ಸಹಾಯದಿಂದ ನೀಲೆಯನ್ನು ಬಲಾತ್ಕಾರವಾಗಿ ತನ್ನೂರಿಗೆ ಹೊತ್ತುಕೊಂಡು ಹೋಗಬೇಕೆಂದು ಅವನು ಬೊಮ್ಮೇಗೇರಿಗೆ ಬಂದನು. ಸಾವಕ್ಕನು ತನ್ನ ಮಗಳ ಮೇಲೆ ಬಂದ ಗಂಡಾಂತರವನ್ನು ಒಡಕಣ್ಣನ ಮುಂದೆ ತೋಡಿಕೊಂಡಳು. ಒಡಕಣ್ಣನು ಅವಳಿಗೆ ಅಭಯವನ್ನಿತ್ತು. ತಾಯಿಮಕ್ಕಳಿಬ್ಬರನ್ನೂ ತನ್ನ

ಮನೆಯಲ್ಲಿಯೆ ಇಟ್ಟುಕೊಂಡನು. ದೇಸಾಯರ ಆಶ್ರಯದಲ್ಲಿದ್ದವಳನ್ನು ಬಲಾತ್ಕಾರದಿಂದ ಕರೆದೊಯ್ಯುವುದು ಹನುಮಣ್ಣನಿಗೆ ಸಾಧ್ಯವೆ? ಅವನು ನಿರುಪಾಯನಾಗಿ ತನ್ನ ಊರಿಗೆ ಮರಳಬೇಕಾಯಿತು.

ಕೆಲದಿನಗಳಲ್ಲಿಯೆ ಒಡಕಣ್ಣನು ನೀಲೆಯನ್ನು ತನ್ನ ಬಲೆಯಲ್ಲಿ ಎಳೆದುಕೊಂಡನು. ಅವಳೂ ಚಕ್ಕಂದದಿಂದ ಅವನ ಆಶ್ರಯದಲ್ಲಿ ಇರತೊಡಗಿದಳು. ಹನುಮಪ್ಪನು ಕೆಲ ದಿನ ಬಿಟ್ಟು ಮತ್ತೆ ಬಂದನು ಮಾಡಿಕೊಂಡ ಗಂಡನಲ್ಲವೆ? ಸಾವಕ್ಕನು ಅಳಿಯನನ್ನು ಮನೆಗೇ ಬರಗೊಡಲಿಲ್ಲ. ಹನುಮಣ್ಣನು ನಿಂಗನಗೌಡರಿಗೆ ಹೇಳಿಕೊಂಡು, ಅವರೊಡನೆ ದೇಸಾಯರಮನೆಗೆ ಬಂದನು. ಅಲ್ಲಿ ಸೆಟ್ಟರ ಬಸೆಟ್ಟೆಪ್ಪ, ಕಂಬಾರ ಕಲ್ಲಣ್ಣ ಮೊದಲಾದ ಒಡಕಣ್ಣನ ಮಿತ್ರರು ಕುಳಿತಿದ್ದರು. ನಿಂಗನಗೌಡರು ಆ ಪಂಚರೆದುರಿಗೆ ಹನುಮಣ್ಣನ ಬಿನ್ನಹವನ್ನು ಮಂಡಿಸಿ, "ಸಾವಕ್ಕಗ ಬುದ್ಧೀಹೇಳಿ ಗಂಡಹೆಂಡತೀ ಕೂಡಿಸೋ ಪ್ರಯತ್ನ ಮಾಡ್ರಿ" ಎಂದರು. ಒಡಕಣ್ಣನು, "ಹೆಣ್ಣುಮಕ್ಕಳು ಗಂಡನ ಮನ್ಯಾಗ ಇದ್ದು ಬಾಳೇವ ಮಾಡೋದs ಯೋಗ್ಯ. ಪರಾಯಿ ಹೆಣಮಕ್ಕಳ ಗೋಳು ಕಟ್ಟಿಗೋಳ್ಳೋದು ಪುರುಷರಿಗೂ ಯೋಗ್ಯ ಅಲ್ಲ. ಸಾವಕ್ಕನ್ನ ಕರಿಸಿ, ಆಕಿಗೆ ಬುದ್ಧಿವಾದ ಹೇಳಿ, ಗಂಡಹೆಂಡರ್‍ನ ಕೂಡಿಸಿ ಪುಣ್ಯ ಕಟ್ಟಿಕೊಳ್ರಿ" ಎಂದು ಏನೂ ಅರಿಯದವನಂತೆ ನುಡಿದನು.

ಸಾವಕ್ಕನು ಬಂದು, ತನ್ನ ಮಗಳನ್ನು ಅಳಿಯನು ಗೋಳಾಡಿಸಿದ್ದನ್ನು ಕಣ್ಣೀರು ಸುರಿಸುತ್ತಾ ಬಣ್ಣಿಸಿದಳು. ಬಡಿಗರ ಭರಮಣ್ಣನು, "ಹನುಮಣ್ಣನ ಕಡೆಗೆ ತಿರುಗಿ, "ಹಿಂಗ ದನಾ ಬಡದಾಂಗ ಬಡದ್ರ ಹೆಣಮಕ್ಳು ಹ್ಯಾಂಗ ತಡದಾರೋ, ಹನುಮಣ್ಣಾ? ಇಂತಾ ಪಡಿಪಾಟಲಾ ಬಡಸಾಕs ಹೇಣತಿ ಮಾಡಿಕೊಂಡೀ ಏನು? ಪಾಡಾಗಿ ಬಾಳೇವು ಮಾಡತೀನೀ ಅಂತ ಬರ ಕೊಟ್ಟು ಹೇಣತೀ ಕರಕೊಂಡು ಹೋಗು" ಎಂದು ಬೆದರಿಸಿದನು.

ಅದಕ್ಕೆ ಹನುಮಣ್ಣನು, "ಎಪಾ! ನನಗೇನು ತಾಯಿಲ್ಲಾ. ತಂದೀಲ್ಲಾ, ಅಣತಮಂದ್ರೂ ಇಲ್ಲಾ. ನಾ ಒಬ್ಬಂಟಿಗ ಹೊಲದಾಗ ದುಡಿಯಾಕ ಹೋಗಾವಾ. ಅನ್ನದ ಪಡಿಪಾಟಲ ಬಿಡಬೇಕೂ ಅಂತ ಲಗಣಾ ಮಾಡಿಕೊಂಡೀನಿ. ಇಪ್ಪತ್ತು ಒರಾ ತೆರಾ ಕೊಟ್ಟೇನಿ. ನೂರು ರೂಪಾಯಿ ಲಗಣಕ್ಕ ಕರ್ಚು ಮಾಡೀನಿ. ಆಕಿನ್ನ ಯಾಕ ಬಡ್ಯಾಕ ಹೋಗಲ್ರೀ? ಅದು

ಬಾಳರಕ್ಕಸಿ ಹೆಣ್ಣ ಐತ್ರೀ. ಕಾಲಕೆದರಿ ಜಗಳಮಾಡಿ, ಓಡಿಬಂದೈತಿ, ನಮೂ ರಾಗ ನಾಕ ಮಂದಿನ್ನಾರ ಕೇಳ್ರೀ— ನಾ ಅಂತಾ ಮನಶಾ ಏನೊ ಅಂತ ನೀವು ಹೇಳಿದಾಂಗ ಕೇಳಿಕೊಂಡು ಬಾಳೇ ಮಾಡತೇನ್ರೀ ಆಕಿನ್ನ ಕಳಸೊ' ಹಾಗ ಮಾಡ್ರಿ" ಎಂದು ಬಹು ದೈನ್ಯದಿಂದ ಬೇಡಿಕೊಂಡನು.

ಆದಕ್ಕೆ ಬಸೆಟ್ಟೆಪ್ಪನು, "ನೀನು ಚಲೋತನ್ಯಾಗಿ ಬಾಳೇವ ಮಾಡಿದ್ರ ಆಕ್ಯಾಕ ಓಡಿ ಬರತಿದ್ಲು? ಓಟೊ ತಪ್ಪು ನಿನ್ನ ಕಡ್ಯಾಕ ಐತಿ, ಆತು. ಬಾಳೇಗೇಡು ಮಾಡೋದೇನು ದೊಡ್ಡ ಮಾತಲ್ಲ. ನಾವೆಲ್ಲಾರೂ ಕೂಡಿ ಒಂದುನಿರ್ಣಯ ಮಾಡತೀವಿ ಅದರಂತ ನೀ ನಡದ್ರ ನಿನ್ನಹೇಣತೀ ಕೊಟ್ಟು ಕಳಸತೇವಿ" ಎಂದು ಅಧಿಕಾರವಾಣಿಯಿಂದ ಮಾತಾಡಿದನು.

"ನಾಕ ಮಂದೀ ಮಾತು ಮಿಕ್ಯಾಕ ಬರತೈತ್ರೀ? ಅದೇನು ಹೇಳೋದು ಹೇಳ್ರೀ — ಅದರಂತ ನಾ ನಡಕೊಂತೀನಿ" ಎಂದು ಹನುಮಣ್ಣನು ವಚನ ಕೊಟ್ಟನು.

ಬಸೆಟ್ಟೆಪ್ಪ ಮೊದಲಾದ ಪಂಚರು, ಒಡಕಣ್ಣನೊಡನೆ ಒಳಗೆ ಹೋಗಿ, ಗುಪ್ತವಾಗಿ ಮಾತಾಡಿಕೊಂಡು ಹೊರಗೆ ಬಂದರು. ಬಸೆಟ್ಟೆಪ್ಪನು ಗಂಭೀರವಾಗಿ ತಮ್ಮ ನಿರ್ಣಯವನ್ನು ಹೇಳತೊಡಗಿದನು. "ನಿನ್ನ ನಂಬಿ ನಿನ್ನ ಹೇಣತೀ ಕಳಸಾಕ ಬರೋಹಾಗಿಲ್ಲ. ನೀ ಆಕೀ ಕೂಡ ಪಾಡಾಗಿ ಬಾಳೇ ಮಾಡೋದು ಖಾತ್ರಿ ಇಪ್ರ ನಿಂದೇನು ನಾಕು ಕೂರಿಗಿ ಹೊಲ ಐತೆಲ್ಲಾ— ಆ ಹೊಲಾ ನಮ್ಮ ಪೇಸಾಯರ ಹೆಸರಲೆ ಬರಕೊಡು. ನೀ ಹೇಳಿದಾಂಗ ನಡಕೊಂಡೀ, ಅಂದ್ರೆ ಅದನ್ನ ನಿನಗ ಬಿಟ್ಟುಕೊಡತಾರ; ಇಲ್ಲಪಾ ಅಂದ್ರ ನಿನ್ನ ಹೇಣ್ತಿಗೆ ಕೊಡತಾರ. ಈಟು ಗಟ್ಟಿಮಾಡಿಕೊಂಡು ನಿನ್ನ ಹೇಣ್ತೀ ನೀ ಕ ಂಡು ಹೋಗು ಇಲ್ಲಾ ಅಂದ್ರು ಪಾರೀಕತ್ತ ಬರಕೊಟ್ಟುಬಿಡು"

"ಪಾಡ ನಿರ್ಣಯಾ ಮಾಡಿದ್ರೆಲ್ಲಾ! ಹೊಲದಾಗ ದುಡದುಕಾಸ ಹೊಟ್ಟೀತುಂಬಿಕೊಂತಿದ್ದೆ. ಅದಕ್ಕೂ ಕಾಲಾ ತಂದ್ರಿ. ಇದ್ದ ಹೊಲಾ ಕರೀದೀ ಬರಕೊಟ್ಟ ನಾ ಬಿಕ್ಸಾ ಬೇಡಾಕ ಹೋಗಲ್ಯಾ? ಬೆಲ್ಲಾನೂ ಹೋತು ಬೆಲ್ಲ ಹತ್ತಿದ ಕಲ್ಲೂ ಹೋತು ಅಂತ ನನ್ನ ಗತೀ ಆದೀತು. ದೊಡ್ಡವರು ಹ್ಯಾಗ ಮಾತಾಡಿದರೂ ಚೆಂದ ಕಾಣತೈತಿ ಹಿಂಗ ನಿರ್ಣಯಾ ಮಾಡಿ ಏಸು ಮಂದೀ ಬಾಳೇಗೇಡು ಮಾಡೀರಿ? ಪಂಚೇತಿಗೀ ಪಾಡೈತಿ ಪಂಚ

ರಲ್ರೀ ಇವರು, ಪಿಶಾಚಿಗೋಳು ಬಡವಾ ನಾನು ಏನು ಮಾಡೋದೈತಿ? ದೊಡ್ಡವರ ಉಡ್ಯಾಗ ಬಿದ್ದಾಳ. ತಿಳದಾಂಗಾತ್ರೀ. ನಾ ನಮ್ಮೂರಿಗೆ ಹೋಕ್ಕೀನಿ" ಎಂದು ಸ್ಪಷ್ಟವಾಗಿ ನುಡಿದು ಹನುಮಣ್ಣನು ಅಲ್ಲಿಂದೆದ್ದು ಹೋದನು.

## ೧೫. ಮಾಸ್ತರರ ಮುಸಲತ್ತು

ದೇಸಾಯರು ಕಾಶೀಯಾತ್ರೆಗೆ ಹೋಗುವುದಕ್ಕಿಂತ ಒಂದು ವರ್ಷ ಮೊದಲು ಬೊಮ್ಮೀಗೇರಿಯ ಶಾಲೆಗೆ 'ಉಮಚಗಿ' ಎಂಬೊಬ್ಬ ಮಾಸ್ತರರು ಬಂದಿದ್ದರು. ಅವರು ರಸಿಕರಾದ ಸಾಹಿತಿಗಳು; ಆಯುರ್ವೇದ ಶಾಸ್ತ್ರದ ಅಧ್ಯಯನವನ್ನೂ ಮಾಡಿದವರು. ಅವರಂತೆ ಬಡವರ ಬಂಧುಗಳಾಗಿ, ಹಳ್ಳಿಯ ಹಿತಕ್ಕಾಗಿ ಹಗಲಿರುಳು ಹೆಣಗುವವರು ಅಪರೂಪ. ಅವರು ಬಹಳ ಪರೋಪಕಾರಿಗಳಾಗಿದ್ದರಿಂದ ಬೊಮ್ಮೀಗೇರಿಯಲ್ಲಿ ಅವರ ಪ್ರತಿಷ್ಠೆಯು ಸ್ವಾಭಾವಿಕವಾಗಿ ಬೆಳೆಯಿತು ಬೊಮ್ಮೀಗೇರಿಯು ರೋಗದ ತವರೂರಾಗಿದ್ದರೂ ಅಲ್ಲಿ ವೈದ್ಯರಿರಲಿಲ್ಲ. ಉಮಚಗಿ ಮಾಸ್ತರರು ವೈದ್ಯಕಿಯನ್ನು ಬಲ್ಲವರೆಂಬ ವಾರ್ತೆಯು ಊರಲ್ಲಿ ಹಬ್ಬಿದೊಡನೆ ಬಡಜನರು ಔಷಧೋಪಚಾರಕ್ಕಾಗಿ ಅವರ ಮನೆಗೆ ಎಡತಾಕಹತ್ತಿದರು. ಉಮಚಗಿಯವರು ಶಾಲೆಯ ಕೆಲಸ ಮಾಡಿಕೊಂಡು ಉಳಿದ ಸಮಯದಲ್ಲಿ ರೋಗಿಗಳಿಗೆ ಧರ್ಮಾರ್ಥವಾಗಿ ಔಷಧೋಪಚಾರ ಮಾಡುತ್ತಿದ್ದರು, ಲೋಲಂಬರಾಜರು ಹೇಳಿದ,

ಗುರೋರಧೀತಾಖಿಲವೈದ್ಯವಿದ್ಯಾ ಪೀಯೂಷಪಾಣಿಃ ಕುಶಲಃಕ್ರಿಯಾಸು|
ಗತಸ್ಪೃಹೋಧೈರ್ಯಧರಃ ಕೃಪಾಲುಃ ಶುದ್ಧೋಧಿಕಾರೀ ಭಿಷಗೀದೃಶಸ್ಯಾತ್||

ಎಂಬ ಮಾತಿಗೆ ಅವರು ನಿದರ್ಶನವಾಗಿದ್ದರು. ಎಷ್ಟೋ ರೋಗಿಗಳು ಅವರ ಉಪಚಾರದಿಂದ ನಿರೋಗಿಗಳಾದರು. ಊರಜನರೆಲ್ಲರೂ ಅವರ ಬಗ್ಗೆ ಪೂಜ್ಯಭಾವನೆಯನ್ನು ತಾಳಿದರು.

ಒಡಕಣ್ಣನಿಗೆ ಮಾಸ್ತರರ ಪ್ರತಿಷ್ಠೆಯು ಸಹನವಾಗಲಿಲ್ಲ. ಇವರನ್ನು ಹೇಗೆ ಸದೆಬಡಿಯಬೇಕೆಂದು ಅವನು ಯೋಚಿಸತೊಡಗಿದ್ದನು. ಹೀಗಿರಲು ಒಡಕಣ್ಣನು ದೊಡ್ಡಾಟದಲ್ಲಿ ಎದ್ದು ಓಡಿಹೋಗುವಂತೆ ಲಕ್ಷ್ಮಣನ ವೇಷವು ಆಡಿದ ಮಾತುಗಳನ್ನು ಈ ಮಾಸ್ತರರೇ ಬರೆದುಕೊಟ್ಟಿದ್ದರೆಂಬುದು ಅವನಿಗೆ ತಿಳಿಯಿತು ಆಗಂತೂ ಅವನು ಅವರ ಮೇಲೆ ಸಿಟ್ಟು ಬೆಂಕಿಯಾದನು.

ಆದರೆ ಮಾಡುವುದೇನು? ಹೊತ್ತುಸಾಧಿಸಿ ಮಾಸ್ತರನನ್ನು ಹತ್ತಿಕ್ಕಬೇಕೆಂದು ಹೊಂಚುಹಾಕಿಕೊಂಡು ಕುಳಿತನು.

ಅವನಿಗೆ ಅನುಕೂಲವಾದ ಸಮಯವೇ ಸಾಧಿಸಲಿಲ್ಲ. ಎಷ್ಟು ದಿವಸ ಹಾದಿನೋಡುವುದು? ಕಾಶೀಯಾತ್ರೆಯಿಂದ ಬಂದ ಮೇಲೆ ಒಂದು ದಿವಸ ಒಡಕಣ್ಣನು ಅವರನ್ನು ತನ್ನ ಮನೆಗೆ ಕರೆಯಿಸಿ ಬೆದರಿಸಿ ನೋಡಿದನು. "ನೀವು ಊರೊಳಗ ವೈದ್ಯಕಿ ಮಾಡತೀರ್ಯಂತ. ಊರಾಗೆಲ್ಲಾ ನಿಮ್ಮ ಬಗ್ಗೆ ಬೊಬ್ಬಾಟ ಎದ್ದದ. ನೀವು ಮಾಡತಕ್ಕ ಉದ್ಯೋಗ ಬಿಟ್ಟು ಹೀಂಗ ಉಪದ್ವ್ಯಾಪ ನಡಸಿದರ ಕೆಟ್ಟೀರಿ. ಈ ಊರೊಳಗ ದುರ್ಜನರು ಬಹಳ. ಊರು ಬಿಡೋ ಪ್ರಸಂಗ ಬಂದೀತು. ಎಚ್ಚರಿಕೀಲೆ ನಡೀರಿ."

ಉಮಚಗಿ ಮಾಸ್ತರರು ಅದಕ್ಕೆ ಖಂಡತುಂಡವಾಗಿ ಉತ್ತರಕೊಟ್ಟರು: "ನಾನೇನು ದುಡ್ಡು ಗಳಿಸಲಿಕ್ಕೆ ಈ ಉದ್ಯೋಗ ಮಾಡೋದಿಲ್ಲ ತಿಂಗಳಾ ನಾಕಾರು ರೂಪಾಯಿ ಔಷಧ ಧರ್ಮಾರ್ಥ ಕೊಡತೀನಿ; ಬ್ಯಾನಿಯಿಂದ ಬಳಲುವವರಿಗೆ ಸಮಾಧಾನ ಹೇಳಿ ಸಂತೈಸತೀನಿ. ನೀವು ಹ್ಯಾಂಗೂ ಸಾಲೀ ಪಂಚರಿದ್ದೀರಿ. ಸಾಲಿ ನಡದಹೊತ್ತಿನಾಗ ನಾನು ಸಾಲಿವಳಗ ಇಲ್ಲದೆಇದ್ದರ ನೀವು ನಿಮ್ಮ ಮನಸಿಗೆ ಬಂಧಾಂಗ ಮಾಡಬಹುದು ನಾನೂ ಹತ್ತೆಂಟು ಕೆರೀನೀರು ಕುಡದು ಬಂದಾವ. ನಿಮ್ಮ ಬೆದರಿಕೆಗೆ ಬೆದರಾವಲ್ಲ. ಎಂಥಾ ಕೆಟ್ಟ ಗ್ರಾಮ ಆದರೂ ನನಗೇನು ಮಾಡೀತು? ತಾ ಗರತಿ ಇದ್ದರ ಸೂಳೇರ ಕೇರ್ಯಾಗ ಸಹಿತ ಇರಬಹುದಂತ. ಸಂಕಟಾ ಯಾರಿಗೂ ಹೇಳಿಕೇಳಿ ಬರೋದಿಲ್ಲ. ಸಂಕಟದಾಗ ಸಹಾಯ ಮಾಡೋದು ಮನುಷ್ಯನ ಕರ್ತವ್ಯ. ನನ್ನ ಕರ್ತವ್ಯ ನಾ ಮಾಡತೀನಿ. ಅದರಾಗ ಏನಾದರೂ ವಿಪತ್ತು ಬಂದರ ಎದೀ ಕೊಟ್ಟು ನಿಲ್ಲತೀನಿ."

ಮಾಸ್ತರರ ಮಾತು ಕೇಳಿ ಒಡಕಣ್ಣನಿಗೆ ಗಾಯದ ಮೇಲೆ ಬರೆಕೊಟ್ಟಂತಾಯಿತು. ಆದರೂ ಅವನು ತನಗಾದ ಸಂತಾಪವನ್ನು ಹೊರಗೆಡಹದೆ, "ಮಾಸ್ತರ! ನೀವು ಸುಶಿಕ್ಷಿತರು, ಸಭ್ಯರು. ಬೆಳ್ಳಗಿದ್ದದ್ದೆಲ್ಲಾ ಹಾಲು ಅಂತ ತಿಳಿಯೋರು. ಹಳ್ಳೀ ಕಪಟನಾಟಕಾ ನಿಮಗ ತಿಳಿಯೋದಿಲ್ಲ ಉಂಡಮನೀ ಗಳಾ ಎಣಿಸೋ ಭಂಡರು ಹಳ್ಳ್ಯಾಗ ಇರತಾರ. ನೀವು ಕುಟುಂಬ ವತ್ಸಲರು, ಬಡವರು ಬರೋ ಸ್ವಲ್ಪ ವೇತನದೊಳಗ ಹತ್ತೆಂಟು

ರೂಪಾಯಿ ಹಾಳುಮಾಡತಿರೋದನ್ನ ನೋಡಿ, ಕಳಕಳಿಯಿಂದ ಹೀಂಗ ನಿಮಗ ಹೇಳಿದೆ. ನಿಮ್ಮ ವಿಷಯಕ್ಕ ನನಗೇನೂ ದ್ವೇಷ ಇಲ್ಲ. ಪರೋಪಕಾರ ಮಾಡಬಾರದಂತೂ ನಾ ಹೇಳೋದಿಲ್ಲ. ಪುಕ್ಕಟೇ ,ಔಷಧ ಯಾಕ ಕೊಡತೀರಿ? ಔಷಧದ ವೆಚ್ಚಾ ಆದರೂ ತಕ್ಕೊಂಡು ಕೊಡ್ರಿ. ನಿಮ್ಮ ಹಿತಕ್ಕ ನಾ ಹೀಂಗ ಹೇಳತೇನಿ ನೀವೂ ಬಲ್ಲವರು, ವಿಚಾರಿಸಿ ನೋಡ್ರಿ" ಎಂದು ಒಳ್ಳೆಯ ಹಿತಚಿಂತಕನಂತೆ ಮಾತನಾಡಿದನು.

ಆಗ ಮಾಸ್ತರರ, "ನೀವು ಹೇಳೋದೆಲ್ಲಾ ನಿಜ. ಆದರ ಏನು ಮಾಡಬೇಕು? ಸಂಕಟದಾಗ ಸಿಕ್ಕು ಗೋಳಾಡವರಿಗೆ ದುಡ್ಡು ಕೊಟ್ರ ಔಷಧ ಕೊಡತೀನಿ ಅಂತ ಹೇಳೋದು ನನ್ನಿಂದ ಆಗದಮಾತು. ಅದೊಂದು ನನ್ನ ಕೆಟ್ಟ ಸ್ವಭಾವ ಹೀಂಗs ಎಲ್ಲೀತನಕ ನಡೀತದೋ ನಡೀಲಿ" ಎಂದು ಹಾರಿಸಿಕೊಂಡು ನುಡಿದರು. ಅಷ್ಟರಲ್ಲಿ ದಾರಿಕಾರನೊಬ್ಬನು ತನ್ನ ಮಗನು ಉಸಿರಾಡಿಸದಂತೆ ಬಿದ್ದಿರುವನೆಂದು ಮಾಸ್ತರರ ಬಳಿಗೆ ಬಂದನು. ಮಾಸ ರರು ದೇಸಾಯರಿಗೆ ನಮಸ್ಕರಿಸಿ ಅಲ್ಲಿಂದ ಎದ್ದು ಹೋದರು.

ಉಮಚಗಿಯವರು ನಿರ್ಭಯತೆಯಿಂದ ನುಡಿದ ನಿಷ್ಠುರ ವಚನಗಳಿಂದ ಒಡಕಣ್ಣನಿಗೆ ಬಹಳ ವ್ಯಥೆಯಾಯಿತು. ಶಾಲಾಶಿಕ್ಷಕರೆಂದರೆ ಹಾವುಗಾರನ ಕೈಯೊಳಗೆ ಸಿಕ್ಕ ಚಂಡಾಳಗೊಂಬೆಯೆಂದು ಅವನು ತಿಳಿದಿದ್ದನು. ಇಂದಿನವರೆಗೆ ಬೊಮ್ಮಗೇರಿಯ ಶಾಲೆಗೆ ಬಂದ ಶಿಕ್ಷಕರನ್ನೆಲ್ಲ ಅವನು ತನ್ನ ಮನಬಂದಂತೆ ಕುಣಿಸಿಯೂ ಇದ್ದನು. ಶಿಕ್ಷಕರಾದರೂ ಸ್ವಾಭಿಮಾನವನ್ನು ತೊರೆದು ಅವನ ಒಲವಿನಂತೆ ನಡೆಯುತ್ತಿದ್ದರು. ಊರ ಪ್ರಮುಖನೆಂದ ಮೇಲೆ ಅವನಿಗೆ ಹೆಚ್ಚಿನ ಪ್ರತಿಷ್ಠೆಯನ್ನು ಕೊಡಬೇಡವೆ? ಕೆಲವರು ಶಿಕ್ಷಕರಂತೂ ಒಡಕಣ್ಣನ ಬಣವಲ್ಲಿಯೇ ಸೇರಿಬಿಟ್ಟಿದ್ದರು. ಎಂದ ಮೇಲೆ ಐವರಿ ಇಯತ್ತೆಗಳನ್ನು ಕೂಡ ದಾಟದ ಒಡಕಣ್ಣನು ನುರಿತ ಶಿಕ್ಷಕರಿಗಿಂತ ತಾನೆ ಮಿಗಿಲೆಂದು ತಿಳಿದುಕೊಂಡಿದ್ದರೆ ಆಶ್ಚರ್ಯವಲ್ಲ. ಎಷ್ಟೋ ಶಿಕ್ಷಕರೆದುರಿಗೆ ಅವನು, "ಮಾಸ್ತರರಿಗೆ ವ್ಯವಹಾರಜ್ಞಾನ ಎಷ್ಟೂ ಇರೋದಿಲ್ಲ ಅವರು ದ್ವಿಪಾದ ಪಶುಗಳು, ಎರಡು ಕಾಲಿನ ದನಾಕಾಯೋ ಅವರು, ಆಳ್ಮೆದಿಯಾಪರು" ಎಂದು ಜಂಗಿಸಿದ್ದನು. ಇವೇ ಮಾತುಗಳೆನ್ನು ಉಮಚಗಿ ಮಾಸ್ತರರೆದುರಿಗೆ ಆಡಿದ್ದರೆ ಅವನಿಗೆ ಸರಿಯಾದ ಪ್ರತ್ಯುತ್ತರಗಳು ದೊರೆಯುತ್ತಿ

ದ್ದವು. ಅಂತೆಯೆ ಅವರೆದುರಿಗೆ ಹೆಚ್ಚಿಗೆ ಮಾತಾಡುವುದಕ್ಕೆ ಅವನ ನಾಲಿಗೆ ಏಳಲಿಲ್ಲ. ಆದರೂ ಅವನ ಸಿಟ್ಟು ಒಳಗೊಳಗೆ ಕುದಿಯುತ್ತಿತ್ತು. ಈ ಮಾಸ್ತರನ ಬಿಂಕವೆಷ್ಟು! ಎದೆಯುಬ್ಬಿಸಿಕೊಂಡು, ಸೆಟೆದು ನಿಂತು, ನಿಷ್ಠುರ ವಾಗಿ ಮಾತಾಡಿ ಹೋದನಲ್ಲ! ಇವನನ್ನು ಮೆತ್ತಗೆ ಮಾಡದೆ ಹೋದರೆ ತಾನು ದೇಸಾಯಿಯಾಗಿದ್ದು ಏನು ಉಪಯೋಗ?

ಅವನು ಯೋಚನೆಯಲ್ಲಿ ಮುಳುಗಿರುವಾಗಲೆ ಶಾನುಭೋಗರ ಶಿವಣ್ಣ ನೆಂಬೊಬ್ಬ ಇಪ್ಪತ್ತು ವರ್ಷದ ಹುಡುಗನು ಅವನ ಬಳಿಗೆ ಬಂದನು. ಶಿವ ಣ್ಣನನ್ನು ನೋಡುತ್ತಲೆ ಒಡಕಣ್ಣನಿಗೆ ಹಂಚಿಕೆಯೊಂದು ಹೊಳೆಯಿತು. ಹುಡುಗನನ್ನು ಹತ್ತಿರ ಕರೆದು, "ಏನೋ ಶಿವೂ! ಆ ಉಮುಚಗೀ ಮಾಸ್ತರಾ ನಿನ್ನ ಸಾಲೀ ಬಿಟ್ಟು ಹೊರಗ ಹಾಕಿದನಂತಲ್ಲಾ? ಊರಾಗಿನ ಪ್ರತಿಷ್ಠಿತರ ಎಚ್ಚರಾನ ಅವಗ ಇದ್ಧಾಂಗ ಕಾಣಲಿಲ್ಲ. ನಿಮ್ಮ ಅಜ್ಜ ಅವನ ಪಾರುಪತ್ಯ ಯಾಕ ಮಾಡಲಿಲ್ಲ? ಆವಾಗ ನಾ ಊರಾಗ ಇದ್ದರ ಅವನ್ನ ತುಳದು ಬಿಟ್ಟಿತಿದ್ದೆ" ಎಂದು ಆವೇಶದಿಂದ ಮಾತಾಡಿದನು.

"ಹೌದು ದೇಸಾಯ್ರ! ಆ ಮಾಸ್ತರಾ ಭಾಳ ಎಟ್ಟಿ ಇದ್ದಾನ. ಸಾಲೀವಳಗಿದ್ದಾಗ ದೊಡ್ಡವರ ಮಕ್ಕಳ್ಯಾರು, ಸಣ್ಣವರ ಮಕ್ಕ ಳ್ಯಾರು ಅಂಬೋ ವಿಚಾರಾನ ಅವಗಿಲ್ಲ. ಎಲ್ಲಾರೂ ಒಂದು ಆತ ಒಂದು ಅಂತಾತಿಳದಾನ! "ಎಂದು ಶಿವಣ್ಣನು ತನ್ನದೊಂದು ಕತೆಯನ್ನೆ ಹೇಳಲಾರಂಭಿಸಿದನು, "ಒಂದು ದಿವಸ, ನೋಡ್ರೀ, ನಾ ಅವನ್ನ ಹೇಳದ ಕೇಳದs ಸಾಲಿಂದ ಮನೀಗೆ ಹೋಗಿದ್ದೆ. ಆಗ ಆ ಮಾಸ್ತರಾ ಹೇಳದ ಕೇಳದ ಹೇಗಲಿಕ್ಕೆ ಇದೇನು ದುರಗವ್ವನ ಗುಡಿಅಂತ ತಿಳದೀ ಏನು? ಇನ್ನ ಮುಂದ ಹೀಂಗ ಮಾಡಿದರ ನಿನ್ನ ಸಾಲೀ ಬಿಟ್ಟು ಹೊರಗ ಹಾಕತೀನಿ ಅಂತ ಬೆದರಿಸಿದ. ಆದಕ್ಕೇನು ನಾ ಬೆದರಲಿಲ್ಲ. 'ಇದೇನು ನಿನ್ನ ಸಾಲ್ಯಲ್ಲ, ನಿಮ್ಮಪ್ಪನ ಸಾಲ್ಯಲ್ಲ. ಅಧ್ಯಾಂಗ ಹೊರಗ ಹಾಕತಿದ್ಯೋ ನೋಡೋಣ' ಅಂತ ಎದೇ ಉಬ್ಬಿಸಿ ಉತ್ತರಾ ಕೊಟ್ಟೆ. ಆಗ ಆ ಮಾಸ್ತರಾ ನಾಕ ಹುಡ ಗರಿಗೆ ಹೇಳಿ ನನ್ನ ರಟ್ಟೀ ಹಿಡಿದು ಸಾಲೀ ಹೊರಗ ನಿಲ್ಲಿಸಿದಾ. ನಾ ಅತಗೋತ ಹೋಗಿ ನಮ್ಮ ಅಜ್ಜನ್ನ ಕರಕೊಂಡ ಬಂದೆ. ಮಾಸ್ತರನ

ಸೊಕ್ಕು ನೋಡ್ರೀ,—ನಮ್ಮ ಅಜ್ಜನ್ನ ಮ್ಯಾಲ ಸಹಿತ ಕೂಡಿಸಲಿಲ್ಲ! "ನಿಮ್ಮ ಮೊಮ್ಮಗಾ ಬಹಾಳ ಉದ್ಧಾಟ ಇದ್ದಾನ, ಅರೆತ್ತಾ ಕಲ್ತಾನ, ಸಾಲೀವಳಗ ಹ್ಯಾಂಗ ನಡಕೋಬೇಕು ಅಂಬೋದs ಇವಗ ಗೊತ್ತಿಲ್ಲ. ಮಾಸ್ತರು ಅಂದ್ರ ದನಾ ಕಾಯೋರು ಅಂತ ತಿಳದಾನ. ಬಹಾಳ ಉಡಾಳ ಇದ್ದಾನ. ಅಭ್ಯಾಸ ಮಾಡೋದಿಲ್ಲ. ಇವಗ ನೆಟ್ಟಗ ಬುದ್ಧಿಹೇಳಿ ಸಾಲೀ ವ್ಯವಸ್ಥಾಕ್ಕ ಸರಿಯಾಗಿ ನಡಕೊಳ್ಳೋ ಹಾಂಗಿದ್ರ ಸಾಲಿಗೆ ಕಳಸರಿ. ಇಲ್ಲದ ಇದ್ರ ನಿಮ್ಮ ಮನೀಗೆ ಕರಕೊಂಡು ಹೋಗ್ರಿ" ಅಂತ ಸೊಕ್ಕಿನ ಮಾತಾಡಿದ. ಅದಕ್ಕ ನಮ್ಮಜ್ಜ ಸಿಟ್ಟಿಗೆದ್ದು, "ನಾವು ಶಾನಭೋಗರು. ಸಾಲೀ ಪಂಚರಿದ್ದೇವಿ. ಸಾಲೀ ಬಿಟ್ಟು ಹೊರಗ ಹಾಕಿಲಿಕ್ಕೆ ನಿಮಗೇನು ಅಧಿಕಾರ ಅದ? ಅವಾ ಬಂದಾಗ ಬರಲಿ. ಕಲತಷ್ಟು ಕಲೀಲಿ. ಅವನ ಮ್ಯಾಲ ನೀವು ಕೈ ಮಾಡಬಾರದು. ನೀವು ಕಲಿಸೋದೂ ಅಷ್ಟರಾಗ ಅದ. ಸಾಲೀಕಾಯೋ ಕೆಲಸ ನಿಮ್ಮದು. ಎಂಥಾ ಹಡುಗರು ಇದ್ರೂ ನೀವು ಕಾಯಲಿಕ್ಕೇ ಬೇಕು. ಇಲ್ಲದೇ ಇದ್ರ ಧಕ್ಕೀತಿಂದೀರಿ" ಅಂತ ಗದ್ದರಸಿಬಿಟ್ಟ. ಅದಕ್ಕ ಆ ಮಾಸ್ತರ ಏನನಬೇಕು? 'ಇಂಥಾ ಕೆಟ್ಟ ಹುಡುಗರು ನಮ್ಮ ಸ್ಥಾಲೀವಳಗ ಬೇಕಾಗಿಲ್ಲ. ಇವನ ಹೆಸರು ತಗದ ಹಾಕತೇನಿ. ನಿಮ್ಮ ಕೈಯಾಗಿದ್ದದ್ದು ಮಾಡಹೋಗ್ರಿ' ಅಂತ ಹೇಳಿ ನನ್ನ ನಮ್ಮಜ್ಜನ್ನs ಕೂಡ್ಯೇ ಸಾಲಿಂದ ಹೊರಗ ಹಾಕಿಸಿ, ನನ್ನ ಹೆಸರು ತಗದುಬಿಟ್ಟ. ಮುಂದ ಸಾಹೇಬರು ಬಂದಾಗ ನಮ್ಮಜ್ಜ ಅವರ ಮುಂದ ಮಾಸ್ತರನ ಕಾರಭಾರ ಎಲ್ಲಾ ಹೇಳಿದ. ಆ ಮಾಸ್ತರಾ ಸಾಹೇಬರಿಗೂ ಹೆದರಲಿಲ್ಲ. ಅವರ ಮುಂದ ನಮ್ಮಜ್ಜಗ ಸಿಕ್ಕಹಾಂಗ ಅಂದುಬಿಟ್ಟ. ಸಾಹೇಬರು 'ಆತು, ವಿಚಾರ ಮಾಡತೀವಿ' ಅಂತ ನಮ್ಮಜ್ಜನ್ನ ಸಮಾಧಾನಮಾಡಿ ಹೋದ್ರು. ಮುಂದೇನು ವಿಚಾರಿಲ್ಲ, ಗಿಚಾರಿಲ್ಲ, ಆ ಮಾಸ್ತರನ ಉರುವಣಿಗಿ ಮೊದಲಿನ ಹಾಂಗs ನಡೆದದ. ಊರೆಲ್ಲಾ ಅವಾ ಹೇಳಿಧಾಂಗ ಕೇಳತದ. ನೀವೂ ಊರಾಗ ಇದ್ದಿಲ್ಲ. ಏನು ಮಾಡೋದು? ಅವಗ ವತನದಾರರ ಕೈ ಒಮ್ಮೆ ತೋರಿಸಬೇಕು."

ಅವನ ಕತೆಯನ್ನು ಕೇಳಿದ ಮೇಲೆ ಒಡಕಣ್ಣನು ಅವನಿಗೇನೋ ಗಪ್ತವಾಗಿ ಹೇಳಿದನು. ಶಿವಣ್ಣನು ಸಂತೋಷದಿಂದ ಮನೆಗೆ ಮರಳಿದನು.

ಶಿವಣ್ಣನೂ ಅವನ ಅಜ್ಜನೂ ಕೂಡಿ ಒಂದು ಅರ್ಜಿಯನ್ನು ಸಿದ್ಧಪಡಿಸಿದರು. ಅದರಲ್ಲಿ "ನಮ್ಮೂರ ಶಾಲೆಯ ಉಮಚಗಿ ಮಾಸ್ತರನು ಬಹಳ ಎಟ್ಟ ಇರುತ್ತಾನೆ; ವೈದ್ಯಕಿ ಮಾಡುತ್ತಾನೆ. ಊರಲ್ಲೆಲ್ಲಾ ತಿರುಗಾಡುತ್ತಾನೆ ಸಾಲೆಯನ್ನು ಚೆನ್ನಾಗಿ ಕಲಿಸುವದಿಲ್ಲ. ಎಷ್ಟೋ ಹುಡುಗರನ್ನು ಸಾಲೆಯಿಂದ ಹೊರಗೆ ಹಾಕುತ್ತಾನೆ. ಊರೊಳಗಿನ ಬುದ್ಧಿವಂತರಿಗೂ ವತನದಾರರಿಗೂ ಮರ್ಯಾದೆ ಮಾಡುವದಿಲ್ಲ. ಕಾರಣಾ, ಇಲ್ಲಿಂದ ಇವನನ್ನು ಕಿತ್ತಿಹಾಕಬೇಕು" ಎಂಬುದೆ ಮುಖ್ಯವಿಷಯವಾಗಿತ್ತು. ಶಿವಣ್ಣನ ಅರ್ಜಿಯನ್ನು ಮತ್ತೊಮ್ಮೆ ತನ್ನ ಅಜ್ಜನೆದುರಿಗೆ ಓದಿ, "ಇನ್ನ ಆ ಮಾಸ್ತರಾ ಗುಡಚಾಪೀ ಕಟ್ಟತಾನ. ಊರಾಗ ಭಾಳ ಉರೀತಿದ್ದಾ. ಅವನ ಹದಾ ನೆಟ್ಟಗ ಆಗತದ" ಎಂದು ಎದೆಯುಬ್ಬಿಸಿ ಮಾತಾಡಿ, ಅದಕ್ಕೆ ಅಜ್ಜನ ಸಹಿಯನ್ನು ಮಾಡಿಸಿಕೊಂಡನು. ಬಳಿಕ ಮತ್ತೆ ಇಬ್ಬರು ಉಡಾಳ ಹುಡುಗರ ಸಹಿಮಾಡಿಸಿ, ಅರ್ಜಿಯೊಂದಿಗೆ ಪೇಟೆಗೆ ಹೋದನು. ಸೆಟ್ಟರ ಬಸೆಟ್ಟೆಪ್ಪನವರು, ಒಡಕಪ್ಪ ದೇಸಾಯರು ಸಹಿಮಾಡಿದ ಮೇಲೆಯೇ ತಾವು ಮಾಡುವೆವೆಂದು ಹೇಳಿದರು. ಜವಳೀ ಬಸಪ್ಪನವರ ಅಂಗಡಿಯಲ್ಲಿ ಹತ್ತೆಂಟು ಜನರು ಕುಳಿತಿದ್ದನ್ನು ಕಂಡು ಶಿವಣ್ಣನು ಅಲ್ಲಿಗೆ ಹೋಗಿ ಅರ್ಜಿಯನ್ನು ಬಸಪ್ಪನವರ ಕೈಗಿತ್ತನು. ಬಸಪ್ಪನವರು ಅದನ್ನೋದಿಕೊಂಡು, ಅಲ್ಲಿ ಕುಳಿತವರಿಗೆ, "ಇಕಾ! ನಮ್ಮೂರ ಶಾನಭೋಗರು ಉಮಚಗೀ ಮಾಸ್ತರನ್ನ ಇಲ್ಲಿಂದ ತಗೀಬೇಕಂತ ಅರ್ಜಿ ಬರಕೊಂಡು ಬಂದಾರ. ನಿಮ್ಮೆಲ್ಲಾರ ಮನಸಿಗೆ ಬಂದರ ಇದಕ್ಕ ಸಹಿ ಇಕ್ಕರಿ" ಎಂದು ಅದನ್ನು ಅವರೆದುರಿಗೆ ಚೆಲ್ಲಿದರು.

ಅಲ್ಲಿ ಕುಳಿತ ದೊಡ್ಡಮನೆಯ ಸಿದ್ದಪ್ಪನೆಂಬವನು "ಪಾಡ ಕೆಲಸಾ ಮಾಡತಾರ! ಊರಾಗ ಸತ್ರೂ ಕೇಳೋರು ದಿಕ್ಕಿದ್ದಿಲ್ಲ. ಯಾರಿಗೂ ಒಂದು ಪೈ ಕೇಳದಾಂಗ ಮಾರಾಯ ಊರಿಗೇ ಉಪಕಾರ ಮಾಡತಾನ. ಸಾಲೀ ಹುಡುಗರ ವ್ಯಾಗೂ ಕಾಳಜೀತಗೊಂತಾನ. ಊರಿಗೆ ತಂದೀ ತಾಯೀ ಇದ್ದಾಂಗ ಅದಾನ, ಅಂತಾ ಮಾರಾಯನಮ್ಯಾಗ ಅರ್ಜೀಮಾಡಾಕ ಈ ಶಾನುಭೋಗರಿಗೇನು ಹೊಟ್ಟ್ಯಾಗ ಬೆಂಕಿಬಿದ್ದೈತಿ? ಊರಾಗ ತಮ್ಮ ಮಾಗು

ವ್ಯಾಗ ಆಗಬೇಕು ಅಂತ ಇಟ್ಟs ಕಾಣತೈತಿ. ತಾವು ಮುಂದಿಗೆ ಉಪಕಾರ ಮಾಡಾಕಿಲ್ಲ. ಮಾಡವರ್ನ ಕಂಡ್ರ ಶೇರಾಕಿಲ್ಲ. ಈ ಅರ್ಜಿಹಿಡಕೊಂಡು ಊರೆಲ್ಲಾ ತಿರುಗಿಬರಲಿ. ಇದಕ್ಕ ಯಾವ ಸಹಿ ಇಕ್ಕತಾನೋ ನೋಡತೀನಿ" ಎಂದು ಆ ಅರ್ಜಿಯನ್ನು ಬೀಸಾಡಿ ಒಗೆದನು. ಅಲ್ಲಿ ಕುಳಿತ ಉಳಿದವರೂ ಶಿವಣ್ಣನಿಗೆ ಹಚಾಹುಚಾ ಮಾಡಿಬಿಟ್ಟರು.

ಶಿವಣ್ಣನು ಅರ್ಜಿಯನ್ನು ಹಿಡಿದುಕೊಂಡು ಊರೆಲ್ಲಾ ತಿರುಗಿದನು. ಒಬ್ಬರಾದರೂ ಅದಕ್ಕೆ ರುಜುಹಾಕಲಿಲ್ಲ. ಎಷ್ಟೋ ಜನರು ಅವನಿಗೆ ಬಾಯಿಗೆ ಬಂದಂತೆಬಯ್ದು, ಅವನ ಮರ್ಯಾದೆಯನ್ನು ಕಳೆದರು. ಆಗ ಶಿವಣ್ಣನು, "ಯಾವ ಸೀಮಿಯಿಂದ ಬಂದಾನೋ ಏನೋ ನಮಗಿಂತ ಅವನs ನಿಮಗ ಹೆಚ್ಚಿನಾವ ಆಗ್ಯಾನ! ನನ್ನ ಶಾನಬೋಕಿ ಒಂದs ಬರಲಿ,- ಅವಂದೂ, ನಿಮ್ಮದೂ, ಎಲ್ಲಾರದೂ ಹದಾಮಾಡತೇನಿ" ಎಂದು ವಟಗುಟ್ಟುತ್ತಾ ಒಡಕಣ್ಣನ ಬಳಿಗೆ ಬಂದು, ಊರ ಜನರು ತನಗೆ ಮಾಡಿದ ಅನ್ಯಾಯ ಅಪಮಾನಗಳನ್ನೆಲ್ಲಾ ವಿಸ್ತರಿಸಿ ಹೇಳಿದನು. ಅದಕ್ಕೆ ಒಡಕಣ್ಣನು, "ಈ ಊರಾಗಿನ ಜನಾ ಎಲ್ಲಾ ಕಡಿದಷು, ತುರಿಸಿಗೊಂಬೋದs ಅದ. ಮುಂದಿನ ವಿಚಾರಾ ಮಾಡೋರು ಯಾರೂ ಇಲ್ಲ. ಮೂರು ಮುಕ್ಕಾಲು ಘಳಿಗಿದ್ದು ಓಡಿಹೋಗೋ ಮಾಸ್ತರಗs ಮರ್ಯಾದೀ ಮಾಡತಾರ! ತಳವಂದಿಗೇರೂ ವತನದಾರರೂ ಅವರಿಗೆ ಕಾಲಕಸಾ ಆಗ್ಯಾರ. ಅವರ ಉರುವಣಿಗಿ ಇನ್ನೂ ಎಷ್ಟು ದಿವಸ ನಡೀತದೋ ನೋಡೋಣ. ತಾಳಿದವ ಬಾಳ್ಯಾನಂತ. ಈಗ ಸ್ವಲ್ಪ ತಾಳಿಕೊಂಬೋಣ. ಹೊತ್ತು ಬಂದಾಗ ಎಲ್ಲಾರನೂ ಮತ್ತೆಗಮಾಡಿ ಬಿಡೋಣಂತ. ಈಗ ಅರ್ಜಿಮಾಡಿದ್ರ ನಾವs ನಾಕಮಂದಿ ನಿಷ್ಠೂರ ಆಗತೇವಿ ಅದಕ್ಕ ಇದನ್ನ ಹರದುಹಾಕ್ಬಿಡು. ಒಂದಿಲ್ಲಾ ಒಂದಿವಸ ಆ ಮಾಸ್ತರಾ ನಮ್ಮ ಕೈಯಾಗ ಸಿಕ್ಕs ಸಿಗತಾನ. ಆವಾಗ ಅವನ ಮಗ್ಗಲಾ ಮಡಚೋಣಂತ-" ಎಂದು ಶಿವಣ್ಣನನ್ನು ಸಮಾಧಾನಮಾಡಿ ಕಳುಹಿದನು.

## ೧೬. ಗುರುಮಂತ್ರ ತಿರುಗಿತು.

ಬೊಮ್ಮೀಗೇರಿಯಲ್ಲಿ ಪುಂಡರೆಂದು ಪ್ರಸಿದ್ಧರಾದ ಕಲ್ಲಕುಟ್ಟಿರ ಭರಮು, ಪಿಂಜಾರ ರಾಜೇಸಾಬ, ಚಲವಾದೀರ ಚಿನ್ನಪ್ಪ- ಈ ಮೂವರನ್ನೂ ಗುಪ್ತ

ವಾಗಿ ಕರೆಯಿಸಿಕೊಂಡು ಒಡಕಣ್ಣನು ಒಂದು ಸಂಗತಿಯನ್ನು ಅವರಿಗೆ ಸೂಚಿಸಿದನು.

ಕಲ್ಲಕುಟ್ಟರ ಭರಮನು ಅದಕ್ಕೆ ಒಪ್ಪಲಿಲ್ಲ: "ಅಪಸೋರ! ನಾವು ಎಟ್ಟೆ ಇರೋದೇನು ಸುಳ್ಳಲ್ಲ. ಓಟೂ ಈಟೂ ಕೆಟ್ಟಕೆಲ್ಸಾಮಾಡಿ ಸಿಕ್ಸಾನೂ ಅನುಬೋಗಸಿ ಬಂದೀವಿ. ನಾವೇನು ಸಂಬಾವಿತರು ಅಂತ ಹೇಳಾದಿಲ್ಲ. ಆದ್ರ ಜೀವಾ ಉಳಿಸಿದವರ ವ್ಯಾಗ ತಿರಗಿ ಬೀಳೋದು ಮಾತ್ರ ನಮ್ಮಿಂದ ಎಂದಿಗೂ ಆಗಾಕಿಲ್ರೀ. ಅಂತವರ ದಶಿಂದ ಜೀವಾಕೊಡಾಕ ಸುದ್ಧಾ ಹಿಂದುಮುಂದ ನೋಡಾವಲ್ರಿ ನಾ. ಎಪಾ! ನನ್ನ ಹಿರೇಮಗಾ ಕೆಟ್ಟಜ್ವರಾ ಹುಟ್ಟಿ ಸಾಯಕಹತ್ತಿದ್ದಾ. ಅಂತಾಯಾಳೇದಾಗ ಆ ಮಾರಾಯ ನನ್ನ ಮನೀಮಟಾ ಬಂದು ಬಿಲ್ಲೀ. ಬೇಡದಾಂಗ ಅಗಸುದ್ದೇಕೊಟ್ಟು ಮಗನ್ನ ಬದುಕಿಸಿದಾ. ಊರಿಗೇ ತಂದೀ ತಾಯೀ ಇದ್ದಾಂಗ ಅದಾನ. ನಿಮ್ಮ ವತನಾ ಓಟೂ ಬರಕೊಟ್ರೂ ಅವನ ವ್ಯಾಗ ನಾವು ತಿರುಗಿ ಬೀಳಾಕಿಲ್ಲ ನೋಡ್ರಿ. ಏಟು ಕೆಟ್ಟವರಾದ್ರೂ ಉಂಡಮನೀ ಗಳಾಎಣಿಸೋರಲ್ಲ ಪಾಪ! ಆ ಬಡಮಾಸ್ತರ ಮನ್ಯಾಗ ಏನೈತಿ? ಬಂದ ಪಗಾರಾನೆಲ್ಲಾ ಬಡಬಗ್ಗರ ಜೀವಾ ಉಳಸಾಕ ಕಳೀತಾನ. ಸಿಕ್ಕರ ಎಳ್ಡು ಒಡಕ ಬಾಂಡೇವು ಸಿಕ್ಯಾವು. ಅಂತವರಮನೀ ಒಡಿಯೂದರಕಿಂತ ನಿಮ್ಮಂತಾ ಗಟ್ಟುಳ್ಳೋರ ಮನೀ ಒಡದರ ವರ್ಸಾನು ತಿಂಗಳ ಕುಂತಗೊಂಡು ತಿಂದಾರ ತಿಂತೇವ್ರಿ. ನಿಮ್ಮಂತಾ ದೊಡ್ಡಮನಸೇರ ಬಾಯಿಂದಾ ಇಂತಾ ಮಾತು ಬರಬಾದ್ರೀ, ಎಪ!" ಎಂದು ಒಡಕಣ್ಣನ ಮೈಮೇಲೆ ಮುಳ್ಳೇಳುವಂತೆ ಮಾತಾಡಿಬಿಟ್ಟನು.

ಪಿಂಜಾರ ರಾಜೇಸಾಹೇಬನು, "ಹೌದೋ ಎಪ! ಈಗ ನಾಕ ತಿಂಗಳ ಹಿಂದ, ಹಿಂದಕಡೆ ಮುಂದಕಡೆ ಆಗಿ ನಾನೂ ಶಟದು ಹೋಗಾಕಹತ್ತಿದ್ದೆ. ಅಂತ ಯಾಳ್ಯೇದಾಗ ಆ ಮಾಸ್ತರಾ ನನ್ನ ಉಳಿಸ್ಯಾನ. ಈಗ ಈ ಜೀವಾ ನಂದಲ್ಲಾ, ಅವಂದು. ಅವರ ವ್ಯಾಗ ತಿರಗಿ ಬೀಳತೇನೇ? ನಮ್ಮ ತಂದ್ಯೋ ಯಪಾ! ಅವನ ವ್ಯಾಗ ಯಾವಾ ಕೈಮಾಡ್ತಾನೋ ಅವನ್ನ ಗತಿಗಾಣಿಸಿ ಬಿಡತೇನಿ" ಎಂದು ಆವೇಶವೇರಿದನು.

ಚಲವಾದಿಗರ ಚಿನ್ನನು, "ಏನ ಹೇಳಲ್ಯೋಯಪಾ! ಆ ಮಾರಾಯ ಊರಿಗೆ ದರಮುರಾಯ. ನಾನು ಮೂರು ಮಕ್ಕಳ್ನ ಮಣ್ಣಾಗಿಟ್ಟಿದ್ದೆ.

ನಾಕನೇ ಹುಡಗ್ಗೂ ಶಟಿಬ್ಯಾನಿ ಬಂದು ಟುಕೂಮಕೂ ಅಂತಿತ್ತು. ಮಾಸ್ತರನ ಕೈಕಾಲ ಕಟಿಗೊಂಡೆ. ಆರತಾಸ ರಾತರ್ಯಾಗ ಮನೀಬಿಟ್ಟುಬಂದು, ಅಗಸುದ್ದೀಹಾಕಿ, ಬೆಳತಂಕಾ ಮನೀಮುಂದ ಕುಂತು, ಮಗನ ಜೀವಾ ಬದಕಿಸಿಹೋದಾ. ಅವರ ಹೊಟ್ಟೀಲೆ ನನ್ನಮಗಾ ಹುಟ್ಟಿದಾಂಗ ಆಗೇತಿ. ದುಡ್ಡುದುಗಾಣಿ ಯಾರಾರಕೊಟ್ಟಾರು. ಜೀವಾ ಯಾ ಮಗಾ ಕೊಡತಾನ? ತಾವು ಬಡಬಗ್ಗರನ್ನ ನೋಡಾಕಿಲ್ಲ. ನೋಡವರ್ನ ಕಂಡ್ರ ಸೇರಾಕಿಲ್ಲಾ. ದೊಡ್ಡಮನಸೇರು ವ್ಯಾಗ!" ಎಂದು ಹಂಗಿಸಿ ನುಡಿದನು.

ಒಡಕಣ್ಣನ ಎದೆಯೊಡೆದು ನೀರಾಯಿತು. ಅವನು, "ಹೌದಲೇ! ನೀವು ಆಡೋಮಾತು ಬರಾಬ್ಬರಿ. ಊರ ಉಪಕಾರ ಅರೀದಂತ, ಹೆಣಾ ಸಿಂಗಾರ ಅರೀದಂತ–ಗಾದೀಮಾತು. ಅದಕ್ಕ ನಿಮ್ಮ ಮನಸ್ಸು ಪರೀಕ್ಷಾ ಮಾಡಬೇಕೂ ಅಂತ ಹೀಂಗ ಮಾತಾಡಿದೆ. ನಾವೂ ಮಾಸ್ತರೂ ಒಂದು ಜಾತೀಯವರು. ನಾವೆಲ್ಲರೂ ಒಂದು" ಎಂದು ಹುಚ್ಚ ಮೈಮೇಲೆ ಹಾಕಿಕೊಂಡು ನುಡಿದು ಅವರನ್ನು ಕಳಿಸಿದನು.

ತನ್ನ ತಂತ್ರವುನಿಷ್ಫಲವಾದದ್ದನ್ನು ಕಂಡು ಒಡಕಣ್ಣನಿಗೆ ಚಿಂತೆಯಾಯಿತು. ಬೆಳತನಕ ಅವನಿಗೆ ನಿದ್ದೆಹತ್ತಲಿಲ್ಲ. ತಾಸು ಹೊತ್ತು ಏರುವ ಸಮಯಕ್ಕೆ ಸಾವಕ್ಕನ ಮುಖಾಂತರವಾಗಿ ತಳವಾರ ಭರಮಕ್ಕನನ್ನು ತನ್ನ ಹಿತ್ತಲ ಬಾಗಿಲಿಗೆ ಬರಮಾಡಿಕೊಂಡನು. ಅವಳಿಗೆ ಒಂದು ಹೊಸಸೀರೆಯನ್ನು ಉಡಿಸುವ ಭರವಸೆಯಿತ್ತು ಒಡಕಣ್ಣನು ತನ್ನ ಮನೋಗತವನ್ನು ತಿಳಿಸಿದನು.

ಅದಕ್ಕೆ ಭರಮಕ್ಕನು, "ಎಪಾ, ನಾನು ಕಾಣಾಪಟ್ಟೆ ಸೂಳಿ ಇದ್ದದ್ದೀನು ಸುಳ್ಳಲ್ಲ. ಮಂದೀ ಮಾನಾ ಮರೇದೀ ನೋಡಾಕೀನೂ ನಾ ಅಲ್ಲ ಆದರ ಅದು ಕೆಂಡೋಯಪಾ, ಕಂಡವರ್ನ ಸುಡತೈತಿ. ಆ ಮಾರಾಯಾ ತಲೀ ತಗ್ಗಿಸಿಕೊಂಡು ಹೊಂಟಾವಾ ಎಡಕ್ಕ ನೋಡಾಕಿಲ್ಲ. ಬಲಕ್ಕ ನೋಡಾಕಿಲ್ಲ. ಹೆಂಗಸೂರ ಸಂಗತಿ ಮಾತಾಡಾಕಿಲ್ಲ. ಈಗ ತಿಂಗಳ ಹಿಂದ ನಮ್ಮ ಅಣ್ಣನಮಗ್ಗ ಬ್ಯಾನಿಬಂದಿತ್ತು. ನಾವು ನಾಕಾರು ಮಂದಿ ಸೂಳೇರು ಕುಂತಿದ್ದಿವಿ. ಮಾಸ್ತರಾ ನೋಡಾಕಬಂದ ಹುಡಗನ್ನ ನಮ್ಮನಮ್ಮೊಳಗ

ನಾವು ಕಂಡಾಪಟೇ ಹುಡಗಾಟಿಕೀ ಮಾಡಿದಿವಿ. ಅವಾ ಏನು ನಮ್ಮ ಮಾತು ಕಿವ್ಯಾಗ ಹಾಕ್ಕೊಳ್ಳಿಲ್ಲ, ಕಣ್ಣೆತ್ತಿ ನೋಡ್ಲಿಲ್ಲ. ತಾಬಂದ ಕೆಲಸಾ ಮಾಡಿಕೊಂಡು ತಟ್ಟನ ಎದ್ದು ಹೋಗಿಬಿಟ್ನ. ಅವಸದಾ ತರಾಕ ನಾ ಮನೀಗೆ ಹೋದ್ರ "ನಿಮ್ಮಣ್ಣನ್ನ ಕಳಸು" ಅಂತ ಹೇಳಿಬಿಟ್ಟ, ಔಸದಾಕೊಟ್ಟ ನನ್ನ ಅಳ್ಯಾನ್ನ ಜೀವಾ ಉಳಿಸಿದಾ. ನಾ ಎಂಥಾ ಭಂಡಿ ಆದ್ರೂ, ಅಂತವರ ಮ್ಯಾಗ ಕೈಮಾಡೋದು ನನ್ನಿಂದಾಗಾಕಿಲ್ಲ. ಮಾಡಿದ್ರ ನಾ ಉಳ್ಯಾಕೂಲ್ಲ ಇಅ. ಬೆಂಕಿ ಸಂಗಾಟ ಸರಸ ಏನು? ಆ ಮಾಗಾಯನ ಮರೇದೀ ಕಳದರ ನಿಮಗಾರ ಬರೋ ಬಾಗ್ಯೇವೇನೈತಿ? ನಿಮ್ಮಂಥವರು ಇದಕ್ಕೆ ಕೈಹಾಕಬಾರದು. ಇಂತಾ ಕೆಲಸಾ ಯಾವ ಬೆಂಡಲೀನೂ ಮಾಡಾಕಿಲ್ಲ. ನೋಡ್ರಿ." ಎಂದು ನಿರ್ಭಯವಾಗಿ ನುಡಿದು, ಮನೆಗೆ ಹೊರಟುಹೋದಳು.

ಅವಳ ಮಾತುಗಳನ್ನು ಕೇಳಿ, ಒಡಕಣ್ಣನಿಗೆ ಮೆಣಸು ಸಾಸವೆಗಳನ್ನು ಅರೆದು ಕುಡಿದಂತಾಯಿತು. ತಾನೆಷ್ಟು ಪ್ರಯತ್ನಮಾಡಿದರೂ, ಮಾಸ್ತರನನ್ನು ಬಗ್ಗುಬಡಿಯುವವರು ಈ ಊರಲ್ಲಿ ಒಬ್ಬರಾದರೂ ದೊರೆಯಲಿಲ್ಲವಲ್ಲ! ಏನುಮಾಡಬೇಕು ? ಎಂದು ಆಲೋಚಿಸುತ್ತ ಕುಳಿತಿರುವಷ್ಟರಲ್ಲಿ ನಾಲ್ಕಾರು ಫಿರಸ್ತೀ ಜನರು ಅವನ ಮನೆಗೆ ಭಿಕ್ಷೆಗೆ ಬಂದರು. ಅವರನ್ನು ನೋಡಿ ಒಡಕಣ್ಣನಿಗೆ ಮತ್ತೊಂದು ಹಂಚಿಕೆಯ ಹೊಳೆಯಿತು. ಅವರಿಗೆ ಹತ್ತುರೂಪಾಯಿಗಳನ್ನು ಆಗಲೆ ಕೊಟ್ಟು, ಕೆಲಸಮಾಡಿಬಂದ ಮೇಲೆ ಮತ್ತೆ ಹತ್ತು ರೂಪಾಯಿಕೊಡುವೆನೆಂದು ಅವರ ಮುಖ್ಯಸ್ಥನಿಗೆ ಹೇಳಿದನು. ಕೆಲಸವೇನು ? ತಾನು ಹೇಳಿದ ಮನೆಗೆ ಮುತ್ತಿಗೆಹಾಕುವುದು.

೨೦. ಒಡಕಣ್ಣನ ಆಜ್ಞಾನುಸಾರವಾಗಿ ಹುಡುಗನೊಬ್ಬನು ಈ ಫಿರಸ್ತಿ ಜನರಿಗೆ ಉಪಾಯಗಿ ಮಾಸ್ತರರ ಮನೆಯನ್ನು ದೂರದಿಂದಲೆ ತೋರಿಸಿ ತನ್ನ ಪಾಡಿಗೆ ತಾನು ಹೊರಟು ಹೋದನು. ಮಾಸ್ತರರು ಅದೆ ಶಾಲೆಯಿಂದ ಬಂದು ತಮ್ಮ ಮನೆಯ ಕಟ್ಟೆಯ ಮೇಲೆ ಕುಳಿತಿದ್ದರು. ಈ ಜನರು ತಮ್ಮ ಮನೆಗೆ ಬಂದದ್ದನ್ನು ನೋಡಿ ಅವರು, "ಯಾಕ ? ಬಹಳ ಗಡಿಬಿಡೀಲೆ ಬಂದಿರಲ್ಲ ? ನಿಮ್ಮವಳಿಗೆ ಈಗ ಹ್ಯಾಂಗ ಅದ ?" ಎಂದು ಕೇಳಿದರು.

ಅದಕ್ಕೆ ಫಿರಸ್ತಿಯವರ ಮುಖ್ಯಸ್ಥರು, "ಸಬ್ ಕುಛ್ ಠೀಕ್ ಐತಿ. ಅದು ಎದ್ದು ಕುಂತೈತಿ ನಿಂದು ದವಾ ಬಿಲ್ಕುಲ್ ಬೇಷ್. ನೀನು ನಮ್ಮದು

ಹೇಣ್ರೀದು ಜಾನ್ ಬಚ್ಚಾಯಾ. ನೀನು ಆಕಿದೂ ಬಾಬಾ. ಈ ಊರ್ ಒಳಗೆ ನಿಂದು ದುಶಮನ್ ಯಾರ್ಯಾರ್ ಐತಿ ಹೇಳು. ಅವರದು ತಮಾಷೆ ಸಾಫ ಕರ್‌ಕೇ ನಾವು ಹೋಗತಾವ್ " ಎಂದು ವೀರಾವೇಶದಿಂದ ನುಡಿದನು.

ಅದಕ್ಕೆ ಮಾಸ್ತರರು, " ಈ ಊರಾಗ ನನಗ ಯಾರೂ ದ್ವೇಷಿ ಇಲ್ಲ. ನೀವು ಯಾರಿಗೂ ಕೇಡು ಮಾಡಬ್ಯಾಡ್ರೀ " ಎಂದು ಹೇಳಿದರು.

ಫಿರಸ್ತಿಯುವನು, " ಹಕೀಂಸಾಬ್ ! ನೀನು ಹಮೀನ್. ನಿಂಗೇ ತಿಳ್ಯಾ ಕಿಲ್ಲ. ಹಮ್‌ಕು ತಿಳಿದೈತೆ. ಬಾಬಾಂದು ಮೆಹರ್ಬಾನೀ ಬಹೋತ್ ಆಗೇತಿ ಅದು ತೀರಸಿ, ನಿಮ್ದು ದುಶಮನಕೋ, ಒಂದು ಕೈ ಬತಾದೂಂ. ಸಲ್ಲಾಂ." ಎಂದು ಹೇಳಿ ತನ್ನ ಸಂಗಡಿಗರೊಡನೆ ದೇಸಾಯರ ಮನೆಗೆ ಬಂದನು

ಒಡಕಪ್ಪದೇಸಾಯಿಯು ಮಾಸ್ತರನಿಗಾದ ಬವಣೆಯನ್ನು ಕೇಳಬೇಕೆಂಬ ಕುತೂಹಲದಿಂದ ಪಡಸಾಲೆಯಲ್ಲಿ ಲೋಡಿಗೆ ಅತು ಕುಳಿತಿದ್ದನು. ಫಿರಸ್ತಿಯುವರು ಬಾಗಿಲಿಗೆ ಬಂದೊಡನೆ ಅವನು ಚಟ್ಟನೆ ಹೊರಗೆ ಬಂದನು. ಫಿರಸ್ತಿಯುವರ ಪ್ರಮುಖನು, " ಬದಮಾಷ್ ! ನಮ್ದು ಬಾಬಾಗೆ ಕೋಡೀಲಾಕ ಕಳಿಸಿದ್ದೀ, ಹರಾಂ ಖೋರ್ ! " ಎಂದವನೆ ಒಡಕಣ್ಣನ ಕೆನ್ನೆಯ ಮೇಲೆ ಬಲವಾಗಿ ಎರಡೇಟು ಬಿಗಿದನು ಕೂಡಲೆ ಒಬ್ಬಳು ಒಡಕಣ್ಣನ ಕಿವಿಯಲ್ಲಿದ್ದ ಬಾವಲಿಯನ್ನು ಹರಿದುಕೊಂಡಳು. ಮತ್ತೊಬ್ಬಳು ಅವನ ಬೆನ್ನಮೇಲೆ ಗುದ್ದಹತ್ತಿದಳು. ಒಡಕಣ್ಣನು ವಿಕಾರವಾಗಿ ಚೀರಿ ಕೈಗೂ ಬಾಯಿಗೂ ಆರಂಭಿಸಿದನು. ಓಣಿಯೊಳಗಿನ ಜನರು ಬಂದು ಅವರ ಕೈಯಿಂದ ಅವನನ್ನು ಬಿಡಿಸಿಕೊಂಡರು. ಅವನು ಮೈನುಗ್ಗುಮಾಡಿಕೊಂಡು ಮನೆಯೊಳಗೆ ಸೇರಿದನು. ತನಗಾದ ಬವಣೆಯನ್ನು ಅವನು ಯಾರ ಮುಂದೆಯೂ ಹೇಳುವಂತಿದ್ದಿಲ್ಲ. ಗುದ್ದಿದವನೇ ಬಲ್ಲ, ಗುದ್ದಿಸಿಕೊಂಡವನೇ ಬಲ್ಲ ಎಂಬಂತಾಗಿತ್ತು ಅವನಸ್ಥಿತಿ. ಉಮಚಗಿ ಮಾಸ್ತರರ ಯೋಚನೆಯಿಂದ ಅವನಿಗೆ ಚಡಪಡಿಕೆಯಾಯಿತು. ಹೇಗೆ ಮಾಡಬೇಕು ? ಈ ಮಾಸ್ತರನಂತೂ ಈ ಊರಲ್ಲಿ ಬೇರೂರಿ ಕುಳಿತು ಬಿಟ್ಟದ್ದಾನೆ. ಕಳ್ಳರು, ಸುಳ್ಳರು, ಫಟಿಂಗರು— ಫಿರಸ್ಥೀ ಜನರು ಸಹ ಇವನು ಹಾಕಿದ ಉಗುಳು ದಾಟುವದಿಲ್ಲ. ಇನ್ನು ಮುಂದೆ ಇವನು ಇದೇ ಊರಲ್ಲಿ ಉಳಿದರೆ

ತನ್ನಂತಹ ಸ್ಥಿತಿವಂತರೂ ವತನದಾರರೂ ಇಲ್ಲಿ ಬಾಳುವೆ ಮಾಡುವುದೇ ಅಸಾಧ್ಯವಾಗುವುದು. ನೂರಾರು ರೂಪಾಯಿಗಳ ವೆಚ್ಚವಾದರೂ ಚಿಂತೆಯಿಲ್ಲ, ಇವನನ್ನು ಈ ಊರಿಂದ ಹೊತ್ತು ಒಗೆಯಲಿಕ್ಕೇ ಬೇಕು. ಇದಕ್ಕೆ ಏನು ಯುಕ್ತಿ ?

ಹೀಗೆ ಚಿಂತಿಸುತ್ತಾ ಇರಲು ಅವನಿಗೊಂದು ಹಂಚಿಕೆ ಹೊಳೆಯಿತು. ಕೂಡಲೆ ಅವನು ವೀರಾಪುರದಲ್ಲಿದ್ದ ಬಸನಗೌಡ ಮಾಸ್ತರರಿಗೆ ಓಲೆ ಬರೆದು ಆಳಿನೊಡನೆ ಕೊಟ್ಟು ಕಳಿಸಿದನು. ಬಸನಗೌಡರು ಹತ್ತುವರ್ಷಗಳ ಹಿಂದೆ ಬೊಮ್ಮೇಗೇರಿಯ ಅಸಿಸ್ಟಂಟ ಮಾಸ್ತರರಾಗಿದ್ದರು. ಆಗ ಅವರು ಒಡಕಣ್ಣನ ಪಂಗಡದಲ್ಲಿಯೆ ಸೇರಿದ್ದರೆಂದು ಬೇರೆ ಹೇಳಬೇಕಾಗಿಲ್ಲ. ಬೊಮ್ಮೇಗೇರಿಗೆ ಮೂರು ಮೈಲಿನಲ್ಲಿರುವ ಗಂಗೊಳ್ಳಿಯೆ ಅವರ ತವರೂರು. ಅವರು ತಮ್ಮ ಊರಲ್ಲಿಯೆ ಮನೆಮಾಡಿಕೊಂಡಿದ್ದು, ಬೊಮ್ಮೇಗೇರಿಗೆ ಎಡತಾಕುತ್ತಾ ಸಾಲೆಯ ಕೆಲಸವನ್ನು ಸಾಗಿಸಿದ್ದರು. ತಮ್ಮೂರಲ್ಲಿ ಒಕ್ಕಲತನದ ಮೇಲ್ವಿಚಾರಣೆಯನ್ನು ಬಿಟ್ಟು ಶಾಲೆಯ ಕೆಲಸಕ್ಕೆ ನಿಂತರೆ ಹೇಗೆ ! ಅವರು ಒಡಕಣ್ಣನ ಪಂಗಡದವರಾದ್ದರಿಂದ ಹೆಡ್‌ಮಾಸ್ತರರು ಬಸನಗೌಡರ ಮೇಲೆ ಲೆಕ್ಕಣಿಕೆಯನ್ನು ಹಚ್ಚುವದಕ್ಕೂ ಹೆದರುತ್ತಿದ್ದರು. ಹಾಗೆಯೆ ನಡೆದಿದ್ದರೆ ಅದರು ಇಲ್ಲಿಯೆ ಸುಖವಾಗಿ ಇರಬಹುದಾಗಿತ್ತು. ಆದರೆ ಊರ ಜನರ ಬೊಬ್ಬಾಟಮಾಡಿ, ಮೇಲಧಿಕಾರಿಗಳ ಕಡೆಗೆ ಅರ್ಜಿಮಾಡಿ, ಬಸನಗೌಡರನ್ನು ಬೊಮ್ಮೇಗೇರಿಯಿಂದ ವರ್ಗಾಯಿಸಿ ಬಿಟ್ಟರು. ಈಗ ಅವರು ವೀರಾಪುರದಲ್ಲಿ ಶಾಲೆಯಲ್ಲಿ ದುಡಿಯುತ್ತಿದ್ದರು. ವೀರಾಪುರವು ಬೊಮ್ಮೇಗೇರಿಯಿಂದ ಹತ್ತು ಹನ್ನೆರಡು ಮೈಲು ದೂರವಿದ್ದುದರಿಂದ ಅವರ ಒಕ್ಕಲತನದ ಉತ್ಪನ್ನವು ಬಹಳ ಕಡಿಮೆಯಾಗಿತ್ತು. ಇದಕ್ಕಾಗಿ ಅವರು ಬಹಳ ಕಸವಿಸಿಪಡುತ್ತಿರುವುದನ್ನು ಅರಿತು, ಒಡಕಣ್ಣನು ಮತ್ತೆ ಅವರನ್ನು ಬೊಮ್ಮೇಗೇರಿಗೆ ತರಬೇಕೆಂದು ಯೋಚಿಸಿದನು.

ಓಲೆಯು ಮುಟ್ಟಿದೊಡನೆ ಬಸನಗೌಡರು ಬೊಮ್ಮೇಗೇರಿಗೆ ಬಂದರು. ಒಡಕಣ್ಣನು ತನ್ನ ವಿಚಾರವನ್ನೆಲ್ಲ ಅವರಿಗೆ ತಿಳಿಸಿ, ತನ್ನ ಕೈಯಿಂದಾದಷ್ಟು ನೆರವಾಗುವನೆಂದು ಹೇಳಿದನು. ಭೀಮಣ್ಣನಾಯಕರಿಂದ, ಉಮಾಜಿಗ

ಮಾಸ್ತರನ್ನು ಬೊಮ್ಮೇಗೇರಿಯಿಂದ ವರ್ಗಮಾಡಬೇಕೆಂಬ ಬಗ್ಗೆ, ಇಲ್ಲದ ಆರೋಪಗಳನ್ನು ಅವರ ಮೇಲೆ ಹೊರಿಸಿ, ಒಂದು ಮೂಕ ಅರ್ಜಿಯನ್ನು ಬರೆಯಿಸಿ, ಅದನ್ನು ಶಾಲೆಯ ಮೇಲಾಧಿಕಾರಿಗಳಿಗೆ ಕಳಿಸಿ ಬಿಟ್ಟರು. ಬಸನಗೌಡರು ದೇಸಾಯರ ಮಾತಿಗೆ ಒಪ್ಪಿ, ತಮ್ಮ ಶಾಲೆಯ ಮೇಲಧಿಕಾರಿಗಳ ಬಳಿಗೆ ಹೋಗಿ ತಮ್ಮ ಸಂಕಟಗಳನ್ನೆಲ್ಲ ಹೇಳಿಕೊಂಡರು, ಕಾರಕೂನರಿಗೆ ಇಪ್ಪತ್ತೈದು ರೂಪಾಯಿಗಳನ್ನೂ ಕೊಟ್ಟು ಬಂದರು.

ಅವರಿಗೆ ಆತ್ಮವಿಶ್ವಾಸವು ಹೆಚ್ಚಿತು. ಅವರು ಬೊಮ್ಮೇಗೇರಿಯಲ್ಲಿರುವ ತಮ್ಮ ಮಿತ್ರರೆದುರಿಗೆ ತಮಗೆ ತಿಂಗಳೊಪ್ಪತಿನಲ್ಲಿ ಇಲ್ಲಿಗೆ ವರ್ಗವಾಗುವುದೆಂಬುದನ್ನೂ ತಿಳಿಸಿಬಿಟ್ಟರು. ಒಂದೆರಡು ದಿನಗಳಲ್ಲಿ ಈ ವಾರ್ತೆಯು ಊರ ತುಂಬ ಹಬ್ಬಿತು. ಉಮಚಗಿ ಮಾಸ್ತರರಿಗೆ ವರ್ಗವಾಗುವುದೆಂಬುದನ್ನು ಕೇಳಿ ಜನರಿಗೆ ವ್ಯಥೆಯಾಯಿತು. ಸಾವಕಾರ ಶ್ರೀನಿವಾಸರಾಯರೂ, ಹಿರೇಮಠದ ಗುರುಲಿಂಗಯ್ಯನವರೂ, ನಿಂಗನಗೌಡರೂ ಒಟ್ಟುಗೂಡಿ ಆಲೋಚಿಸಿ ಉಮಚಗಿ ಮಾಸ್ತರರ ಬಳಿಗೆ ಬಂದು, "ನಿಮಗೆ ವರ್ಗ ಆಗೋ ಸುದ್ದಿ ಕೇಳಿದಿವಿ. ನೀವೇನಾದರೂ ರಿಪೋರ್ಟು ಮಾಡಿಕೊಂಡೀರೇನು ? ನಿಮ್ಮ ಊರಿಗೆ ವರ್ಗ ಆಗಬೇಕೂ ಅಂತ ಬರೆಯಸೀರೋ ಏನು ? " ಎಂದು ಕೇಳಿದರು. ಅದಕ್ಕೆ ಮಾಸ್ತರರು, "ನಾನೇನು ವರ್ಗದ ಬಗ್ಗೆ ರಿಪೋರ್ಟು ಮಾಡಿಲ್ಲ. ನಮ್ಮೂರಿಗೆ ವರ್ಗ ಆಗಬೇಕಂಬೋ ಬಯಕೀನೂ ನನಗಿಲ್ಲ. ನಾ ಎಲ್ಲಿ ಇರತೀನೋ ಅದೇ ನನ್ನ ಊರು; ಆ ಊರಜನರು ಮಾತ್ರ ನಮ್ಮವರಲ್ಲ ಅಂಬೋ ಭಾವನಾದಿಂದ ನಾನು ಕೆಲಸ ಮಾಡಬೇಕೆಂತ ಬಂದೀನಿ. ಈ ಊರಾಗ ನಾ ಏನೂ ಸಂಬಂಧ ಇಟ್ಟುಕೊಂಡಿಲ್ಲ. ಜನರಿಲ್ಲದ ಊರಿಗೇನು ನನ್ನ ಕಳಿಸೋದಿಲ್ಲ. ವರ್ಗಮಾಡಿದಲ್ಲಿಗೆ ಹೋಗಲಿಕ್ಕೆ ನಾನು ಸಿದ್ಧ ಇದ್ದೀನಿ." ಎಂದು ಸ್ವಾಭಾವಿಕವಾಗಿ ನುಡಿದರು.

ಶ್ರೀನಿವಾಸರಾರಯರು, "ನೀವು ನಿಸ್ಪೃಹರು. ಎಲ್ಲಿದ್ದರೂ ನಿಮಗ ಮರ್ಯಾದಿ ಇದ್ದೇ ಇರತದ. ಆದರೆ ನಿಮಗ ವರ್ಗ ಆದ್ರ ನಮ್ಮೂರ ಸಾಲಿ ಹಾಳಾಧಾಂಗs. ಜನರ ಬವಣಿಗಂತೂ ಮಿತಿಯಿಲ್ಲ. ಅದಕ್ಕ, ನಿಮ್ಮನ್ನ ಇಲ್ಲಿಂದ ವರ್ಗ ಮಾಡಬಾರದು, ಅಂತ ಊರ ಜನರೆಲ್ಲ ನಿಮ್ಮ ಮೇಲಧಿಕಾರಿ

ಗಳಿಗೆ ಅರ್ಜಿ ಮಾಡಬೇಕಂತಾರ. ನಿಮ್ಮ ಅಭಿಪ್ರಾಯ ಕೇಳಲಿಕ್ಕೆ ನಾವು ಬಂದೇವಿ" ಎಂದು ತಮ್ಮ ಮನೋಗತವನ್ನು ತಿಳಿಸಿದರು.

ಮಾಸ್ತರರು, "ನನಗ ಯಾವುದೂ ಸಂಬಂಧ ಇಲ್ಲ. ನಿಮ್ಮ ಇಚ್ಛಾ ಇದ್ಧಾಂಗ ಮಾಡಬಹುದು" ಎಂದು ಹೇಳಿ ಅವರನ್ನು ಕಳಿಸಿಕೊಟ್ಟರು.

ಅವರೆಲ್ಲರೂ ಕೂಡಿ ಶ್ರೀನಿವಾಸರಾಯರ ಮನೆಯಲ್ಲಿ ಕುಳಿತು, ಆಲೋಚಿಸಿ ಒಂದು ಅರ್ಜಿಯನ್ನು ಬರೆದರು. ಗುರುಲಿಂಗಯ್ಯನವರು ಊರೆಲ್ಲ ತಿರುಗಾಡಿ ಅದಕ್ಕೆ ನೂರಾರು ಜನರ ಸಹಿಗಳನ್ನೂ, ಎಷ್ಟೋ ಹೆಬ್ಬೆರಳಿನ ಗರುತುಗಳನ್ನೂ ಮಾಡಿಸಿದರು. ಅವರು ಆ ಅರ್ಜಿಯನ್ನು ಒಡಕಣ್ಣನ ಬಳಿಗೂ ತಂದರು. ಒಡಕಣ್ಣನು ಒಳಗೆ ನೊಂದು ಕೊಂಡರೂ ಊರಿಗೆಲ್ಲ ಎದುರಾಗುವ ಹೊತ್ತು ಬರಬಹುದೆಂದು ಬೆದರಿ, ತಾನೂ ಅದಕ್ಕೆ ಸಹಿಮಾಡಿದನು. ಮರುದಿನವೆ ಆ ಅರ್ಜಿಯು ಮೇಲಧಿಕಾರಿಗಳ ಕಡೆಗೆ ಹೋಯಿತು.

ಅರ್ಜಿಗೆ ಸಹಿ ಹಾಕಿದ ಮರುಕ್ಷಣವೇ ಒಡಕಣ್ಣನು ಬಸನಗೌಡ್ರನ್ನು ಕರೆಕಳಿಸಿ ಅವರಿಗೆ, "ಈಗ ಈ ಊರ ಜನರು ನಿಮ್ಮನ್ನು ಈ ಊರಿಗೆ ವರ್ಗ ಮಾಡಬಾರದು ಅಂತ ಒಂದು ಅರ್ಜಿ ಬರದು ಕಳಿಸ್ಯಾರ. ಅದರಾಗ ನಿಮ್ಮ ಮ್ಯಾಲ ಬಹಾಳ ಅಪರಾಧಾ ಹೊರಿಸ್ಯಾರ. ಕಾರಣಾ, ನೀವು ಈಗಿಂದೀಗಲೆ ನಿಮ್ಮ ಮೇಲಧಿಕಾರಿಗಳ ಕಚೇರಿಗೆ ಹೋಗಿ, ಅಲ್ಲಿಯ ಕಾರಕೂನರ ಕೈಬೆಚ್ಚಗ ಮಾಡಿ, ಇಲ್ಲಿಂದ ಹೋದ ಅರ್ಜಿ ಹೊರಬೀಳದಂತೆ ವ್ಯವಸ್ಥಾ ಮಾಡಿ ಬರ್ರಿ." ಎಂದು ಹೇಳಿ ಅವರ ಕೈಯಲ್ಲಿ ಇಪ್ಪತ್ತೈದು ರೂಪಾಯಿಗಳನ್ನು ಕೊಟ್ಟು ಜಿಲ್ಹೆಯ ಮುಖ್ಯಸ್ಥಳಕ್ಕೆ ಅವರನ್ನು ಕಳುಹಿದನು.

ಮುಂದೆ ನಾಲ್ಕಾರು ದಿನಗಳಲ್ಲಿಯೆ ಒಡಕಣ್ಣನ ತಂತ್ರವು ಶ್ರೀನಿವಾಸರಾಯರಿಗೆ ತಿಳಿಯಿತು ಅವರು ನಿಂಗನಗೌಡರನ್ನೂ ಗುರಲಿಂಗಯ್ಯನವರನ್ನೂ ಕರದುಕೊಂಡು ಶಾಲಾಧಿಕಾರಿಗಳಿದ್ದಲ್ಲಿಗೆ ಹೋಗಿ ಅವರ ಮುಂದೆ ಒಡಕಪ್ಪದೇಸಾಯಿಯ ಕುಚೋದ್ಯತನವನ್ನೂ, ಬಸನಗೌಡ ಮಾಸ್ತರರ ದುರಾಶೆಯನ್ನೂ ವಿಸ್ತರಿಸಿ, "ನಮ್ಮೂರ ಸಾಲಿ ಬರಬೇಕನ್ನೋ ಇಚ್ಛಾ ನಿಮಗಿದ್ರ ಈಗಿಕೋ ಮಾಸ್ತರ್ನ ವರ್ಗಾಯಿಸಿರಿ" ಇವರಿಗೆ ಸಂಪೂಸ್ಟಕ್ಕ ಎಂದು ಸ್ಪಷ್ಟವಾಗಿ ಹೇಳಿದರು. ಶಾಲಾಧಿಕಾರಿಗಳು ಅಭಯವನ್ನು ಕೊಟ್ಟರು. ಬಳಿಕ ಶ್ರೀನಿವಾಸರಾಯರೇ ಮೊದಲಾದ

ವರು ಊರಿಗೆ ಬಂದು, "ನಮ್ಮೂರ ವ್ಯಾಲ ಬಂದ ಪಿಡುಗುನ್ನ ಹೊಡದೋಡಿಸಿ ಬಂದೀವಿ" ಎಂದು ಊರಲ್ಲೆಲ್ಲ ಸುದ್ದಿಯನ್ನ ಹರಡಿದರು. ಅದನ್ನು ಕೇಳಿ ಒಡಕಣ್ಣನಿಗೆ ಬಹಳ ವ್ಯಥೆಯಾಯಿತು. ಆ ನೋವನ್ನ ತನ್ನ ಅಂತರಂಗದದಲ್ಲಿಯೆ ಬಚ್ಚಿಟ್ಟು, "ತಮ್ಮ ಕಾರ್ಯ ತಾವು ಮಾಡಿ ಕೊಂಡು ಬಂದ್ರ, ಅದರಾಗ ನನ್ನದೇನು ಮರ್ಯಾದಿ ಹೋತು ?" ಎಂದು ಕಂಡ ಕಂಡ ಜನರೆದುರಿಗೆ ಎನ್ನ ತೊಡಗಿದನು.

ಕಲ್ಲಂಭಟ್ಟರಿಗೆ ಅಷ್ಟೆಸಾಕು; "ಮೂರ್ಖರಿಗೆ ಮೂಗು ಹೋದರೂ ಮಾನಹಾನಿ ಆಗೋದಿಲ್ಲ. ಎಂದು ಉಪಹಾಸ ಮಾಡಿಬಿಟ್ಟರು.

## ೧೭. ಸತ್ತ ಎತ್ತಿನ ಕಿಮ್ಮತ್ತು

ಉಮಚಗಿ ಮಾಸ್ತರರು ಊರಿಗೆಲ್ಲ ಉಪಕಾರ ಮಾಡುತ್ತಿದ್ದರೂ ಪರ ರಿಂದ ತಮಗೆ ಉಪಕಾರವಾಗಬೇಕೆಂದು ಬಯಸುತ್ತಿದ್ದಿಲ್ಲ. ಎಂತಹ ಕಠಿಣ ಪ್ರಸಂಗ ಬಂದರೂ ಹೆರವರಿಗೆ ಮೊರೆಹೋಗುವ ಮನುಷ್ಯರಲ್ಲಿ ಅವರು. ತಮಗೆ ಬರುವ ವೇತನದಲ್ಲಿಯೆ ಮಿತವ್ಯಯದಿಂದ ಉಪಜೀವನವನ್ನು ಸಾಗಿ ಸುತ್ತಿದ್ದರು. ಹೀಗೆ ಅವರು ಕೇವಲ ನಿರಿಚ್ಛರಾಗಿದ್ದರೂ ಕಾಕತಾಲೀಯ ನ್ಯಾಯದಿಂದ ಅವರಿಗೆ ಅಕಸ್ಮಾತ್ತಾದ ಯೋಗವೊಂದು ಘಟಿಸಿತು.

ಅವರ ಮಾವಂದಿರೊಮ್ಮೆ ಬೊಮ್ಮಿಗೇರಿಗೆ ಬಂದು ಹದಿನೈದು ದಿನವಿ ದ್ದರು. ಮುಂದೆ ಅವರು ಪುಣೆಗೆ ಹೋಗಬೇಕಾಗಿತ್ತು. ಅದಕ್ಕಾಗಿ ರೇಲ್ವೆ ಸ್ಟೇಶನ್ನಿನವರೆಗೊಂದು ಚಕ್ಕಡಿಯನ್ನು ಗೊತ್ತುಮಾಡಬೇಕಾಯಿತು. ಮಾಸ್ತ ರರು ಬಾಡಿಗೆಯಿಂದ ಚಕ್ಕಡಿಯನ್ನು ಗೊತ್ತುಮಾಡಬೇಕೆಂದು ಹೊರಟಾಗ ಧುಂಡಿಭಟ್ಟರೂ ಕಲ್ಲಂಭಟ್ಟರೂ ಅವರನ್ನು ನಿಲ್ಲಿಸಿಕೊಂಡು ಸಮಾಚಾರ ವನ್ನು ತಿಳಿದುಕೊಂಡರು. ಆಳುಮಗನು ಬಾರದ್ದರಿಂದ ತಮ್ಮ ಎತ್ತುಗಳು ಮನೆಯಲ್ಲಿಯೆ ಇವೆಯೆಂದೂ, ಅವುಗಳನ್ನು ಹೂಡಿಕೊಂಡು ಮಾಸ್ತರರು ಹೋಗಬಹುದೆಂದೂ ಧುಂಡಿಭಟ್ಟರು ಸೂಚಿಸಿದರು. ಕಲ್ಲಂಭಟ್ಟರು ದ್ಯಾಮ ಪ್ಪನನ್ನು ಕರೆದು ಗಾಡಿಹೊಡೆದುಕೊಂಡು ಮಾಸ್ತರರ ಮನೆಮುಟ್ಟ ಬರು ವಂತೆ ತಿಳಿಸಿದರು; ಅವನೂ ಒಪ್ಪಿಕೊಂಡನು. ಕಲ್ಲಂಭಟ್ಟರು, "ಇಲ್ಲಿ ಕೂತಲ್ಲೆ ನಿಮ್ಮ ಕೆಲಸ ಆತಲ್ಲ! ಈ ಊರಾಗ ನಿಮ್ಮ ಮಾತು ಅಂದ್ರ

ವೇದವಾಕ್ಯ, ಅದನ್ನು ಮೀರಲಿಕ್ಕೆ ಯಾರು ಸಮರ್ಥರು? ನೀವು ಯಾರಿಗೂ ಹೇಳೋದಿಲ್ಲ ಮಾಡೋದೇನು?" ಎಂದು ಉಪಚರಿಗಿ ಮಾಸ್ತರರ ದೊಡ್ಡಿಸ್ತ ನವನ್ನು ಹೊಗಳಿದರು, ಮಾಸ್ತರರು ಊರಿಗೆ ಹೋಡುವಸಿದ್ಧತೆಗಾಗಿ ಮನೆಗೆ ಮರಳಿದರು.

ಗೊತ್ತುಮಾಡಿದ ಹೊತ್ತಿಗೆ ಸರಿಯಾಗಿ ದ್ಯಾಮಣ್ಣನು ಚಕ್ಕಡಿಯನ್ನು ಹೊಡೆದುಕೊಂಡು ಬಂದನು. ರಾತ್ರಿಯ ಗಾಡಿಗೆ ಹೋಗಬೇಕಾಗಿದ್ದುದ ರಿಂದಲೂ, ತಮ್ಮ ಮಾವಂದಿರು ಸಾವಿರಾರು ರೂಪಾಯಿಗಳ ಆಭರಣಗ ಳನ್ನು ತೆಗೆದುಕೊಂಡು ಹೋಗಬೇಕಾಗಿದ್ದುದರಿಂದಲೂ, ಮಾಸ್ತರರೂ ಅವ ರನ್ನು ಗಾಡಿಯವರೆಗೆ ಮುಟ್ಟಿಸಲಿಕ್ಕೆ ಹೊರಟರು. ಚಕ್ಕಡಿಯು ಏಳೆಂಟು ಮೈಲು ಹೋಯಿತು. ಗಾಡಿಯ ನಿಲುಮನೆಯು ಇನ್ನು ಎರಡು ಮೈಲಿನಲ್ಲಿ ರಬಹುದು. ಅಷ್ಟರಲ್ಲಿ ಒಂದು ಎತ್ತು ಮುಗ್ಗರಿಸಿತು. ದ್ಯಾಮಣ್ಣನು ಚಟ್ಟನೆ ಚಕ್ಕಡಿಯಿಂದ ಜಿಗಿದು ನೋಡುತ್ತಾನೆ! ಎತ್ತಿಗೆ "ಗುಂಡಿಗೆಯ ಸೆಲೆ" ಬಂದುಬಿಟ್ಟಿತ್ತು! ಆವನು ಗಾಬರಿಯಾಗಿ, "ಮಾಸ್ತರ! ಎತ್ತಿಗೆ ಕೆಟ್ಟ ಬ್ಯಾನಿ ಬಂದೈತಿ. ಇಲ್ಲೇ ಒಂದ ಹಳ್ಳಿ ಐತಿ ಓಡತಹೋಗಿ ಬಲ್ಲವರ್ನ ಕರ ಕೊಂಡು ಬರ್ರಿ. ನಾನೂ ಕೈಲಾದೋಟು ಉಪಚಾರ ಮಾಡತೀನಿ" ಎಂದನು. ಮಾಸ್ತರರು ಓಟಬಿಟ್ಟರು. ಎತ್ತಿನ ಕುತ್ತಿಗೆಯು ಉಬ್ಬಿದ್ದನ್ನು ನೋಡ್ಡಿ. ಆದನ್ನು ಬಡಿಯಬೇಕೆಂದು ದ್ಯಾಮಣ್ಣನು ಕಲ್ಲನ್ನು ಹುಡುಕತೊ ಡಗಿದನು. ಮಾಸ್ತರರ ಮಾವಂದಿರು ಗಾಬರಿಯಾದರು.

ಎರೆಯ ಭೂಮಿಯಲ್ಲಿ ಕಲ್ಲುಗಳೆಲ್ಲಿಂದ ಬರಬೇಕು? ಮುಂದೆ ತುಸು ಹೊತ್ತಿನಲ್ಲಿಯೆ ಆ ಎತ್ತಿನ ಇಹಲೋಕ ಯಾತ್ರೆಯು ಮುಗಿದುಹೋಯಿತು. ಮಾಸ್ತರರೂ ನಾಲ್ಕಾರು ಜನರನ್ನು ಕರೆದುಕೊಂಡು ಓಡುತ್ತ ಬಂದರು. ಬಂದವರು ಎತ್ತನ್ನು ನೋಡಿ, "ಇದು ಗುಂಡ್ಗೀಶೆಲೀರೋಗ. ಇದಕ್ಕ ದನ ಬಾಳೊತ್ತು ಬದುಕಾಣೆಲ್ರೀ- ಒಮ್ಮೆಂದೊಮ್ಮೆಗೇ ಶಿರ ಉಬ್ಬಿ, ಉಸುರು ಕಟ್ಟಿ ದನಾ ಸಾಯತಾವ ಇದಕ್ಕ ಯಾವ ಉಪಾಯಾನೂ ಇಲ್ಲ" ಇಂದು ಹೇಳಿದರು.

ತುಸು ಹೊತ್ತಿನಲ್ಲಿಯೆ ಉಗಿಬಂಡಿಯು ಬರುವ ಸದ್ದು ಕೇಳತೊಡ ಗಿತು. ಮಾಸ್ತರರು ಮುಂದೆ ಹೋಗುವ ವಿಚಾರವನ್ನು ಬಿಟ್ಟುಕೊಟ್ಟು,

ಬಂದ ಜನರಿಗೆ ಹೇಳಿಕೊಂಡು, ಎರಡು ರೂಪಾಯಿಗಳನ್ನು ಬಾಡಿಗೆಯಾಗಿ ತೆತ್ತು, ಬೇರೆ ಎರಡು ಎತ್ತುಗಳನ್ನು ತರಿಸಿದರು. ಆರು ತಾಸು ರಾತ್ರಿಗೆ ಅವರು ಬೊಮ್ಮೀಗೇರಿಗೆ ಬಂದು ಮುಟ್ಟಿದರು. ಅವರಿಗೆ ಬಹಳ ವ್ಯಥೆ ಯಾಗಿತ್ತು.

ಮರುದಿನ ಬೆಳಗಾಗುತ್ತಲೆ ಅವರು ಧುಂಡಿಭಟ್ಟರ ಮನೆಗೆ ಹೋಗಿ, ಮಾರ್ಗದಲ್ಲಿ ಆದ ಪ್ರಮಾದವನ್ನು ಹೇಳಿ ಉಳಿದೊಂದು ಎತ್ತನ್ನು ಅವರಿಗೊ ಪ್ಪಿಸಿದರು. ಧುಂಡಿಭಟ್ಟರು, "ನಾ ಬಡವ. ಕಮತದ ಮ್ಯಾಲs ಉಪಜೀ ವನ ಮಾಡಾವ. ಒಂದು ಎತ್ತು ಸತ್ತುಹೋತು. ಈಗ ಮತ್ತ ಎತ್ತು ಕೊಳ್ಳೋ ಯೋಗ್ಯತಾ ನನಗಿಲ್ಲ. ನನ್ನ ಕಮತ ಮುಗ್ಗೇಡು ಆತು. ಅಯ್ಯಯ್ಯೋ! ಏನು ಮಾಡಲೀ? ಬಡತನದಾಗ ಬಹ್ಮೇತಿ ಗಂಟುಬಿತ್ತು!" ಎಂದು ಗೋಳಿಟ್ಟರು. ಅದಕ್ಕೆ ಮೇಳವಾಗಿ ಅವರ ಮನೆಯ ಜನರೆಲ್ಲ ಭೋರೆಂದು ಅಳಹತ್ತಿದರು.

"ಭಟ್ಟರ, ಮಿಂಚಿಹೋದ ಮಾತಿಗೆ ಚಿಂತಿಸಿ ಫಲ ಇಲ್ಲ. ಧೈರ್ಯ ತಾಳ್ರಿ ಕಮತಾ ಮುರೀಬ್ಯಾಡ್ರಿ. ಆದಷ್ಟು ಪ್ರಯತ್ನ ಮಾಡಿ ಮತ್ತೊಂದು ಎತ್ತು ಕೊಳ್ರಿ. ನಾನೂ ನಿಮಗ ನನ್ನ ಕೈಲಿಂದಾದಷ್ಟು ಸಹಾಯ ಮಾಡತೀನಿ."

"ಆಗಲಿ. ನೀವೂ ಬಲ್ಲವರು ನಿಮಗೇನು ವಿಶೇಷ ಹೇಳಬೇಕಂತಲ್ಲ. ಮನ್ಯಾಗಿನ ಒಂದು ಹೇರು ಕಾಳು ಮಾರತೀನಿ ನೀವೂ ಸ್ವಲ್ಪ ಸಹಾಯ ಆದ್ರ ಹತ್ತುಹದಿನೈದುದಿನದಾಗ ಎತ್ತು ಕೊಳ್ಳತೀನಿ ನನ್ನಮ್ಯಾಲ ನಿಮ್ಮಉಪ ಕಾರ ಬಹಾಳ ಆಗೇದ ಆದನ್ನ ನಾನು ಸಾಯೋವರಿಗೂ ಮರಿಯೂ ಹಾಂಗಿಲ್ಲ."

ಮಾಸ್ತರರು "ಯಾಕಾಗಲೊಲ್ಲದು" ಎಂದು ಒಪ್ಪಿಕೊಂಡು, ಅವರನ್ನು ಸಮಾಧಾನಪಡಿಸಿ ಮನೆಗೆಬಂದರು. ಮರುದಿವಸ ಒಂದು ಬಾಡಿಗೆಯ ಬಂಡಿಯನ್ನು ಗೊತ್ತು ಮಾಡಿ ತಮ್ಮ ಮಾವಂದಿರನ್ನು ಕಳುಹಿಕೊಟ್ಟರು.

ಉಮಚಗಿ ಮಾಸ್ತರರಿಗೆ ಅಕಸ್ಮಾತ್ತಾಗಿ ಸಂಭವಿಸಿದ ಅಪಘಾತದ ಸುದ್ದಿಯು ಬೊಮ್ಮೀಗೇರಿಯ ತುಂಬ ಹಬ್ಬಿದ ಮೇಲೆ ಒಡಕಣ್ಣನಿಗೆ ತಿಳಿಯಿ-

ದಿದ್ದೀತೆ? ಅವನು "ಒಳ್ಳೇಸಮಯ" ಎಂದುಕೊಂಡು ಧುಂಡಿಭಟ್ಟರ ಮನೆಗೆ ಬಂದು, "ಏನು ಭಟ್ಟರ, ನಿಮ್ಮ ಎತ್ತಿನ್ನ ಆ ಮಾಸ್ತರ ಕೊಂದಾನಂತಲ್ಲ! ನೀವು ಬಡವರು ನಿಮ್ಮ ಮನೀನಾs ಅವಾ ಮುರಧಾಂಗಾತು. ನೀವು ಆ ಎತ್ತಿನ ಕಿಮ್ಮತ್ತು ಅವನಿಂದ ಎತ್ತಲಿಕ್ಕೇ ಬೇಕು. ಈ ಊರಾಗ ಅವನ ಉರವಣಿಗಿ ಬಹಾಳ ಆಗೇಡ ಅವನಮಗ್ಗಲಾ ಮಡಚಲಿಕ್ಕೇ ಬೇಕು" ಎಂದು ಆರಂಭಿಸಿದನು.

"ದೇಸಾಯರ, ಅದಕ್ಕ ಅವರೇನು ಮಾಡ್ಯಾರು? ನನ್ನ ಪ್ರಾರಬ್ಧ. ಗುಂಡಿಗೀಶೆಲಿ ಬಂದು ಎತ್ತು ಒಮ್ಮಿಂದೊಮ್ಮೀಗೆ ಸತ್ತುಬಿತ್ತಂತ. ಆ ಮಾಸ್ತರು ಎಂದೂ ಸುಳ್ಳಾಡ್ಥೋರಲ್ಲ. ನನ್ನ ಮ್ಯಾಲೆ ಅವರು ಬಹಳ ಉಪ ಕಾರ ಮಾಡಿದ್ರೂ ಅಂತ ಅವರಿಗೆ ಎತ್ತು ಕೊಟ್ಟೆ. ಹೀಂಗ ಅನರ್ಥ ಆಗತದ ಅಂಬೋದು ಯಾರಿಗೆ ಗೊತ್ತು? ನನ್ನ ವಿಷಯಕ್ಕ ಮಾಸ್ತರಿಗೂ ಬಹಳ ಕಳವಳ ಆಗೇದ ಮಿಂಚಿಹೋದ ಬದುಕಿಗೆ ಚಿಂತಿಸಿ ಏನು ಫಲ?"

"ನಿಮ್ಮಂಥ ಮಳ್ಳ ಜನರಿಗೆ ಆ ಮಾಸ್ತರನ ಮರ್ಮ ತಿಳೀಲಿಕ್ಕಿಲ್ಲ ಅವಾ ತುಡುಗರ ಒಡಿಯಾ, ದೊಡ್ಡ ಮೋಸಗಾರ. ಒಲಿಯೊಳಗಿನ ಬೂದಿ, ಕೆಮ್ಮಣ್ಣು ಕರೀಮಣ್ಣಿನ ಗುಳಿಗೀ ಕೊಟ್ಟು, ಊರ ಜನರನೆಲ್ಲಾ ಮಳ್ಳಮಾಡ್ಯಾನ. ನಿಮ್ಮಎತ್ತು ಕೊಂದುಬಂದು, ನಿಮ್ಮ ಮಾರೀಮ್ಯಾಲ ಕೈ ಎಳದಿದ್ದಾನು. ನೀವು ಮೋಸಕ್ಕ ಬಲಿ ಬೀಳಬ್ಯಾಡ್ರಿ. ಸತ್ತ ಎತ್ತಿನ ಕಿಮ್ಮತ್ತಿಗೆ ಎರಡರಷ್ಟು ಹಣ ಅವನ ಕಡಿಂದ ನಿಮಗ ಕೊಡಸತೇನಿ ಒಣ ವೇದಾಂತದಿಂದ ಉಪಯೋಗ ಇಲ್ಲ. ನೀವು ಉಪವಾಸ ಬಿದ್ದರ ಆ ಮಾಸ್ತರ ಏನು ಕೂಳು ಹಾಕತಾನ? ಏನು ಬಂದದ್ದೂ ನಾ ನೋಡಕೊತೇನಿ. ಎತ್ತಿನ ಕಿಮ್ಮತ್ತು ಕೊಟ್ಟು ಹೋಗೂ ಅಂತ ನೀವು ಅವನ ಬಾಗಲ ಕಟ್ರಿ. ನಿಮ್ಮ ವಸ್ತು ನೀವು ಕೇಳಿದರ ಅದೇನು ಅಪರಾಧ ಅಲ್ಲ."

ಅಲ್ಲಿಯೆ ಕುಳಿತ ದುಂಡಿಯಭಟ್ಟರ ತಾಯಿಯು ಬಾಯಿತೆರೆದಳು, "ದೇಸಾಯ್ರು ಹೇಳೋದು ಬರೋಬರಿ ಆದ. ಅವಾ ನಿನ್ನ ಮನಿಂದ ಹ್ಯಾಂಗ ಎತ್ತು ವೈದಿದ್ದಾ ಹಾಂಗ ತಂದುಕೊಡಬೇಕಾಗಿತ್ತು. ಸತ್ರ ಅದನ್ನ ಕೊಂಡು ಕೊಡಬೇಕು. ಯಾರ ಉಪಕಾರಕ್ಕ ಕೊಡತಾನ? ಅವನ ಮನೀ ಬಾಗಲಾ ಕಟ್ಟಿಮನೀ ಒಳಗಿನ ಕಾಳು ಮಾರಿ, ಮನೀ ಮನೀ ಭಿಕ್ಷಾ ಬೇಡಲಿಕ್ಕೆ

ಹೋಗಬೇಕಂತ ಮಾಡೀಯೇನು? ನಾ ಏನು ಮನ್ಯಾಗಿನ ಕಾಳುಕೋಡೋಕಿ ಅಲ್ಲ."

ದುಂಡಿಭಟ್ಟರು ಏನು ಮಾಡಬೇಕು? ನಿರ್ವಾಹವಿಲ್ಲದೆ ಒಪ್ಪಿಕೊಂಡರು. ಒಡಕಣ್ಣನು ಹಿರಿಹಿರಿ ಹಿಗ್ಗಿ ತನ್ನ ಮನೆಗೆ ತೆರಳಿದನು.

ಒಡಕಣ್ಣನ ಹೇಳಿಕೆಯಂತೆ ಮಾಸ್ತರರ ಮನೆಯ ಬಾಗಿಲಕಟ್ಟಿ ಕುಳಿತುಕೊಳ್ಳುವ ಧೈರ್ಯವು ಧುಂಡಿ ಭಟ್ಟರಿಗೆ ಬರಲಿಲ್ಲ. ಅವರು ತಮ್ಮ ಮಿತ್ರರಾದ ಶಂಕರಭಟ್ಟರ ಮುಖಾಂತರವಾಗಿ ಮಾಸ್ತರರಿಗೆ ಸತ್ತಎತ್ತಿನಬೆಲೆಯನ್ನು ಕೇಳಿದರು ಅದಕ್ಕೆ ಮಾಸ್ತರರು, "ನಾನೇನು ಅವರ ಎತ್ತುಕೊಂದಿಲ್ಲ. ಬ್ಯಾನಿ ಬಂದು ಸತ್ರ ಅದಕ್ಕ ನಾ ಮಾಡೋದೇನು? ನಾ ಏನು ಸತ್ತ ಎತ್ತಿನ ಬೆಲಿ ಕೊಡಾಾವಲ್ಲ ಹೀಂಗ ಅವರಿಗೆ ತಿಳಿಸಿರಿ." ಎಂದು ಹೇಳಿಕಳುಹಿದರು.

ಈ ಮಾತನ್ನು ಕೇಳಿ ಧುಂಡಿಭಟ್ಟರ ತಾಯಿಯು, "ಅಧ್ಯಾಂಗ ಕೋಡೋದಿಲ್ಲ? ನೀ ಹೋಗಿ ನಾಕ ಮಂದ್ಯಾಗ ಅವನ ಮರ್‍ಯಾದೀ ಕಳಿ; ತಾನss ಕೊಡತಾನ. ಹೀಂಗ ಬಣಹೇಡ್ಯಾಗಿ ಕೂತ್ರ ಯಾರು ಕೇಳತಾರ? ಮತ್ತೊಂದು ಎತ್ತು ತರದಿದ್ರ ನಿನಗ ಕೂಳss ವಜಾ ಮಾಡೇನು!" ಎಂದು ಗರ್ಜಿಸಿದಳು.

ದುಂಡಿಭಟ್ಟರು ನಾಲ್ಕಾರು ದಿವಸ ಊರೆಲ್ಲಾ ಸುತ್ತುವರಿದು, ಕೊನೆಗೆ ಒಂದು ಕಿರಾಣಿ ಅಂಗಡಿಯಲ್ಲಿ ಮಾಸ್ತರರನ್ನು ಕಂಡುಹಿಡಿದರು. ಕೂಡಲೆ ಅವರು, "ನನ್ನ ಎತ್ತಿನ ಸಂಬಂಧಿ ಏನು ವ್ಯವಸ್ಥಾ ಮಾಡತೀರಿ? ಎತ್ತಿಲ್ದ ಹೊಲದ ಕಲಸಕ್ಕ ಭಾಳ ತೊಂದ್ರಿ ಆಗೇದ" ಎಂದು ಕೇಳಿದರು. ಆ ಮಾಸ್ತರರು, "ನೀವು ನನ್ನೆದುರಿಗೆ ಹೇಳಿದಂತೆ ವ್ಯವಸ್ಥಾ ಮಾಡಬೇಕಾಗಿತ್ತು" ಎಂದರು.

"ಅದು ಈಗ ಸಾಧ್ಯವಿಲ್ಲ ನೀವು ನಮ್ಮ ಮನಿಂದ ಎತ್ತು ವೈಥಾಂಗ ತಿರುಗಿ ತಂದು ಕಟ್ಟಬೇಕು. ಇಲ್ಲಾ ಎತ್ತಿನ ಸಂಪೂರ್ಣ ಕಿಮ್ಮತ್ತು ನೀವು ಕೊಡಬೇಕು."

"ನಿಮಗ ಮಾತಿನ ಬೆಲೀನೂ ಇಲ್ಲ, ಮನುಷ್ಯರ ಬೆಲೀನೂ ಇಲ್ಲ. ತಿಳಿಧ್ಹಾಂಗಾತು. ಸತ್ತ ಎತ್ತಿನ್ನ ತಂದು ಕಟ್ಟೋದಂತೂ ಯಾರಿಗೂ ಸಾಧ್ಯ ಇಲ್ಲ. ನಿಮ್ಮ ಎತ್ತಿನ್ನ ನೋಡಿದ ನಾಕಮಂದಿ ಒಕ್ಕಲಿಗರಿಂದ ಅದರ ಬೆಲಿ ಕಟ್ಟಿಸರಿ ಅಷ್ಟು ಬೆಲಿ ನಾ ಕೊಡತೇನಿ"

"ನನ್ನ ಎತ್ತಿನ ಬೆಲಿ ಕಟ್ಟಲಿಕ್ಕೆ ನಾಕಮಂದಿ ಯಾತಕ್ಕ ಬೇಕು? ಅದನ್ನ ಕೊಂಡಾವ ನಾನು. ಅದರ ಕಿಮ್ಮತ್ತು ನಾ ಹೇಳತೀನಿ. ಅಷ್ಟು ನೀವು ಕೊಡಬೇಕು."

"ನೀನು ದುರಾಸೆಗೆ ಬಿದ್ದೀದಿ. ಸತ್ತ ಎತ್ತಿಗೆ ಸಾವಿರ ರೂಪಾಯಿ ಬೆಲಿ ಹೇಳಬಹುದು. ಕೊಡೋರು ಯಾರು? ನೀ ಕಟ್ಟಿದಷ್ಟು ಬೆಲಿ ನಾ ಏನು ಕೊಡೋದಿಲ್ಲ. ನೀನು ನನ್ನ ಮ್ಯಾಲ ಏನು ಮಾಡೋದು ಮಾಡ್ಕ ಹೋಗು."

ಅಲ್ಲಿ ಕುಳಿತ ಒಕ್ಕಲಿಗರು ಕೂಡ ಭಟ್ಟರಿಗೆ, "ನೀವು ಆಡೋ ಮಾತು ಯಾರಿಗೂ ಸರಿಬರಾಕಿಲ್ಲ. ನಿಮಗೇನು ಬುದ್ಧಿ ಐತ್ಯೋ ಇಲ್ಲ್ಯೋ?" ಎಂದು ಹಚಾಹುಚಾ ಮಾಡಿ ಮನೆಗೆ ಅವರನ್ನು ಅಟ್ಟಿದರು. ಭಟ್ಟರು ಒಡಕಣ್ಣನೆ ದುರಿಗೆ ತಮಗಾದ ಅಪಮಾನವನ್ನೆಲ್ಲ ತಿಳಿಸಿ, ಅವನಿಂದ ಯುಕ್ತಿಯೊಂದನ್ನು ಕಲಿತುಕೊಂಡು ಬಂದರು. ಬಳಿಕ ಅವರು, "ಆ ಮಾಸ್ತರನ ತಲಬಾಗಲಿಗೆ ತನ್ನ ಇನ್ನೊಂದು ಎತ್ತು ತಂದು ಕಟ್ಟಿ ಅವನ ಮರ್ಯಾದೀ ಕಳದು, ದುಡು ತಗೋತೀನಿ" ಎಂದು ಕಂಡಕಂಡವರೆದುರಿಗೆ ಹೇಳುತ್ತ, ನಡೆದರು. ಇದನ್ನು ಕೇಳಿ ನಿಂಗನಗೌಡರು, "ಯಾಕ ಭಟ್ಟರ? ನೀವು ಊರಾಗ ಪುಂಡಾಟಿಕೆ ನಡಸಬೇಕಂತ ಮಾಡೀರೇನು? ಮೈ ಮೆತ್ತಗ ಮಾಡಿಕೊಂಡು ಗಚ್ಚಿನಮನೆಗೆ ಹೋದೀರಿ ಬಲು ಎಚ್ಚರಿಕೆ!" ಎಂದು ಬೆದರಿಸಿದರು. ಹೀಗಾದ್ದರಿಂದ ಭಟ್ಟರಿಗೆ ಮಾಸ್ತರರ ಮೇಲೆ ಏರಿಹೋಗುವ ಧೈರ್ಯವಾಗಲಿಲ್ಲ. ಅವರು ಮತ್ತೆ ಬಂದು ಒಡಕಣ್ಣನಿಗೆ ಮೊರೆಯಿಟ್ಟರು. ಒಡಕಣ್ಣನು ಅವರಿಗೆ ಹೊಸದೊಂದು ಹಂಚಿಕೆಯನ್ನು ಹೇಳಿ, "ಇನ್ನು ಹತ್ತೆಂಟು ದಿವಸ ಬಿಟ್ಟು ಹೀಂಗ ಮಾಡ್ರಿ ಅದಕ್ಕ ತಕ್ಕ ಪೂರ್ವಸಿದ್ಧತಾನೂ ಮಾಡಿರತೇನಿ" ಎಂದು ಮುಗಿಸಿದನು;

ಆವನ ಸೂಚನೆಯಂತೆ ಒಂದು ದಿನ ಧುಂಡಿಭಟ್ಟರು ಶಾಲೆಗೆ ಹೋಗಿ ಕುಳಿತು ಶಾಲೆ ಬಿಟ್ಟ ಬಳಿಕ ಉಮಚಗಿ ಮಾಸ್ತರರನ್ನು ಕಂಡು, ತಮ್ಮದು ತಪ್ಪಾಯಿತೆಂದೂ ಅವರು ಹೇಳಿದಂತೆ ಪಂಚರಿಂದ ಎತ್ತಿನ ಬೆಲೆ ಕಟ್ಟಿಸಿ, ಅಷ್ಟನ್ನೆ ತಾವು ತೆಗೆದುಕೊಳ್ಳುವೆವೆಂದೂ ವಿನಯದಿಂದ ಹೇಳಿಕೊಂಡರು.

ಮಾಸ್ತರರು ಒಪ್ಪಿಕೊಂಡು ಅವರೊಡನೆ ಪೇಟೆಗೆ ಬಂದರು. ಕಟ್ಟೆಯ ಮೇಲೆ ಕುಳಿತಿದ್ದ ಸೆಟ್ಟರ ಬಸೆಟ್ಟೆಪ್ಪನು ಅವರನ್ನು ಕರೆದು, ತನಗೆ ಮುಂಜಾನೆ ಕೊಟ್ಟಿದ್ದ ಜುಲಾಬಿನ ಗುಳಿಗೆಯನ್ನು ಹೇಗೆ ತೆಗೆದುಕೊಳ್ಳಬೇಕೆಂದು ಕೇಳಿದನು. ಅಷ್ಟರಲ್ಲಿ ಭಟ್ಟರೂ ಬಂದು ಕಟ್ಟೆಯ ಮೇಲೆ ಕುಳಿತದ್ದನ್ನು ಕಂಡು, "ಯಾಕ ಭಟ್ಟರ, ಮಾಸ್ತರ ಕಡೆ ನಿಮ್ಮ ಕೆಲಸ ಏನೈತೀ?" ಎಂದು ಸಹಜವಾಗಿ ಕೇಳಿದನು. ಅದಕ್ಕೆ ಮಾಸ್ತರರು, ಭಟ್ಟರು ತಮ್ಮ ಬೆನ್ನು ಹತ್ತಿ ಬಂದುದರ ಕಾರಣವನ್ನು ವಿವರಿಸಿದರು. ಅದೇ ಸಮಯಕ್ಕೆ ಬಡಿಗರ ಭರಮಣ್ಣನೂ ಕಂಬಾರ ಕಲ್ಲಣ್ಣನೂ, ಬೆಲ್ಲದ ಗುರುಲಿಂಗಪ್ಪನೂ ಅಲ್ಲಿಗೆ ಬಂದರು. ಭರಮಣ್ಣನು, "ಶಟ್ರ, ಊರಾಗ ಇದೊಂದು ಗುಲ್ಲಾ ಎದ್ದೈತಿ. ಮಾಸ್ತರದೊ, ಭಟ್ಟರದೂ ಜಗಳಾ ಓಟು ತೀರಿಸಿಬಿಡ್ರೆಲ್ಲಾ" ಎಂದು ಮುಂಗಾಲಪುಗೆ ಹೊಡೆದನು ಮಾಸ್ತರರು, "ನನಗೇನು ಜಗಳ ಬೇಕಾಗಿಲ್ಲ. ಇವರ ಎತ್ತು ವೈದದ್ದೊಂದು ನನ್ನ ತಪ್ಪು. ಇವರಿಗೇನು ನಾ ಎತ್ತು ಕೇಳಿದ್ದಿಲ್ಲ. ಆದ್ರೂ ವಿಧಿ ನಮ್ಮ ಬೆನ್ನು ಹತ್ತಿತು ಮಾಡೋದೇನು? ನಾಕಮಂದಿ ಕಟ್ಟಿದಷ್ಟು ಕಿಮ್ಮತ್ತು ಕೊಡ್ಲಿಕ್ಕೆ ತಯಾರಿದ್ದೇನಿ. ನೀವು ಸತ್ತ ಎತ್ತು ನೋಡಿದ್ರ ಬೆಲೆ ಕಟ್ಟಬಹುದು" ಎಂದು ನಿರ್ವಂಚನೆಯಿಂದ ನುಡಿದರು.

ಆಗ ಕಂಬಾರ ಕಲ್ಲಣ್ಣನು, "ಅಲಲಲ! ನಮ್ಮ ಸೆಟ್ರಗೆ ಅರೆಿದ್ದು ಯಾವದೈತೆ? ಸತ್ತ ಎತ್ತಿನ ಕಿಮ್ಮತ್ತು ಭಟ್ರು ಕೇಳಬಾರದಾಗಿತ್ತು. ಅವರೂ ಬಡವರು ಪರಪಂಚ್ಯಾ ನಡ್ಯೋ ಹಾಗಿಲ್ಲ, ಅದಕ್ಕ ಕೇಳ್ತಾರ. ಸೆಟ್ರ, ನೀವಾ ಅದರ ಬೆಲೀ ಕಟ್ಟ ಹೇಳ್ರೆಲ್ಲಾ" ಎಂದು ಮುಂದರಿದು ನುಡಿದನು. ಬಸೆಟ್ಟೆಪ್ಪನವರು, "ನಾ ಒಬ್ಬನಾ ಹ್ಯಾಗ ಹೇಳಾಕಬಂದೀತು? ನಾಕಮಂದಿ ಕೂಡಿ ಮಾತಾಡಿಕೊಂಡು ಹೇಳಿದ್ರ ಪಾಡಾಕ್ಕೈತಿ," ಎಂದು ಬಡಿಗರ ಭರಮಣ್ಣ ಕಂಬಾರ ಕಲ್ಲಣ್ಣ ಮೊದಲಾದವರನ್ನು ತಮ್ಮ ಹಿತ್ತಲಕ್ಕೆ ಕರೆದೊಯ್ದರು. ಭರಮಣ್ಣ, ಕಲ್ಲಣ್ಣ ಇವರು ಎತ್ತಿನ ಬೆಲೆಯನ್ನು ಏಳು ವರಹ ಕಟ್ಟಿದರು; ಗುರುಲಿಂಗಪ್ಪನವರು ಆರು ವರಹವೆಂದರು. ಬಸೆಟ್ಟೆಪ್ಪನವರು "ಎಂಟು" ಎಂದರು. ಅರ್ಧ ತಾಸು ತಮ್ಮ ತಮ್ಮೊಳಗೆ ವಾದವಿವಾದ ಮಾಡಿ ಅವರು ಹೊರಗೆ ಬಂದ ಮೇಲೆ ಗುರುಲಿಂಗಪ್ಪನವರು, "ನಾನು ಕಟ್ಟಿದ ಕಿಮ್ಮತ್ತು ಯೋಗ್ಯ. ಅಷ್ಟಕ್ಕ ಈಗಿರೋ ಎತ್ತಿನ ಜೋಡೀ ಎತ್ತು ನಾ ತಂದುಕೊಡ

ತೀನಿ" ಎಂದು ತಮ್ಮ ನಿರ್ಧಾರವನ್ನು ಹೇಳಿದರು. ಬಸೆಟ್ಟೆಪ್ಪನವರು, ನಾವು ಕೊಡಾಕ ಹೋದ್ರ ಕಡಮೀ ಬೆಲಿ ಬರತೈತಿ; ಕೊಳ್ಳಾಕ ಹೋದ್ರ ಹೆಚ್ಚು ಕೊಡಬೇಕಾಗತೈತಿ. ಒಬ್ಬರ ಮನಸಿಗೆ ಬಂದ ಒಡವಿ ಮತ್ತೊಬ್ಬರ ಮನಸಿಗೆ ಬರಾಕಿಲ್ಲ. ಮಾಸ್ತರಿಗೇನು? ಸರಕಾರೀ ಪಗಾರ ಬರತೈತಿ. ಭಟ್ರು ಬಡವರು" ಎಂದು ಭಟ್ಟರ ಬೆನ್ನು ತಟ್ಟಿ ಮಾತಾಡಿದರು. ಅದಕ್ಕೆ ಗುರುಲಿಂಗಪ್ಪನವರು, "ನಾವೂ ನೀವೂ ಯಾಕ ವಾದಿಸಬೇಕು? ನನ್ನ ಅಭಿಪ್ರಾಯ ಅಂತೂ ನಾ ತಿಳಿಸೀನಿ. ಇದರ ಮ್ಯಾಗಿಂದ ನೀವs ವಿಚಾರಿಸಿ ಒಂದು ಮಾತು ಹೇಳಿಬಿಡ್ರಿ" ಎಂದರು. ಬಸೆಟ್ಟೆಪ್ಪನವರು "ಒಂಬತ್ತುವರಹ ಕೊಡತಕ್ಕದ್ದು" ಎಂದು ನಿರ್ಣಯಿಸಿದರು.

ಮಯಸ್ತರರು ಊರೊಳಗಿನ ನಾಲ್ಕಾರು ಜನ ಒಕ್ಕಲಿಗರಿಂದ ಸತ್ತ ಎತ್ತಿನ ಬೆಲೆ ಕಟ್ಟಿಸಿದ್ದರು. ಅದು ಇಪ್ಪತ್ತು ಇಪ್ಪತ್ತೆರಡು ರೂಪಾಯಿ ಬೆಲೆ ಬಾಳಬಹುದೆಂದು ಅವರಿಗೆ ತಿಳಿದುಬಂದಿತ್ತು. ಬಸೆಟ್ಟೆಪ್ಪನ ನಿರ್ಣಯ ವನ್ನು ಕೇಳಿ ಅವರು ದಿಗಿಲುಗೊಂಡು, ಪಿಟ್ಟೆನ್ನದೆ ಕುಳಿತರು. ಭಟ್ಟರು ಮಾತ್ರ "ನಾನು ಐವತ್ತು ರೂಪಾಯಿಗೆ ಕೊಂಡಿದ್ದೆ. ನೀವು ಕಟ್ಟಿದ ಕಿಮ್ಮತ್ತು ಬಹಾಳ ಸ್ವಲ್ಪಾತು: ಅಷ್ಟು ನಾ ತಕ್ಕೊಳ್ಳೋವಲ್ಲ—" ಎಂದು ರೋಸಿನಿಂದ ನುಡಿದರು. ಬಸೆಟ್ಟೆಪ್ಪನವರು, "ಹೌದ್ರೀ, ನೀವು ಕೊಂಡಕಾ ಲಕ್ಕ ಐವತ್ತು ಕೊಟ್ಟಿರಬಹುದು. ಆ ಎತ್ತು ನಿಮ್ಮಲ್ಲಿ ಎರಡು ಮೂರು ವರ್ಷ ದುಡದೈತಿ ವಯಸ್ಸೂ ಆಗೇತಿ. ಅದಕ್ಕ ಹಿಂದಿನ ಕಿಮ್ಮತ್ತು ಈಗ ಹ್ಯಾಗ ಬಂದೀತು?" ಎಂದು ತಮ್ಮ ನಿಷ್ಪಕ್ಷಪಾತವನ್ನು ತೋರಿಸಿದರು.

ಆಗ ಮಾಸ್ತರರು, "ಪಂಚರು ಕಟ್ಟಿದಷ್ಟು ಕೊಡತೀನಿ ಅಂತ ವಚನಾ ಕೊಟ್ಟೇನಿ. ಇಪ್ಪತ್ತು ರೂಪಾಯಿ ಒಡವಿಗೆ ಇನ್ನೂರು ರೂಪಾಯಿ ಬೆಲಿ ಕಟ್ಟಿದ್ರೂ, ವಚನಭ್ರಷ್ಟ ಆಗೋ ಪಾಪಿ ನಾನಲ್ಲ. ಭಟ್ರು ರೂಪಾಯಿ ತೊಗೊಳ್ಲಿ, ಬಿಡ್ಲಿ,- ನಿಮ್ಮ ನಿರ್ಣಯದಂತೆ ನಾನು ಒಂಬತ್ತು ವರಹ ತಂದು ಬಸೆಟ್ಟೆಪ್ಪನವರೆದುರಿಗೆ ಇಟ್ಟುಹೋಗತೀನಿ." ಎಂದು ಚಟ್ಟನೆ ಎದ್ದು ಮನೆಗೆ ಹೋಗಿ, ಹಣವನ್ನು ತೆಗೆದುಕೊಂಡು ಲಗುಬಗೆಯಿಂದ ಹೊರಟರು.

## ೧೮. ಒಡಕಣ್ಣಿನ ಕ್ಯಾಂಸಲ್ ಕುಣಿತ

ಅಷ್ಟರಲ್ಲಿ ನಿಂಗನಗೌಡರಿಗೆ ಈ ವರ್ತಮಾನವು ತಿಳಿದದ್ದರಿಂದ ಅವರು

ಮಾಸ್ತರರನ್ನು ಅಡ್ಡಗಟ್ಟಿ, ಈ ನಿರ್ಣಯವು ಪಕ್ಷಪಾತದ್ದೆಂದೂ, ಇಪ್ಪತ್ತು ರೂಪಾಯಿ ಎತ್ತಿಗೆ ಒಂಬತ್ತು ವರಹ ಕೊಡಕೂಡದೆಂದೂ ಆಗ್ರಹಮಾಡಿದರು. ಮಾಸ್ತರರು, "ಗೌಡರ! ಇದೊಂದು ನನ್ನ ಸತ್ವಪರೀಕ್ಷಾ ಸಮಯ. ಕೊಟ್ಟ ವಚನ ತಪ್ಪಿಸಲಾರೆ ಈ ವಿಷಯಕ್ಕ ನೀವು ಅಡ್ಡಬರಬಾರದು" ಎಂದು ಹೇಳಿ, ಬಸೆಟ್ಟೆಪ್ಪನವರ ಬಳಿಗೆ ಬಂದು ಒಂಬತ್ತು ವರಹಗಳನ್ನು ಎಣಿಸಿದರು. ಆಗ ಬಸೆಟ್ಟೆಪ್ಪನವರು, "ಭಟ್ರ, ಪರಊರವರು ನಮ್ಮ ಮಾತಿಗೆ ಬೆಲಿ ಕೊಟ್ರು. ನೀವು ನಮ್ಮ ಮಾತು ಕೇಳದಿದ್ರ, ಊರಾಗ ಬಾಳೇ ಮಾಡೋದು ಕಟೀಣ ಆದೀತು ನೋಡ್ರಿ" ಎಂದು ಬೆದರಿಸಿ ಭಟ್ಟರಿಗೆ ಆ ಹಣವನ್ನು ಕೊಟ್ಟರು. ಭಟ್ಟರು ಒಡಕಣ್ಣನ ಯುಕ್ತಿಗೆ ತಲೆದೂಗುತ್ತಾ ಮನೆಗೆ ನಡೆದರು

ಮಾಸ್ತರರೂ ಮನೆಗೆ ಹೊರಡಲು ಸಿದ್ಧರಾದರು. ಆಗ ಬಸೆಟ್ಟೆಪ್ಪನವರು, "ನಿಮ್ಮ ನ್ಯಾಯ ನಿರ್ಣಯದೊಳಗ ನನ್ನ ಔಷಧದ ಮಾತು ಅಲ್ಲಿಗೇ ಉಳೀತು. ಈ ಜುಲಾಬಿನ ಗುಳಿಗೀ ಹ್ಯಾಗ ತಗೋಬೇಕು?" ಎಂದು ಆ ಗುಳಿಗೆಯನ್ನು ಮಾಸ್ತರರ ಮುಂದಿಟ್ಟರು. ಮಾಸ್ತರರು ಅದನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು, "ಸೆಟ್ರ, ಈ ಗುಳಿಗೀ ತಗೊಳ್ಳೋದ್ರಿಂದ ಅವರವರ ಪ್ರಕೃತಿಗೆ ಸರಿಯಾಗಿ ಹೆಚ್ಚುಕಡಿಮಿ ವಾಂತಿಭ್ರಾಂತಿ ಆಗತಾವ. ಹೆಚ್ಚಿಗೆ ಜುಲಾಬು ಆದ್ರ ಶಕ್ತಿಪಾತ ಆಗೋ ಸಂಭವಾನೂ ಅದ. ಆಕಸ್ಮಾತ್ತಾಗಿ ತಮಗ ಶಕ್ತಿಪಾತ ಆದ್ರ, ಪೌಷ್ಟಿಕ ಔಷಧ ಕೊಟ್ಟು ತಮ್ಮನ್ನ ಸಶಕ್ತ ಮಾಡೋ ಭಾರಾನೂ ನನ್ನ ಮ್ಯಾಲ ಬಿದ್ದೀತು ಅಂಬೋ ಭಯ ನನಗ ಬಂದದ. ಕಾರಣಾ ನಿಮಗ ಈ ಗುಳಿಗೀ ಕೊಡೋದಿಲ್ಲ. ಇನ್ನ ಮ್ಯಾಲ ಈ ಊರಾಗ ಯಾರಿಗೂ ಔಷಧಾನೂ ಕೊಡೋದಿಲ್ಲ. ಧುಂಡೀಭಟ್ಟರ ಕುಟುಂಬಕ್ಕ ಬಾಣಂತಿ ಬ್ಯಾನಿ ಆಗಿತ್ತು. ಅದಕ್ಕ ನಾ ಔಷಧ ಕೊಟ್ಟೆ. ದೇವರ ದಯದಿಂದ ಬ್ಯಾನಿ ವಾಸಿ ಆತು. ಏನಾದರೂ ವಿಪರೀತ ಪ್ರಸಂಗ ಬಂದಿದ್ರ ಅದು ಗ್ರಾಮದ ಪಂಚರ ನಿರ್ಣಯಕ್ಕ ಬಿದ್ದು, ಭಟ್ಟರಿಗೆ ಎರಡನೇ ಮದುವೀ ಮಾಡೋ ಭಾರ ನನ್ನ ಮ್ಯಾಲ ಬೀಳತಿತ್ತು. ದೇವರ ದಯ ಇತ್ತು; ಒಂಬತ್ತು ವರಾದ ಮ್ಯಾಲೇ ಅರಿಷ್ಟ ಪರಿಹಾರ ಆತು. ಹೋಗಿ ಬರತೀನಿ ಅಪ್ಪಣೆ ಆಗಲಿ" ಎಂದು ಅಲ್ಲಿಂದೆದ್ದು ತಮ್ಮ ಮನೆಗೆ ಹೋದರು

ಒಂದೆರಡು ದಿನಗಳ ಹಿಂದೆ ಮಾಸ್ತರರ ಪಗಾರವು ಬಂದಿತ್ತು. ಬಂದ ವೇತನವನ್ನೆಲ್ಲ ಕೊಟ್ಟು ಬಂದದ್ದರಿಂದ ಅವರ ಕುಟುಂಬ ಪೋಷಣೆಗೆ ಬಹಳ ತೊಂದರೆಯಾಯಿತು. ಆದರೂ ಅವರು ಎದೆಗುಂದಲಿಲ್ಲ ತಮಗಾದ ವ್ಯಥೆಯನ್ನೂ ಯಾರ ಮುಂದೂ ಹೇಳಲಿಲ್ಲ. ಅಂದಿನಿಂದ ಉದಾಸೀನರಾಗಿ ವೈದ್ಯಕಿಯ ಕೆಲಸವನ್ನು ಮಾತ್ರ ಬಿಟ್ಟುಕೊಟ್ಟರು. ಇದರಿಂದ ಬೊಮ್ಮೀಗೇರಿಯ ಬಡಜನರಿಗೆ ಬಹಳ ತೊಂದರೆಯಾಗಹತ್ತಿತು. ಊರ ಜನರೆಲ್ಲ ಬಸೆಟ್ಟೆಪ್ಪನನ್ನು ನಿಂದಿಸತೊಡಗಿದರು; ಅವನನ್ನು ಕಂಡ ಕೂಡಲೆ ಅಪಮಾನ ಮಾಡತೊಡಗಿದರು. ಆಗ ಅವನು ಒಡಕಣ್ಣನ ಬಳಿಗೆ ಬಂದು, "ದೇಸಾಯರ, ನಿಮ್ಮ ಮಾತಿನ ಮಬ್ಬಿಗೆ ಬಿದ್ದು, ನಾನು ಊರಾಗ ಮಾರಿ ಎತ್ತಿಗೊಂಡು ತಿರಗಲಾರದಾಂಗ ಆಗೇತಿ. ಇದಕ್ಕ ಏನು ಮಾಡಬೇಕ್ರಿ?" ಎಂದು ಕೇಳಿದನು. ಒಡಕಣ್ಣನು, "ಮಾಡೋದೇನು? ಒಬ್ರಿಗೆ ಉಪಕಾರ ಆದು ಮತ್ತೊಬ್ರಿಗೆ ಅಪಕಾರ ಆಗ್ತದ. ಅದು ನಿಮಗೇನೂ ಸಂಬಂಧಿಲ್ಲ. ಮಾನಾಪಮಾನಾ ಮನಸ್ಸಿಗೆ ಹಚಿಗೊಳ್ಳೋದು ರಣಹೇಡಿಗಳ ಲಕ್ಷಣ. ಬೇಕಾದವರು ಬೇಕಾದ್ದು ಅನ್ನಲಿ ನೀವು ಮನಸ್ಸಿಗೆ ಹಚಿಗೋಬ್ಯಾಡ್ರಿ" ಎಂದು ಸಮಾಧಾನ ಹೇಳಿದನು. ಆದರೆ ಊರ ಜನರಿಗೆಲ್ಲ ಬೇಡಾದ ಮೇಲೆ ಬಾಳುವೆ ಮಾಡುವುದು ಕಠಿಣವಾಗುವುದೆಂದು ಬಸೆಟ್ಟೆಪ್ಪನು ಬೆದರಿದನು. ಅವನು ಏನೇನೋ ಮನಸ್ಸಿನಲ್ಲಿಯೆ ಆಲೋಚನೆ ಮಾಡಿಕೊಂಡು ಮಾಸ್ತರರ ಬಳಿಗೆ ಬಂದು, "ಮಾಸ್ತರ! ನಿಮ್ಮ ನ್ಯಾಯ ನಿರ್ಣಯಾ ಮಾಡಿದ್ದಕ್ಕ ಊರ ಜನರೆಲ್ಲಾ ನನಗ ಛೀ ಹಾಕತಾರ ನಿಮ್ಮ ಒಂಭತ್ತು ವರಾ ನಿಮಗ ತಿರಗಿಕೊಡಸತೀನಿ. ಎರಡನೇ ಪಂಚರಕಡಿಂದ ನಿರ್ಣಯಾ ಮಾಡಿಸಿಗೊಳ್ರಿ" ಎಂದು ಉದ್ರೇಕದಿಂದ ನುಡಿದನು.

ಮಾಸ್ತರರು, "ಸೆಟ್ರ, ಜನರು ನಿಮ್ಮನ್ನ ನಿಂದಿಸಿದರ ನಾ ಏನು ಮಾಡಲಿ? ನಿಮ್ಮ ನಿರ್ಣಯಕ್ಕ ಒಪ್ಪಿಗೊಂಡು ಆಗಿಂದಾಗ ರೂಪಾಯಿ ಕೊಟ್ಟುಬಿಟ್ಟೆ. ಆ ನ್ಯಾಯ ನಿರ್ಣಯದ ಮಾತು ತಿರುಗಿ ನನ್ನ ಮುಂದ ತಗೀಬ್ಯಾಡ್ರಿ" ಎಂದು ನಿಷ್ಠುರವಾಗಿ ನುಡಿದುಬಿಟ್ಟರು. ಬಸೆಟ್ಟೆಪ್ಪನು ನಿರುಪಾಯನಾಗಿ, ಒಡಕಣ್ಣನ ಬಲೆಗೆ ಬಿದ್ದು ತಾನು ಮಾನಗೇಡಿಯಾದೆನೆಂದು ಹಳಹಳಿಸುತ್ತಾ ತನ್ನ ಮನೆಗೆ ತೆರಳಿದನು.

ಒಂದು ದಿವಸ ಸೆಟ್ಟರ ಬಸೆಟ್ಟೆಪ್ಪನ ಹದಿನಾಲ್ಕು ವರ್ಷದ ತಮ್ಮನು ತನ್ನ ತಾಯಿಯ ಕೊಡ ಜಗಳಾಡಿ ಅವಳ ಎದೆಗೆ ಕೈಗಲ್ಲಿನಿಂದ ಹೊಡೆದು ಬಿಟ್ಟನು; ಆಕೆಯು ಎಚ್ಚರದಪ್ಪಿ ನೆಲಕ್ಕೆ ಬಿದ್ದಳು. ಅವಳ ಕೈಕಾಲು ತಣ್ಣಗಾಗಿ, ಹಲ್ಲುಗಟಗರಿದು, ಉಸಿರಾಡಿಸುವುದೂ ನಿಂತುಹೋಯಿತು. ಓಣಿಯೊಳಗಿನ ಜನರು ಕೂಡಿ, ನೆತ್ತಿಗೆ ನೀರು ಬಡಿದು, ಗಾಳಿಬೀಸಿ, ಬೂದಿ ತಿಕ್ಕಿ ಮಾಡಿದ ಉಪಚಾರಗಳಿಂದ ಅವಳಿಗೆ ಎಚ್ಚರವಾಗಲಿಲ್ಲ. ಅವರಲ್ಲೊಬ್ಬನು ಓಡಿಹೋಗಿ ಮಾಸ್ತರರಿಗೆ ಸುದ್ದಿಯನ್ನು ತಿಳಿಸಿದನು. ಕೂಡಲೆ ಮಾಸ್ತರರು ಧಾವಿಸಿಬಂದರು. ಉಸಿರುಕಟ್ಟುವಂತೆ ಮುಗಿಬಿದ್ದ ಜನಸಂದಣಿಯನ್ನು ಸರಿಸಿ, ಅವಳನ್ನು ಹಿತ್ತಲಕ್ಕೊಯ್ದು, ಪ್ರಥಮೋಪಚಾರ ಪ್ರಯೋಗದಿಂದ ಎಚ್ಚರಿಸಿ, ತಾವು ತಂದಿದ್ದ ಔಷಧವನ್ನು ಹನಿಹನಿಯಾಗಿ ಅವಳ ಬಾಯಲ್ಲಿ ಬಿಟ್ಟರು. ಅವಳು ಉಸಿರಾಡಿಸತೊಡಗಿ ಗಾಯವಾದ ಸ್ಥಳವನ್ನು ತೋರಿಸಿದಳು. ಆಗ ಮಾಸ್ತರರು, "ಜೀವಕ್ಕೇನು ಅಪಾಯವಿಲ್ಲ. ಪುಪ್ಪುಸಕ್ಕೆ ಒಳ್ಳೇಪೆಟ್ಟು ಬಿದ್ದದ್ದರಿಂದ ಉಸಿರುಕಟ್ಟಿತ್ತು. ತೀವ್ರ ಡಾಕ್ಟರನ್ನ ಕರಿಸಿ ಉಪಚಾರ ಮಾಡಸರಿ" ಎಂದು ಹೇಳಿ ಅಲ್ಲಿಂದ ಹೊರಟು ಹೋದರು.

ನೀವೇ ಮುಂದಿನ ಉಪಚಾರ ಮಾಡಿರೆಂದು ಹೇಳುವ ಧೈರ್ಯವು ಬಸೆಟ್ಟಪ್ಪನಿಗೆ ಆಗಲಿಲ್ಲ, ಅವನು ಡಾಕ್ಟರರನ್ನು ಕರೆಕಳುಹಿ ಔಷಧೋಪಚಾರ ಮಾಡಿಸಲಿಕ್ಕೆ ಐವತ್ತು ರೂಪಾಯಿಗಳನ್ನು ತೆತ್ತನು. ಆಗ ಅವನಿಗೆ ಒಡಕಣ್ಣಿನ ಪಂಗಡದಿಂದ ಹೊರಬಿದ್ದನು.

ನಾಲ್ಕಾರು ದಿನಗಳಲ್ಲಿ ಮೊಹರಂ ಹಬ್ಬವು ಬಂತು. ಹಬ್ಬದ ಉತ್ಸವ ವೈಭವದಿಂದ ನಡೆಯಿತು. ಹಿಂದುಗಳೂ ಮುಸಲ್ಮಾನರೂ ಸೇರಿಕೊಂಡು ಎರಡು ಅಲಾಬೀ ಪದಗಳ ಮೇಳಗಳನ್ನು ಸಿದ್ಧಪಡಿಸಿದ್ದರು. ಕತ್ತಲರಾತ್ರಿಯ ದಿವಸ ಬೆಳತನಕ ಆ ಮೇಳಗಳ ನರ್ತನವಾಗತಕ್ಕದ್ದೆಂದು ಗೊತ್ತಾಗಿದೆ. ಲಿಂಗನಗೌಡರು ಹೊಸದಾಗಿ ರಿವಾಯತುಗಳನ್ನು ಕಟ್ಟಿ ಹಾಡಿದವರಿಗೆ ಬಂಗಾರದ ಕೈಯಾಳವನ್ನು ಕಾಣಿಕೆಯಾಗಿ ಕೊಡುವೆನೆಂದು ಸಾರಿದ್ದಾರೆ. ಅಂದು ನಾಲ್ಕು ತಾಸು ರಾತ್ರಿಯ ಸಮಯಕೆ ಜುಮ್ಮಾಮಸೀದೆಯ ಬಯಲಿನಲ್ಲಿ ಪ್ರಚಂಡ ಜನಸಮುದಾಯವು ಕೂಡಿತು. ಸುತ್ತಲಿನ ಹಳ್ಳಿಗಳ ಐದಾರು

ಅಲಾಬಿಯ ಮೇಳಗಳು ಸಂಗೀತದೊಡನೆ ನರ್ತಿಸಿ, ತಮ್ಮ ಕೌಶಲ್ಯವನ್ನು ತೋರಿ ಬೆಳ್ಳಿಯ ಕೈಯಾಳಗಳನ್ನು ಕಾಣಿಕೆಯಾಗಿ ಪಡೆದರು. ಬೆಳಗ್ಗೆ ಮುಂಜಾನೆ ಪಿಂಜಾರ ರಾಜೇಸಾಬನು ತಾನು ಹೊಸದಾಗಿ ಕಟ್ಟಿದ ಒಂದು ರಿವಾಯಿತನ್ನು ತನ್ನ ಮೇಳದವರೊಡನೆ ಹಾಡತೊಡಗಿದನು. ಅವನ ಪದದ ಪಲ್ಲವಿಯನ್ನು ಕೇಳಿದೊಡನೆಯೆ ಅಲ್ಲಿ ಕೂಡಿದ ಜನರು ಉತ್ಸಾಹದಿಂದ ಕೂಗಿ ಅವನಿಗೆ ಹುರುಪನ್ನು ಕೊಟ್ಟರು. ರಾಜೇಸಾಬನು ಆವೇಶಗೊಂಡು ದೊಡ್ಡ ದನಿಯಲ್ಲಿ,

"ಕೇಳೀರಿ ಕಲಿಯುಗದೊಳಗಿನ ನ್ಯಾಯದ ಚಮತ್ಕಾರಾ।
ಎತ್ತು ಸತ್ತರೇ ದಂಡಾ ಕೊಟ್ಟನು ಮಾಸ್ತರಾ"॥

ಎಂದು ತನ್ನ ಪಲ್ಲವಿಯನ್ನು ತಿರುತಿರುಗಿ ಹೇಳುತ್ತಾ ಒಂದು ತಾಸಿನವರೆಗೆ ತಾನು ಕಟ್ಟಿದ ಪದವನ್ನು ಪೂರ್ಣವಾಗಿ ಹಾಡಿ ತೋರಿಸಿದನು. ಸತ್ತ ಎತ್ತಿಗಾಗಿ ಉಮಚಗಿ ಮಾಸ್ತರರು ಒಂಬತ್ತು ವರಹಗಳನ್ನು ತೆತ್ತ ಕತೆಯೆಲ್ಲವೂ ಆ ರಿವಾಯತಿನಲ್ಲಿತ್ತು. ರಿವಾಯಿತು ರಸಭರಿತವಾಗಿಯೂ, ತಾಳಬದ್ಧವಾಗಿಯೂ ಇದ್ದುದರಿಂದ, ಅದು ಅಲ್ಲಿಯ ಜನರಿಗೆ ಬಹಳ ಮೆಚ್ಚುಗೆಯಾಯಿತು. ಲಿಂಗನಗೌಡರು ರಾಜೇಸಾಬನಿಗೆ ಬಂಗಾರದ ಕೈಯಾಳವನ್ನು ಕಾಣಿಕೆಯಾಗಿ ಕೊಟ್ಟರು.

ಮರುದಿವಸ ಬೊಮ್ಮೀಗೇರಿಯಲ್ಲಿ ಜನರಬಾಯಲ್ಲೆಲ್ಲಾ ಅದೇ ಹಾಡು.

"ಕೇಳೀರಿ ಕಲಿಯುಗದೊಳಗಿನ ನ್ಯಾಯದ ಚಮತ್ಕಾರಾ।
ಎತ್ತು ಸತ್ತರೇ ದಂಡಾ ಕೊಟ್ಟನು ಮಾಸ್ತರಾ॥

ಇದನ್ನು ಕೇಳಿ ನೊಂದುಕೊಂಡ ಬಸೆಟ್ಟೆಪ್ಪನೂ, ಒಡಕಣ್ಣನೂ ಮೋರೆಯೊಣಗಿಸಿಕೊಂಡು ಮನೆಯಲ್ಲಿಯೆ ಕುಳಿತುಕೊಳ್ಳಬೇಕಾಯಿತು ಇವರು ಬಿಟ್ಟರೇನು ಹಬ್ಬ ನಿಲ್ಲುತ್ತದೆಯೇ? ಹತ್ತು ತಾಸು ಏರುತ್ತಲೆ ಡೋಲಿಗಳು ಒಳ್ಳೆಯೆ ಉತ್ಸವದಿಂದ ಹೊರಟವು. ಡೋಲಿಗಳ ಮುಂದೆ ಸರಾಯಿಕುಡಿದು ಉನ್ಮತ್ತರಾದ ಜನರು ಬಳ್ಳಿಯನ್ನು ಕಟ್ಟಿಕೊಂಡು "ಕ್ಯಾಂಸಲ್ ಧುಂಸಲ್" ಎಂದು ಆರ್ಭಟಿಸಿ ಕೂಗುತ್ತಾ ನಡೆದರು.

ಮೆರವಣಿಗೆಯು ಒಡಕಣ್ಣನ ಮನೆಯ ಮುಂದೆ ಬಂತು, ಒಡಕಣ್ಣನೂ ಧುಂಡಿಭಟ್ಟರೂ ಕಾಲುಚಾಚಿಕೊಂಡು ಕಟ್ಟೆಯ ಮೇಲೆ ಕುಳಿತಿದ್ದರು. ಕ್ಯಾಂ

ಸಲ್ ಮೇಳದವರು ಧುಂಡಿಭಟ್ಟರನ್ನು ನೋಡಿ, "ಭಟ್ರ ಎತ್ತಿನ ಪದಾ ಹೇಳ್ತೇವಿ. ನಮಗ ಇನಾಂ ಕೊಡಬೇಕು" ಎಂದವರೆ,

"ಎತ್ತು ಸತ್ತರೇ ದಂಡಾ ಕೊಟ್ಟನು ಮಾಸ್ತರಾ" ಎಂದು ಕೂಗುತ್ತಾ ಕುಣಿಯತೊಡಗಿದರು. ಧುಂಡಿಭಟ್ಟರು ಗಾಬರಿಯಾಗಿ ಒಡಕಣ್ಣನ ಮನೆಯೊಳಗೆ ಓಡಿಹೋದರು. ಒಡಕಣ್ಣನು, "ಏ! ಸೇಂದಿಕುಡದು ಬಾಯಿಗೆ ಬಂಧಾಂಗ ಬೊಗಳಬ್ಯಾಡ್ರಿ ಬಡತಾ ತಿಂದೀರಿ ಸುಮ್ಮನ್ಸ ಮುಂದ ನಡೀರಿ" ಎಂದು ಅವರನ್ನು ಬೆದರಿಸಿದನು.

ಆಗ ಇಬ್ಬರು ಗಟ್ಟಿಗರು ತಮ್ಮ ಬಳ್ಳಿಯಿಂದ ಹೊರಗೆ ಬಂದು, ಒಡಕಣ್ಣನ ತೋಳುಗಳಲ್ಲಿ ಕೈಹಾಕಿ, ಅವನನ್ನು ಎಳೆದುಕೊಂಡು ಹೋಗಿ ತಮ ಬಳ್ಳಿಯಲ್ಲಿ ಕೂಡಿಸಿಕೊಂಡರು. ಒಬ್ಬನು ಒಡಕಣ್ಣನ ಮುಖಕ್ಕೆ ಹಳದಿ ಬಣ್ಣವನ್ನು ಬಡಿದನು. ಮೇಳದವರು ಅವನನ್ನು ಎತ್ತೆತ್ತಿ ಬಡಿಯುತ್ತಾ, ಕೇಕೆ ಹೊಡೆಯುತ್ತಾ "ಕ್ಯಾಂಸಲ್ ಧುಂಸಲ್" ಎಂದು ಮುಂದೆ ಸಾಗಿದರು. ಅವನ ಕಾಲುಗಳಿಗೆ ಕಲ್ಲು ಬಡಿದು ನೆತ್ತರ ಚಿಮ್ಮತೊಡಗಿತು. ಆದರೆ ಮೇಳದವರ ಅಪೂರ್ವವಾದ ಉತ್ಸಾಹದಲ್ಲಿ ಅವನನ್ನು ಕೇಳುವವರಾರು? ಕುಡುಕರ ಗುಂಪಿನಲ್ಲಿ ಸಿಕ್ಕ ಒಡಕಣ್ಣನು ಹಣ್ಣಾದನು. ಅಷ್ಟರಲ್ಲಿ ಲಿಂಗನಗೌಡರು ಓಲೆಕಾರರೊಂದಿಗೆ ಅಲ್ಲಿಗೆ ಬಂದು ಕ್ಯಾಂಸಲ್ ಮೇಳದವರಿಂದ ಅವನನ್ನು ಬಿಡಿಸಿಕೊಂಡರು. ನೋಡಲಿಕ್ಕೆ ನಿಂತ ಜನರು "ತಂತ್ರಕ್ಕೆ ತಕ್ಕ ಪ್ರಾಯಶ್ಚಿತ್ತ ಆತು" ಎಂದು ಕೂಗಹತ್ತಿದರು. ಒಡಕಣ್ಣನು ಮಾನಗೇಡಿಯಾಗಿ ಮನೆಯೊಳಗೆ ಸೇರಿದನು.

## ೧೯. ವಿವಾಹ ವಿಘಾತಕ ಮಂಡಳ.

ಮನುಷ್ಯನು ಎಂತಹನೆ ಇರಲಿ, ತನ್ನದೊಂದು ತಕ್ಕಡಿಹಿಡಿದು ಪರರ ಗುಣಾವಗುಣಗಳನ್ನೂ ತೂಗಿ, ಜನರ ಬೆಲೆ ಕಟ್ಟುತ್ತಿರುತ್ತಾನೆ. ಎಲ್ಲರ ತಕ್ಕಡಿಗಳೂ ಒಂದೆ ತೆರದವಲ್ಲ. ಒಂದು ಸರಿದಂಡಿಗೆಯದಿದ್ದರೆ ಮತ್ತೊಂದು ಕೊರೆದಂಡಿಗೆಯದು. ಚಿನ್ನತೂಗುವ ತಕ್ಕಡಿಯು ಗುಂಜಿತೂಕದ ಬೆಲೆಯನ್ನು ಕಟ್ಟುತ್ತದೆ; ಬೆಲ್ಲದ ತಕ್ಕಡಿಯು ಅಚ್ಛೇರಿನ ಬೆಲೆಯನ್ನು ಮುಚಿಬಿಡಬಹುದು. ಹೀಗೆ ಬೇರೆ ಬೇರೆ ಜನರು ಹಿಡಿದ ತಕ್ಕಡಿಗಳು ಭಿನ್ನ ಭಿನ

ವಾಗಿರುವುದರಿಂದ ಒಂದೇ ವಸ್ತುವಿನ ಬೆಲೆಯಲ್ಲಿ ಬಹಳ ಹೆಚ್ಚು ಕಡಮೆ ತೋರುವದು. ಆದರೂ ಪ್ರತಿಯೊಬ್ಬನು ತನ್ನ ತಕ್ಕಡಿಯೆ ಶ್ರೇಷ್ಠವೆಂದು ಭಾವಿಸಿಕೊಂಡು, ಅದರಲ್ಲಿಯೆ ಜನರನ್ನು ತೂಗಿ, ವಿಮರ್ಶಿಸುವನು. ನಮ ಒಡಕಣ್ಣನು ಹಿಡಿದದ್ದು ತಂತ್ರದತೂಕ. ತನಗಾದ ಅಪಮಾನಗಳೆಲ್ಲವೂ ಪರರ ತಂತ್ರಗಳಿಂದಲೆ ಆಗಿರುವವೆಂದು ಅವನನಂಬಿಗೆ. ಕ್ಯಾಂಪಲ್ ಮೇಳದವರು ತನನ್ನು ನುಗ್ಗುನುರಿ ಮಾಡಿದ್ದಕ್ಕೆ ಲಿಂಗನಗೌಡ ಶ್ರೀನಿವಾಸರಾಯರು ಹೂಡಿದ ತಂತ್ರಗಳೇ ಕಾರಣಗಳೆಂದು ಭಾವಿಸಿ, ಅವರಿಬ್ಬರಿಗೂ ತಕ್ಕ ಪ್ರತಿಹಿಂಸೆಮಾಡಬೇಕೆಂದು ಅವನು ಪಣತೊಟ್ಟನು.

ಅವನು ಕೇವಲ ಪಣತೊಟ್ಟು ಕುಳಿತುಕೊಳ್ಳುವ ವ್ಯಕ್ತಿಯಲ್ಲ. ಕೂಡಲೆ ಊರೊಳಗಿ ಉಂಡಾಡಿಗರೂ ದುರ್ವ್ಯಸನಿಗಳೂ ಆದ ಕೆಲಹುಡುಗರಿಗೆ ಆಶ್ರಯಕೊಟ್ಟನು. ಬರುಬರುತ್ತ ಶ್ರೀಪಾದಭಟ್ಟರ ಶಿಷ್ಯವರ್ಗವೂ ಈ ಪಂಗಡಕ್ಕೆ ಸೇರಿಕೊಂಡಿತು. ಇವರೆಲ್ಲರ ಸಹಾಯದಿಂದ ಅವನು "ವಿವಾಹ ವಿಘಾತಕ ಮಂಡಳ"ವೆಂಬ ಸಂಸ್ಥೆಯೊಂದನ್ನು ಸ್ಥಾಪಿಸಿದನು. ಈ ಮಂಡಳದ ಅಧ್ಯಕ್ಷನೂ ಮಂಡಳದ ವೆಚ್ಚವನ್ನು ಹೊರುವವನೂ ಒಡಕಣ್ಣನೆ. ಉಳಿದವರು ಸಭಾಸದರಾಗಿ ದುಡಿಯತಕ್ಕವರು. ವಿವಾಹ ವಿಚ್ಛೇದಕ್ಕೆ ಪ್ರಯತ್ನಿಸುವುದೂ, ಆಗತಕ್ಕ ಲಗ್ನಗಳಿಗೆ ವಿಘ್ನಗಳನ್ನುಂಟುಮಾಡುವದೂ ಈ ಮಂಡಳದ ಉದ್ದೇಶಗಳು. ಮಂಡಳದ ಸದಸ್ಯರಾಗತಕ್ಕವರಿಗೆ ಪ್ರವೇಶಧನವಿಲ್ಲ; ಅಲ್ಲದೆ ಒಡಕಣ್ಣನ ಮನೆಯೊಳಗಿನ ಮೃಷ್ಟಾನ್ನ ಭೋಜನಕ್ಕೂ ಅವರವರ ಚಟಗಳಿಗೆ ಬೇಕಾದ ಸಾಮಗ್ರಿಗಳಿಗೂ ಮುಕ್ತದ್ವಾರ! ಒಡಕಣ್ಣನ ತತ್ವಗಳಿಗೆ ಮಾತ್ರ ಅವರು ಒಪ್ಪಿಗೆಯನ್ನು ಕೊಡತಕ್ಕದ್ದು. ಮಂಡಳದ ಸದಸ್ಯರಿಗೆ ಇದಕ್ಕೂ ಹೆಚ್ಚಿನ ಸವಲತ್ತು ಇನ್ನೇನುಬೇಕು?

ಮಂಡಳದವರು ಮೊದಲನೆಯ ಪ್ರಯೋಗವು ಲಿಂಗನಗೌಡರ ಮೇಲೆಯೆ ನಡೆಯಿತು. ಲಿಂಗನಗೌಡರ ಮಗಳನ್ನು ವಿಠ್ಠಲಪುರದ ಮಲ್ಲನಗೌಡನಿಗೆ ಕೊಟ್ಟಿತ್ತು. ಅವಳು ಬಾಳುವೆ ಮಾಡಲಿಕ್ಕೆ ಹೋಗಿ ಆದೆ ಒಂದು ವರ್ಷವಾಗಿತ್ತು. ಮಲ್ಲನಗೌಡನು ಇಪ್ಪತ್ತು ವರ್ಷದ ತರುಣ. ಅವನಿಗೆ ತಂದೆತಾಯಿಗಳಾಗಲಿ, ಅಣ್ಣತಮ್ಮಂದಿರಾಗಲಿ ಇರಲಿಲ್ಲ. ಲಿಂಗನಗೌಡರೆ ಕೆಲವು ದಿನ ಅವನನ್ನು ಸಂರಕ್ಷಿಸಿ, ಬೊಮ್ಮೀಗೇರಿಯಲ್ಲಿ ನಾಲ್ಕು ಇಯತ್ತೆಯವರೆಗೆ ಕಲಿಸಿದ್ದರು.

ವಿವಾಹ ವಿಘಾತಕ ಮಂಡಳಿಯು ಇದನ್ನೆಲ್ಲ ಅರಿತುಕೊಂಡು, ಒಂದು ದಿವಸ ನಟ್ಟಿರುಳಲ್ಲಿ ಸಭೆಸೇರಿತು. ಲಿಂಗನಗೌಡರ ಮಗಳ ವಿವಾಹವಿಚ್ಛೆದ ಮಾಡುವ ವಿಷಯವನ್ನು ಒಡಕಣ್ಣನು ಸಭೆಯ ಮುಂದೆ ಮಂಡಿಸಿದನು. ಶ್ರೀಪಾದಭಟ್ಟರು ಲಿಂಗನಗೌಡರ ಉದ್ದಾಮತನವನ್ನು ಬಣ್ಣಿಸಿ, ಅವನಿಗೆ ಯೋಗ್ಯಶಾಸನ ಮಾಡಿಯೆ ತೀರಬೇಕೆಂದು ಹೇಳಿ ಒಡಕಣ್ಣನ ಸೂಚನೆಗೆ ಅನುಮೋದನವಿತ್ತರು. ಅವರ ಶಿಷ್ಯರು ತಲೆದೂಗಿದರು. ಬಳಿಕ ಸರ್ವಾನುಮತದಿಂದ ಠರಾವನ್ನು ಸಿದ್ಧಪಡಿಸಿದತು. ಭೀಮಣ್ಣನಾಯಕರು ಎರಡು ಪತ್ರಗಳನ್ನು ಬರೆದು ಒಬ್ಬ ಸಭಾಸದನ ಕೈಗೊಪ್ಪಿಸಿದರು. ಈ ಸಭಾಸದನು ಮಲ್ಲನಗೌಡನ ಸಂಗಡ ನಾಲ್ಕನೆಯ ಇಯತ್ತೆಯನ್ನು ಕಲಿತವನಾದ್ದರಿಂದ ಅವನೆ ಈ ಪತ್ರಗಳನ್ನು ಮಲ್ಲನಗೌಡನ ಮನೆಯಲ್ಲಿ ಇಟ್ಟುಬರಬೇಕೆಂದು ಗೊತ್ತಾಯಿತು. ಅವನಾದರೂ ಒಪ್ಪಿ ಮರುದಿನವೆ ಗುಪ್ತವಾಗಿ ಆ ಕೆಲಸವನ್ನು ನೆರವೇರಿಸಿಬಂದನು.

ಮುಂದೆ ಎರಡು ದಿನಗಳ ಮೇಲೊಮ್ಮೆ ಮಲ್ಲನಗೌಡನು ಊಟಮಾಡಿ ಎಲೆಗಳನ್ನು ತೆಗೆದುಕೊಳ್ಳಲಿಕ್ಕೆಂದು ಬಾಗಿಲಮಾಡದಲ್ಲಿ ಕೈಯಿಟ್ಟಾಗ ಅವನಿಗೊಂದು ಕಾಗದವು ಸಿಕ್ಕಿತು. ಅವನು ಸ್ವಲ್ಪ ಸಂಶಯಸ್ವಭಾವದನು. ಹೊರಗೆ ಬಂದು ಅದನ್ನು ಓದಿಕೊಂಡು ಕಣ್ಣು ಕೆಂಪಗೆ ಮಾಡಿದನು. ಸಂಶಯದಿಂದ ತನ್ನ ಹೆಂಡತಿಯ ಮಲಗುವ ಕೋಣೆಗೆ ಹೋಗಿ ಅಲ್ಲಿರುವ ಗೂಡುಗಳನ್ನೆಲ್ಲ ಹುಡುಕಲಾಗಿ, ಅವನಿಗೆ ಮತ್ತೊಂದು ಓಲೆಯು ಸಿಕ್ಕಿತು. ತನ್ನ ಹೆಂಡತಿಯು ಬೊಮ್ಮೀಗೇರಿಯಲ್ಲಿ ಬೇರೊಬ್ಬತರುಣನ ಸಂಗಡ ಸಂಬಂಧ ಬೆಳೆಯಿಸುವುದಕ್ಕೆ ತೊಡಗಿರುವಳೆಂದು ಅವನು ನಂಬಿದನು. ಕೂಡಲೆ ಅವನು ಬಳಗೆ ಹೋಗಿ ಊಟ ಮಾಡುತ್ತಿದ್ದ ಹೆಂಡತಿಯನ್ನು ಒದೆದು ಬಡಿಗೆಯಿಂದ ಹೊಡೆದನು. ಅವಳು ಚೀರತೊಡಗಿದಳು. ಮಲ್ಲನಗೌಡನು ಅವಳ ಬಾಯನ್ನು ಗಟ್ಟಿಯಾಗಿ ಹಿಡಿದು, "ಹಲ್ಲುಮುರದೇನು! ಅಳಬ್ಯಾಡ ಯಾರ ಬೆನ್ನ ಹತ್ತಿ ಓಡಿಹೋಗಬೇಕಂತ ಮಾಡೀದಿ ಹೇಳು?" ಎಂದು ಗದ್ದರಿಸಿದನು. ಏನನ್ನೂ ಅರಿಯುದ ಆಕೆಯು ಬೆದರಿ ಬೆಪ್ಪಾದಳು. ಗೌಡನು "ಇವುನೋಡು, ನಿನಗ ಬಳದಪತ್ರ ನನ್ನಕೈಗೆ ಸಿಕ್ಯಾವ. ಇದಕ್ಕ ಏನು ತಿಮ್ಮಪ್ಪ ನಿನಗ ಸಾಲೀಕಲಿಸಿದ್ದು? ನಿನ್ನ ಕಡಡು ತುಂಡುಮಾಡೇನು.

ಎಚ್ಚರಿಕೆ!" ಎಂದು ರೊಚ್ಚಿನಿಂದ ನುಡಿದನು. ಆಕೆ ತನಗೇನೂ ಗೊತ್ತಿಲ್ಲ ವೆಂದು ಎಷ್ಟುಪರಿಯಾಗಿ ಹೇಳಿಕೊಂಡರೂ ಅವನ ಸಂಶಯ ಪಿಶಾಚಿಯು ದೂರಾಗಲಿಲ್ಲ. ಅವನು ತನ್ನ ಹೆಂಡತಿಯ ಮೇಲೆ ಬಿಗುವಾದ ಕಾವಲಿಟ್ಟು, ತಾನು ಹೊರಗೆ ಹೋಗುವಾಗ ಅವಳನ್ನು ಒಳಗೆಹಾಕಿ, ಬಾಗಿಲಿಗೆ ಕೀಲಿ ಜಡಿದು ಹೋಗಹತ್ತಿದನು.

ಹೀಗಿರಲು ಒಂದು ದಿನ ಅವನಿಗೆ ಧುಂಡಿಭಟ್ಟರು ಬೆಟ್ಟಿಯಾದರು. ಅವನ್ನು ಈ ಬಗ್ಗೆ ಕೇಳಲಾಗಿ ಅವರು, "ಇದ್ದೂರವಾತು. ನಾವು ಹೆಚ್ಚಿಗೆ ಹೇಳಲಿಕ್ಕೆ ಬರೋದಿಲ್ಲ. ನಿಮ್ಮ ಮಾವನ ಮನೀ ಮಂದಿಚಾಳಿ ಚಲೋದಿಲ್ಲ. ನಿನ್ನ ವಸ್ತು ನೀ ಬಂದಿನಾಗ ಇಡು" ಎಂದು ಹೇಳಿದರು. ಎಂದ ಮೇಲೆ ಕೇಳುವುದೇನು? ಆ ಹೆಣ್ಣುಮಗಳಪಾಡು ಹೇಳಬಾರದು.

ಲಿಂಗನಗೌಡರು ಪಂಚಮಿಗೆ ಮಗಳನ್ನು ಕರೆಯಲಿಕ್ಕೆಂದು ವಿಠ್ಠಲ ಪುರಕ್ಕೆ ಬಂದರು. ಇವರ ಬಂದ ಸುದ್ದಿಯನ್ನು ಕೇಳಿ ಮಲ್ಲನಗೌಡನು ಹೆಂಡತಿಯನ್ನು ಒಳಗೆ ಹಾಕಿ, ತಲೆಬಾಗಿಲಿಗೇ ಬೀಗಹಾಕಿಕೊಂಡು ಬೇರೂರಿಗೆ ಹೋದನು. ಲಿಂಗನಗೌಡರು ಊರಲ್ಲಿ ವಿಚಾರಿಸಲಾಗಿ ನೆರೆ ಮನೆಯವರು ಪತ್ರಗಳಿಂದಾದ ಸಂಶಯವೆ ಮೊದಲಾದ ಕತೆಯನ್ನು ಅವರಿಗೆ ಹೇಳಿದರು. ಒಬ್ಬ ಹೆಣ್ಣುಮಗಳು, "ನಿಮ್ಮ ಮಗಳವ್ಯಾಗ ನಿಮಗೇನು ಅಂತ ಕ್ಕರಣ ಇದ್ದಾಗಿಲ್ಲ. ದಿನಾ ದಿನಾ ಬಡತ, ಬೆಯ್ಗಳಾ, ಮಣ್ಯಾಗಹಾಕಿ ಕೀಲಿಹಾಕೋದೂ-ಏನಿದು? ನಿಮ್ಮ ಮಗಳಿಗೆ ಹೊಟ್ಟೆಗೆ ಹಾಕೋ ಅಷ್ಟುಅನ್ನ ನಿಮ್ಮಲೇನು? ಅವಗ ಹೇಣ್ತಿ ಬ್ಯಾಡಾಗೇತಿ-" ಎಂದು ನುಡಿದಳು.

ಲಿಂಗನಗೌಡರು, ಅವಳ ಹಣೇಬಾರದಾಗಿದ್ದಂತೆ ಆಗಲಿ. ಬಾಳೇ ಗೇಡು ಮಾಡೋ ಕೆಲಸ ನನ್ನಿಂದ ಆಗದು" ಎಂದು ಬೊಮ್ಮೀಗೇರಿಗೆ ಮರಳಿಬಂದರು. ಒಡಕಣ್ಣನ ಕುತಂತ್ರ ಪ್ರಭಾವದಿಂದಲೆ ಹೀಗಾಯಿ ತೆಂಬುದ ಅವರಿಗೆ ತಿಳಿದುಬಂತು. ಕ್ಯಾಂಸಲ್ ಮೇಳದವರು ಅವನನ್ನು ತುಳಿದು ಕೊಲ್ಲುತ್ತಿದ್ದಾಗ ಜೀವಉಳಿಸಿಕೊಂಡದ್ದಕ್ಕೆ ಪ್ರತ್ಯುಪಕಾರ ಮಾಡಿ ದನು, ಮತ್ತೆ ಪ್ರಸಂಗ ಬಂದೀತು, ನೋಡೋಣವಂತೆ ಎಂದು ನಿರ್ಧರಿಸಿ ಕೊಂಡು ಅವರು ಒಡಕಣ್ಣನ ಪ್ರತಿಸ್ಪರ್ಧಿಗಳಾಗಿ ಕುಳಿತರು.

ಮಂಡಲದ ಎರಡನೆಯ ಪ್ರಯೋಗವು ಶ್ರೀನಿವಾಸರಾಯರ ಮೇಲಾಯಿತು. ರಾಯರ ಮಗಳ ಮದುವೆಗೆ ನಿಶ್ಚಯವಾಗಿತ್ತು. ಒಡಕಣ್ಣನು ಮಂಡಲಿಯ ಸದಸ್ಯರಿಂದ ವರನ ತಂದೆಗೆ, "ನೀವು ಗೊತ್ತುಮಾಡಿಕೊಂಡ ಕನ್ಯೆಗೆ ಗುಪ್ತಸ್ಥಳದಲ್ಲಿ ಬಿಳುಪುಹತ್ತಿದೆ." ಹುಡಿಗೆ ಅರಹುಚ್ಚಿ ವರದಕ್ಷಿಣೆಯ ಮಬ್ಬಿಗೆಬಿದ್ದು ನೀವು ಕೆಡಬೇಡರಿ. ವಿಚಾರಮಾಡಿ ವಿವಾಹಮಾಡಿಕೊಳ್ಳಿರಿ. ಎಂಬ ಪತ್ರವನ್ನು ಬರೆಯಿಸಿ, ಅಂಚೆಕಟ್ಟೆಯ ದ್ವಾರಾ ಕಳುಹಿದನು; ಊರವರ ಕಡೆಯಿಂದ ಪತ್ರದ ಸುದ್ದಿಯು ನಿಜವಿರುವುದೆಂಬುದನ್ನು ಪ್ರತ್ಯಕ್ಷವಾಗಿ ಹೇಳಿಸಿದನು.

ರಾಯರು ಮತ್ತವರನನ್ನು ಹುಡುಕಬೇಕಾಯಿತು. ಅವರು ಲಗ್ನಕ್ಕಾಗಿ ಸಿದ್ಧಪಡಿಸಿಟ್ಟ ಸಾಮಗ್ರಿಗಳೆಲ್ಲ ವ್ಯರ್ಥವಾಗಿ ಹಾಳಾದದ್ದನ್ನು ಕಂಡು ಒಡಕಣ್ಣನಿಗೆ ಪರಮಾನಂದವಾಯಿತು. ಮುಂದೆ ಕೆಲದಿನಗಳ ಮೇಲೆ ಒಡಕಣ್ಣನ ತಂತ್ರದಿಂದಲೆ ವರನ ಬಿಡುಗಡೆಯಾಯಿತೆಂಬುದನ್ನು ತಿಳಿದು ಶ್ರೀನಿವಾಸರಾಯರೂ ಅವನ ವೈರಿಗಳಾದರು. ಕಲ್ಲಂಭಟ್ಟರ ಮಗನ ವಿವಾಹ ವಿಘಾತ ಮಾಡಲಿಕ್ಕೆ ಒಡಕಣ್ಣನು ತನ್ನ ಮಂಡಳಿಯೊಡನೆ ಮಾಡಿದ ಸಾಹಸವು ಮಾತ್ರ ಕೈಗೂಡಲಿಲ್ಲ. ಆದರೂ ಅವನು ತನ್ನ ಕಾಯಕವನ್ನು ಬಿಡಲಿಲ್ಲ. ಇವರ ಉಪಟಳದಿಂದ ಬೊಮ್ಮೀಗೇರಿಯಲ್ಲಿ ಮದುವೆಯಾಗುವುದೆ ದುಸ್ತರವಾಯಿತು. ಊರಿನ ಜನರು ಹೊಟ್ಟೆಯುರಿದು ಮಂಡಲದ ಸದಸ್ಯರಿಗೆ ಉಪಮಾನಮಾಡತೊಡಗಿದರು. ತಾವು ಆಜನ್ಮಬ್ರಹ್ಮಚಾರಿಗಳಾಗಿ ಉಳಿಯುವ ಸಮಯ ಬಂದೀತೆಂಬ ಭಯವೂ ಸದಸ್ಯರಿಗೆ ಉಂಟಾಗತೊಡಗಿತು. ಹೀಗಾಗಿ ವಿವಾಹ ವಿಘಾತಕ ಮಂಡಲಿಯಿದ ಎಷ್ಟೋ ಸದಸ್ಯರು ಸಿಡಿದು ಹೋದರು. ಒಡಕಣ್ಣನು ಮಾತ್ರ ಹಿಂಜರಿಯದೆ ತನ ಹಸ್ತಕರಾದ ಶ್ರೀಪಾದಭಟ್ಟರು, ಅವರು ಶಿಷ್ಯರು, ಗುರುನಾಥ ದೀಕ್ಷಿತರ ಮೊದಲಾದವರಸಹಾಯದಿಂದ ತಾನು ಕೈಕೊಂಡ ಕಾರ್ಯವನ್ನು ಮುಂದರಿಸುತ್ತಲೆ ಇದ್ದನು.

## ೨೦. ಅನ್ಯಾಯದ ದುಡ್ಡು.

ಒಡಕಣ್ಣನ ಮುಂದೆ ಸಮಸ್ಯೆಯೊಂದು ಉದ್ಭವಿಸಿತು. ಅವನ ಮೂರನೆಯ ಹೆಂಡತಿ ಸಾವಿತ್ರಿಯು ಮೈನೆರೆದು ಹತ್ತು ವರ್ಷವಾಗಿದ್ದರೂ

ಅವಳಿಗೆ ಮಕ್ಕಳಾಗಿದ್ದಿಲ್ಲ. ಚಂದ್ರಾವತಿಬಾಯಿಯವರು ಅವಳಿಗೆ ಬಂಜೆ ಯೆಂದು ಹಂಗಿಸತೊಡಗಿದ್ದರು. ಒಡಕಣ್ಣನಿಗೆ ಇನ್ನೊಂದು ಲಗ್ನ ಮಾಡ ಬೇಕೆಂದು ಕನ್ನಿಕೆಯ ಶೋಧಕ್ಕೂ ಆರಂಭಿಸಿದರು. ಸವತಿಯ ಮೇಲೆ ಹೆಣ್ಣು ಕೊಡುವುದಕ್ಕೆ ಜನರು ಹಿಂಜರಿದರೆ ಆಶ್ಚರ್ಯವಲ್ಲ. ಅಲ್ಲದೆ ಒಡಕ ವಯಸ್ಸಾದರೂ ನಲವತ್ತಕ್ಕೆ ಏಕ್ಕಿತ್ತು. ತಮ್ಮ ಮನೆತನವು ಮುಂದೆ ನಡೆ ಯಬೇಕೆಂಬ ಇಚ್ಛೆಯು ಒಡಕಣ್ಣನಿಗೂ ಆಯಿತು. ಆದರೆ ತಾರುಣ್ಯದಲ್ಲಿ ಅವಿವೇಕತನದಿಂದ ನಡೆದ ಅವನ ದೇಹಸ್ಥಿತಿಯು ಗೆದ್ದಲು ಹತ್ತಿದ ಗಿಡದಂತೆ ಆಗಿತ್ತು. ಸಾವಿತ್ರಿಯ ಮೇಲೆ ಒಡಕಣ್ಣನಿಗೆ ಪ್ರೀತಿಯೂ ಇರಲಿಲ್ಲ. ಇನ್ನೊಬ್ಬ ಸುಂದರಿಯನ್ನು ಮದುವೆಯಾದರೆ ಮಕ್ಕಳಾಗಬಹುದೆಂದು ಅವನು ಭಾವಿಸಿದನು. ಚಂದ್ರಾವತಿಬಾಯಿಯವರ ಯೌವನವೂ ಗತಿಸಿತ್ತು. ಅವರಿಗೀಗ ಮೊಮ್ಮಕ್ಕಳನ್ನು ನೋಡಬೇಕೆಂಬ ಲವಲವಿಕೆ. ಆದರೆ ಮಕ್ಕ ಳಾಗುವ ಬಗೆಹೇಗೆ? ಒಡಕಣ್ಣನಂತೂ ಸಾವಿತ್ರಿಯ ಸಂಬಂಧವನ್ನೆ ಮಾಡು ವುದಿಲ್ಲವೆಂದು ಆಣೆ ಮಾಡಿದ್ದನು. ಚಂದ್ರಾವತಿಬಾಯಿಯವರ ಇಚ್ಛೆಯು ಪೂರ್ಣವಾಗಬೇಕಾದರೆ ಒಡಕಣ್ಣನಿಗೆ ಇನ್ನೊಂದು ಲಗ್ನ ಮಾಡದೆ ಗಂತ್ಯಂತರ ವಿರಲಿಲ್ಲ. ಇದಕ್ಕಾಗಿ ಅವರಿಬ್ಬರೂ ಬಹಳ ವಿಚಾರಮಾಡಿ ಕೊನೆಗೊಂದು ನಿರ್ಧಾರಕ್ಕೆ ಬಂದರು.

ಆಶ್ವಿಜ ಶುದ್ಧ ಪತಿಪದೆಯಿಂದ ಮಹಾನವಮಿಯವರೆಗೆ ಒಡಕಣ್ಣನ ಮನೆಯಲ್ಲಿ ನವರಾತ್ರಿಯ ಉತ್ಸವವು ಪ್ರತಿವರ್ಷ ನಡೆಯುತ್ತಿತ್ತು. ಮನೆಯ ಹಿರಿಯರು ಎಂಟು ದಿವಸ ಉಪವಾಸ ಮಾಡುವುದು ಅವರ ಮನೆಯ ಸಂಪ್ರದಾಯ. ಇಲ್ಲಿಯವರೆಗೆ ಚಂದ್ರಾವತಿಬಾಯಿಯವರೆ ಉಪವಾಸ ಮಾಡುತ್ತ ಬಂದಿದ್ದರು. ಈ ವರ್ಷ ಅವರು ಬೇನೆಯ ಸೋಗುಹಾಕಿ— ಕೊಂಡು ಮಲಗಿಬಿಟ್ಟರು. ಸಾವಿತ್ರಿಗೆ ನವರಾತ್ರಿಯ ಉಪವಾಸದ ಪಾಳೆಯು ಬಂತು. ಬಾಯಿಯವರು ಹಾಲು, ಸಕ್ಕರೆ, ತುಪ್ಪಗಳಲ್ಲಿ ಉತ್ತಮವಾದ ಪಕ್ವಾನ್ನಗಳನ್ನು ಮಾಡಿ, ಅವುಗಳ ಮೇಲೆ ಉಪವಾಸಮಾಡುತ್ತಿದ್ದರು. ಸಾವಿತ್ರಿಗೆ ಅರ್ಧಸೇರು ಹಾಲಿಗಿಂತ ಹೆಚ್ಚಿಗೇನೂ ದೊರೆಯಲಿಲ್ಲ. ಅವ ಳೆಂದೂ ಹೀಗೆ ಉಪವಾಸ ಮಾಡಿದವಳಲ್ಲ. ಮೂರು ದಿನಗಳಲ್ಲಿ ಅವಳು

ಬಹಳ ನಿತ್ರಾಣಳಾದಳು. ನಾಲ್ಕನೆಯದಿನ ಅವಳಿಗೆ ಜ್ವರ ಹುಟ್ಟಿದವು. ಆದರೂ ಉಪವಾಸವನ್ನು ಮುರಿಯುವಂತಿಲ್ಲ. ವ್ರತವಲ್ಲವೆ?

ಲಲಿತಾ ಪಂಚಮಿಯ ದಿವಸ ಮನೆಯವರೆಲ್ಲರೂ ವೃಷ್ಟಾನ್ನವನ್ನುಂಡು ತೇಕುತ್ತಿದ್ದಾಗ ಸಾವಿತ್ರಿಯು ಹಾಲನ್ನು ಸಹ ತೆಗೆದುಕೊಳ್ಳದೆ ಕೋಣೆಯಲ್ಲಿ ಒರಗಿಕೊಂಡಿದ್ದಳು. ನಾಲ್ಕು ತಾಸು ರಾತ್ರಿಯ ಹೊತ್ತಿಗೆ ಚಂದ್ರಾವತಿ ಬಾಯಿಯವರು ಹಾಲಿನ ಬಟ್ಟಲವನ್ನು ಹಿಡಿದುಕೊಂಡು ಬಂದು ಸೊಸೆಯ ಮೇಲೆ ಬಹು ಮಮತೆಯನ್ನು ತೋರಿದರು. ಸಾವಿತ್ರಿಯು ಆ ಹಾಲನು ಕುಡಿಯಲಿಕ್ಕೆ ಒಪ್ಪಲಿಲ್ಲ. ಚಂದ್ರಾವತಿಬಾಯಿಯವರು ಒಡಕಣ್ಣನನ್ನು ಕರೆತಂದರು. ಅವನು, "ಕಟ್ಟಾ ಉಪಾಸಮಾಡೋದು ನಮ್ಮ ಮನೀ ಸಂಪ್ರದಾಯ ಅಲ್ಲ. ನೀ ಹಾಲು ಕುಡೀಲಿಕ್ಕೆಬೇಕು—" ಎಂದು ಬೆದರಿಸಿದನು. ಆದರೂ ಅವಳು ಕುಡಿಯಲಿಲ್ಲ. ಆಗ ಒಡಕಣ್ಣನು ಸಾವಿತ್ರಿಯ ಕೈಗಳನ್ನೂ, ತಲೆಯನ್ನೂ ಗಟ್ಟಿಯಾಗಿ ಹಿಡಿದನು; ಚಂದ್ರಾವತೀಬಾಯಿಯವರು ಅವಳ ಬಾಯಲ್ಲಿ ಬಲತ್ಕಾರದಿಂದ ಹಾಲು ಹೊಯ್ದು, ಅವಳ ಮೂಗುಬಾಯಿಗಳನ್ನು ಗಟ್ಟಿಯಾಗಿ ಹಿಡಿದುಕೊಂಡರು. ಸಾವಿತ್ರಿಯು ಆ ಹಾಲನ್ನು ಗುಟುಕರಿಸಿದ ಬಳಿಕ ಅವರಿಬ್ಬರೂ ಹರಟೆ ಹೊಡೆಯುತ್ತ ಹೊರಗಿನ ಕೋಣೆಯಲ್ಲಿ ಕುಳಿತುಕೊಂಡರು.

ಒಂದು ತಾಸಿನ ಮೇಲೆ ಸಾವಿತ್ರಿಯ ಹೊಟ್ಟೆಯಲ್ಲಿ ಭಯಂಕರವಾದ ಝುಳವಾಗಹತ್ತಿದ್ದರಿಂದ ಅವಳು ನಡುಮನೆಗೆ ಬಂದು ಹೊರಳಾಡ ತೊಡಗಿದಳು. ಬೆಳಗಾಗುವದರೊಳಗೆ ಅವಳು ಅಶಕ್ತಳಾಗಿ ಹೋಗಿದ್ದಳು. ಕ್ಷಣ ಕ್ಷಣಕ್ಕೆ ಹೊಟ್ಟೆಯಲ್ಲಿಯ ಉರಿ ಹೆಚ್ಚುತ್ತಿದ್ದುದರಿಂದ ಅವಳು ಸಂಕಟಪಟ್ಟು ಚೀರಹತ್ತಿದಳು. ಒಡಕಣ್ಣನ ಹಿತ್ತಲಲ್ಲಿ ಹೂವು ಹರಿಯಲಿಕ್ಕೆಂದು ಬಂದ ಹತ್ತು ವರ್ಷದ ಹುಡಿಗೆಯೊಬ್ಬಳು ಆ ದನಿಯನ್ನು ಕೇಳಿ, ಒಳಗೆ ಬಂದು ಸಾವಿತ್ರಿಯನ್ನು ಕಂಡಳು. ಸಾವಿತ್ರಿಯು ಆಹುಡುಗಿಗೆ, "ತಂಗೀ ನೀ, ಜಡತ ನಮ್ಮನಿಗೆ ಹೋಗಿ ಸಾವಿತ್ರಿ ಸಾಯ್ತಾಳ ಅಂತ ನಮ್ಮವ್ವಗ ತಿಳಿಸು" ಎಂದು ಸಣ್ಣದನಿಯಿಂದ ಹೇಳಿಕೊಂಡಳು. ಚಂದ್ರಾವತಿಬಾಯಿಯರೂ ಒಡಕಣ್ಣನೂ ಅಲ್ಲಿದ್ದಿಲ್ಲ.

ಸಾವಿತ್ರಿಯ ತಾಯಿಯೂ ಅಜ್ಜಿಯೂ ಲಗುಬಗೆಯಿಂದ ಧಾವಿಸಿ ಬರುವಷ್ಟರಲ್ಲಿ ಚಂದ್ರಾವತಿಬಾಯಿಯವರು ಬಾಗಿಲಲ್ಲಿ ಅವರನ್ನು ಅಡ್ಡಗಟ್ಟಿ ನಿಂತಿದ್ದರು. ಆದರೆ ಅವರಿಬ್ಬರೂ ಸಂತಾಪದಿಂದ ಬಾಯಿಯವರನ್ನು ದೂಡಿ ಕೆಳಕ್ಕೆ ಕೆಡಹಿ, ಒಳಗೆ ಹೊಕ್ಕರು. ಮಗಳ ಸ್ಥಿತಿಯನ್ನು ಕಂಡು ಅವರು ಹೌಹಾರಿದರು. ಕೂಡಲೆ ಸಾವಿತ್ರಿಯನ್ನು ಎತ್ತಿಕೊಂಡು ತಮ್ಮ ಮನೆಗೊಯ್ದರು. ಸಾವಿತ್ರಿಯು "ನಿನ್ನೆ ರಾತ್ರಿ ಅತ್ತೆಯರೂ ಅವರೂ ಕೂಡಿ ಜುಲುಮಿಯಿಂದ ನನಗ ವಿಷಕುಡಿಸಿದರು. ಇನ್ನ ನಾ ಬದಕೋ ದಿಲ್ಲ. ಅಯ್ಯೋ, ಹೊಟ್ಯಾಗ ಉರಿಬಿದ್ದದ. ಏನು ಮಾಡಲಿ?" ಎಂದು ಹೊರಳಾಡಹತ್ತಿದಳು. ಹಾ ಹಾ ಎನ್ನುವುದರಲ್ಲಿ ಸುದ್ದಿ ಊರಲ್ಲಿ ಹಬ್ಬಿತು. ಲಿಂಗನಗೌಡರೂ, ಶ್ರೀಪಾದರಾಯರೂ ಶಾನುಭೋಗರ ಮನೆಗೆ ಬಂದು, ಅಳುತ್ತ ಕುಳಿತ ನೀಲಕಂಠರಾಯರನ್ನು ನೋಡಿ, "ಶಾನುಭೋಗರ, ಇದು ಅತಗೊಂತ ಕೂಡೋ ಹೊತ್ತಲ್ಲ. ಮೊದಲಿಗೆ ನಿಮ್ಮ ಸೊಸೀ ಜೀವಾ ಉಳಸಬೇಕು. ಅಲ್ಲಿಂದ ಆ ನೀಚನ ಸಮಾಚಾರ ತಗೊಳ್ಳೊಣಂತ" ಎಂದು ಲಗುಬಗೆಯಿಂದ ಚಕ್ಕಡಿಯ ಏರ್ಪಾಟುಮಾಡಿ ಸಾವಿತ್ರಿಯನ್ನು ಅದರಲ್ಲಿ ಮಲಗಿಸಿದರು. ಶ್ರೀನಿವಾಸರಾಯರೂ ನೀಲಕಂಠರಾಯರೂ ಚಕ್ಕಡಿಯ ಹಿಂದಿನಿಂದ ಓಡುತ್ತ ಎರಡುತಾಸಿನಲ್ಲಿ ಅವರು ಹತ್ತುಮೈಲು ಸಾಗಿ ದವಾಖಾನೆಗೆ ಬಂದರು.

ಡಾಕ್ಟರರು ಅವಳನ್ನು ಪರೀಕ್ಷಿಸಿ, "ವಿಷ ಕರಳಿಗೆ ಹತ್ತಿದೆ. ನನ್ನ ಕೈಯಿಂದಾದ ಪ್ರಯತ್ನ ಮಾಡತೀನಿ. ಬದಕಿಸುವ ಭರವಸಾ ಕೊಡಲಾರೆ ಎಂದು ಔಷಧೋಪಚಾರ ನಡಿಯಿಸಿದರು. ಲಿಂಗನಗೌಡರು ಕೂಡಲೆ ಫೌಜದಾರರಿಗೆ ಸುದ್ದಿಕೊಟ್ಟು ಕರೆತಂದರು. ಇತರ ಅಧಿಕಾರಿಗಳೂ ಬಂದರು. ಅಷ್ಟರಲ್ಲಿ ಸಾವಿತ್ರಿಯು ಬಹಳ ನಿಶ್ಪ್ರಾಣಳಾಗಿದ್ದಳು; ಆದರೂ ಕುಗ್ಗಿದ ದನಿಯಲ್ಲಿ "ಅತ್ತೆಯವರೂ ಅವರೂ ಕೂಡಿ ಹಾಲಾಗ ಏನೋ ಹಾಕಿ, ನನ್ನ ಕೈಹಿಡಿದು ಜುಲುಮೀಯಿಂದ ಕುಡಿಸಿದರು. ಅದು ಬಹಳ ಕಹಿಇತ್ತು. ಕುಡಲೆ ಕೂಡಲೆ ಹೊಟ್ಯಾಗ ಕಸವಿಸಿಯಾಗಲಿಕ್ಕೆ ಹತ್ತಿತು." ಎಂದು ಹೇಳಿ ಮುಗಿಸಿದಳು.

ಮುಂದೆ ಅರ್ಧತಾಸಿನಲ್ಲಿ ಅವಳ ಪ್ರಾಣವೂ ಹಾರಿತು. ಡಾಕ್ಟರರು ಹೆಣವನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು, ಹೊಟ್ಟೆಯನ್ನು ಕೊಯ್ದರು

ವಿಷದ ಕುಪ್ಪಿಯನ್ನು ತೆಗೆದಿಟ್ಟನಂತರ ಅಂತ್ಯ ಸಂಸ್ಕಾರಕ್ಕೆ ಅಪ್ಪಣೆ ಯಿತ್ತರು. ಲಿಂಗನಗೌಡರೆ ಮೊದಲಾದರು ಸಾವಿತ್ರಿಯ ತಾಯಿ ಅಜ್ಜಿಯ ವರನ್ನು ಸಮಾಧಾನಗೊಳಿಸುತ್ತಾ ಬೊಮ್ಮೇಗೇರಿಗೆ ಮರಳಿದರು.

ಲಿಂಗನಗೌಡರೂ ಶ್ರೀನಿವಾಸರಾಯರೂ ತನ್ನ ಹೆಂಡತಿಯನ್ನ ದವಾ ಖಾನೆಗೆ ಕರೆದೊಯ್ದ ಸುದ್ದಿಯನ್ನು ಕೇಳಿ ಒಡಕಣ್ಣನು ಗಾಬರಿಯಾದನು. ನಡುರಾತ್ರಿಯಲ್ಲಿ ಅವನೂ ಚಂದ್ರಾವತಿಬಾಯಿಯವರೂ ಬೊಮ್ಮೇಗೇರಿ ಯನ್ನು ಬಿಟ್ಟು ಯಾರಿಗೂ ತಿಳಿಯದಂತೆ ಹೊರಟುಹೋದರು. ಮುಂದೆ ಎರಡು ದಿನಗಳಲ್ಲಿ ಫೌಜದಾರರು ಅವರಿಬ್ಬರ ಮೇಲೆ ವಾರಂಟನ್ನು ಹಿಡಿದು ಕೊಂಡು ಬಂದರು. ಲಿಂಗನಗೌಡರು ಬಹಳ ದಕ್ಷತೆಯಿಂದ ಒಡಕಣ್ಣ ನನ್ನೂ ಹುಡುಕಹತ್ತಿದರು. ಆದರೆ ಎಲ್ಲಿಯೂ ಅವನ ಸುಳಿವು ಹತ್ತಲಿಲ್ಲ ಅವನಿಗೆ ಕೈಬೇಡಿಯನ್ನು ತೊಡಿಸಿ, ಊರಲ್ಲಿ ಮೆರವಣಿಗೆ ಮಾಡಿಸಬೇ ಕೆಂದಿದ್ದ ಅವರ ಪರೀಕ್ಷೆಯು ಪೂರ್ಣವಾಗಲಿಲ್ಲ.

ಒಡಕಣ್ಣನು ಗುಪ್ತವಾಗಿ ಡಾಕ್ಟರರ ಬಳಿಗೆ ಹೋಗಿ, ಅವರೆದುರಿಗೆ ಒಂದು ಸಾವಿರ ರೂಪಾಯಿಗಳನ್ನು ಸುರಿದು, ತನ್ನನ್ನು ಕಾಪಾಡಬೇಕೆಂದ ಅವರ ಕಾಲುಕಟ್ಟಿಕೊಂಡನು. ಡಾಕ್ಟರರು ಯಥಾಶಕ್ತಿಯಾಗಿ ಯತ್ನಮಾ ಡುವ ವಚನವಿತ್ತರು. ಮುಂದೆ ಅವನು ವಕೀಲರನ್ನು ಕರೆದುಕೊಂಡು ಮಾಮಲೇದಾರ ಕಡೆಗೆ ಬಂದು, ಜಾಮೀನನ್ನು ಕೊಟ್ಟು ಬಿಡುಗಡೆಯಾದನು. ಈ ವ್ಯಾಜ್ಯವು ಮುಂದೆ ಒಂದು ವರ್ಷದವರೆಗೆ ನಡೆಯಿತು. ಒಡಕಣ್ಣನು ಹತ್ತುಸಾವಿರ ರೂಪಾಯಿಗಳನ್ನು ತೆತ್ತು ಬಂದ ಕುತ್ತಿನಿಂದ ಪಾರಾದನು.

ಶ್ರೀನಿವಾಸರಾಯರೂ ಲಿಂಗನಗೌಡರೂ, ಆ ಮೂರ್ಖನಿಗೆ ತಕ್ಕ ಪ್ರಾಯಶ್ಚಿತ್ತವಾಗಲಿಲ್ಲವೆಂದು ಚಡಪಡಿಸಿದರು. ಆದರೂ ಅವನು ಅನ್ಯಾ ಯದಿಂದ ಗಳಿಸಿದ ದುಡ್ಡು ಅಪವ್ಯಯವಾದದ್ದೇನು ಅರಿದಲ್ಲವೆಂದು ಸಮಾ ಧಾನ ಹಚ್ಚಿಕೊಂಡರು.

## ೨೧. ಕನ್ಯಾವರ ಸಂಘಟನ

ನ್ಯಾಯಸ್ಥಾನದಲ್ಲಿ ಒಡಕಣ್ಣನು ನಿರ್ದೋಷಿಯೆಂದು ನಿರ್ಣಯವಾದರೂ ಜನಯು ಮಾತ್ರ ಅವನನ್ನು ಅಪರಾಧಿಯೆಂದೇ ಎಣಿಸಿತು. ಹೆಂಗಳೆಯ

ರಂತೂ ಒಡಕಣ್ಣನ ಕಲ್ಲೆದೆಯನ್ನು ಕಟುತರವಾಗಿ ಹಳಿಯುತ್ತ ಲಟಕು ಮುರಿಯತೊಡಗಿದರು. ಚಂದ್ರಾವತೀಬಾಯಿವರು ಮನೆಬಿಟ್ಟು ಹೊರಬೀಳ ದಂತಾಯಿತು. ಅವರಿಗೆ ಮುಪ್ಪಿನಕಾಲಕ್ಕೆ ಮತ್ತೆ ಮನೆಗೆಲಸಗಳು ಗಂಟು ಬಿದ್ದವು. ಒಡಕನಿಗೆ ಇನ್ನೊಂದು ಮದುವೆ ಮಾಡುವವರೆಗೆ ತಮ್ಮ ಬಣಿಯು ತಪ್ಪದೆಂದು ಗೋಳಿಟ್ಟರು. ಶ್ರೀಪಾದಭಟ್ಟರೂ ಭೀಮಣ್ಣನಾಯಕರೂ ಒಡಕ ಣ್ಣನ ವಿವಾಹದಬಗ್ಗೆ ಯತ್ನಿಸತೊಡಗಿದರು. ಹೆಣ್ಣುಕೊಡಲಿಕ್ಕೆ ಬಂದವರು ವರನ ದುರ್ವರ್ತನೆಯನ್ನು ಕೇಳಿ, ಬಂದದಾರಿಗೆ ಸುಂಕವಿಲ್ಲೆಂದು ಹಿಂದಿರುಗಿ ಹೋಗುತ್ತಿದ್ದರು. ಸಾವಿತ್ರಿಯು ಸತ್ತು ಮೂರುವರ್ಷಗಳಾದರೂ ಒಡಕಣ್ಣನಿಗೆ ಹೆಣ್ಣು ದೊರೆಯಲಿಲ್ಲ. ಶ್ರೀಪಾದಭಟ್ಟರು ಕನ್ಯಾಶೋಧಕ್ಕಾಗಿ ಗುಪ್ತವಾಗಿ ನಡೆ ಯಿಸಿದ ಸಾಹಸಗಳೆಲ್ಲವೂ, ವಿವಾಹ ವಿಘಾತಕಮಂಡಲಿಯಿಂದ ಸಿಡಿದು ಸದ ಸ್ಯರ ಪ್ರಯತ್ನಗಳ ಫಲವಾಗಿ ನಿರರ್ಥಕವಾದವು. ಕೊನೆಗೆ ಒಡಕಣ್ಣನು ಪಟ್ಟಣಗಲ್ಲಿಯ ಕನ್ಯಾವರ ಸಂಘಟನಾ ಮಂಡಳದವರ ಬೆನ್ನು ಬೀಳಬೇಕಾ ಯಿತು. ಆ ಮಂಡಳದವರ ಪ್ರಯತ್ನದಿಂದ ಅವನ ನಾಲ್ಕನೆಯ ಲಗ್ನವು ಬನಶಂಕರೀ ಕ್ಷೇತ್ರದಲ್ಲಿ ಬಹು ಗುಪ್ತವಾಗಿ ಸಾಂಗವಾಯಿತು.

ಈ ನಾಲ್ಕನೆಯ ಹೆಂಡತಿಯ ಹೆಸರು ಶಶಿಕಲೆ. ಅವಳು ಯದ್ದೊಟ್ಟಿಯ ದೇಸಾಯಿ ಸದಾಸಿವರಾಯರು ಮಗಳು ಸದಾಸಿವರಾಯರು ತಾರುಣ್ಯದಲ್ಲಿ ವೇಶಾಂಗನೆಯರ ವಿಹಾರದಲ್ಲಿಯೂ ತ್ರಿಸುಪರ್ಣದ ವ್ಯಾಸಂಗದಲ್ಲಿಯೂ, ಹಿರಿಯರು ಗಳಿಸಿಟ್ಟ ಸಂಪತ್ತನೆಲ್ಲ ಸೂರೆಮಾಡಿ, ಹೊಲಮನೆಗಳನ್ನು ಸಾಹು ಕಾರರ ಸ್ವಾಧೀನ ಮಾಡಿದರು. ಮುಂದೆ ಅಶನಕ್ಕೆ ಅಭಾವವಾಗಲು ವಿಜಯ ಪುರಕ್ಕೆ ಬಂದು, ಅಲ್ಲಿ ಮಾಣಿಕಜಿಯವರ ಅಂಗಡಿಯಲ್ಲಿ ಕಾರಕೂನರಾಗಿ ಕೆಲಸಮಾಡತೊಡಗಿದರ ಶಶಿಕಲೆಯು ವಿಜಯಪುರದಲ್ಲಿಯೆ ಹುಟ್ಟಿಬೆಳೆದಳು ವಿಜಯಪುರದ "ಕನ್ಯಾವರ ಸಂಘಟನಾ ಮಂಡಳ" ದವರು ಮಾಡಿದ ಅವಳ ವರ್ಣನೆಯಲ್ಲಿ ಕೆಲುಭಾಗವನ್ನು ನೋಡಬಹುದು:—

"ಮೈ ಬಣ್ಣ ನಸುಗೆಂಪು. ಸುಂದರವಾದ ಮುಖ, ಚಂಚಲವಾದ ಕಣ್ಣು. ಚಪಲವಾದ ಕೈಕಾಲುಗಳು. ಚುರುಕುಬುದ್ಧಿ. ಬಹಳ ಧೈರ್ಯಶಾಲಿನಿ. ಚೆನ್ನಾಗಿ ಓದು ಬರೆಹ ಬಲ್ಲವಳು. ಈಸುವ ಸ್ಪರ್ಧೆಯಲ್ಲಿ ಪಾರಿತೋಷಕ ವನ್ನು ಪಡೆದಿದ್ದಾಳೆ...."

ಮಗಳು ಬೆಳೆದು ದೊಡ್ಡವಳಾದಳು. ರಾಯರು ಅಲ್ಲಲ್ಲಿ ವತನದಾರರ ವರಗಳನ್ನು ಹುಡುಕಿದರು. ವರದಕ್ಷಿಣೆಯ ಭೂತವು ಅವರನ್ನು ಬಾಧಿಸ ಹತ್ತಿದ್ದರಿಂದ ಕೊನೆಗೆ ಬೇಸತ್ತು ಅವರು ಈ ಕನ್ಯಾವರಸಂಘಟನಾ ಮಂಡ ಳದವರ ಮರೆಹೊಕ್ಕರು. ಎರಡು ಸಾವಿರಕ್ಕಿಂತ ಹೆಚ್ಚಿಗೆ ಉತ್ಪನ್ನವಿರುವ ಇನಾಮುದಾರರಿಗೆ ಹೇಗಾದರೂ ಮಾಡಿ ತಮ್ಮ ಮಗಳನ್ನು ನಿಶ್ಚಯಮಾಡಿ ಕೊಟ್ಟರೆ ಮಂಡಳದವರಿಗೆ ಒಂದು ನೂರು ರೂಪಾಯಿ ಪಾರಿತೋಷಕವನ್ನು ಕೊಡುವೆನೆಂದು ವಚನಕೊಟ್ಟು ಹತ್ತು ರೂಪಾಯಿ ಸಂಚಕಾರವನ್ನು ಕೂಡ ಅವರ ಕೈಯಲ್ಲಿಟ್ಟರು.

ವಿಜಯಪುರದ ಮಂಡಲದವರು ಪುಷ್ಪಪುರ, ಕರವೀರಪುರ, ರಂಗಪುರ ಗಳಲ್ಲಿದ್ದ ಕನ್ಯಾವರ ಸಂಶೋಧಕ ಮಂಡಲದವರೊಡನೆ ಪತ್ರವ್ಯವಹಾರ ವನ್ನು ಪ್ರಾರಂಭಿಸಿದರು. ಅದರ ಫಲವಾಗಿ ಪುಷ್ಪಪುರದ ಸಂಶೋಧಕರು ವರನನ್ನು ಕರೆದುಕೊಂಡು ವಿಜಯಪುರಕ್ಕೆ ಬಂದು, ರಾಯರಿಗೆತೋರಿಸಿದರು. ಇವರು ಎರಡು ಸಾವಿರಕ್ಕಿತ ಹೆಚ್ಚು ಉತ್ಪನ್ನವುಳ್ಳ ವತನದಾರರಿರುವರೆಂಬು ದನ್ನು ಕಾಗದಪತ್ರಗಳಿಂದ ಸಿದ್ಧಪಡಿಸಿ, ರಾಯರಿಗೆ ವನವರಿಕೆ ಮಾಡಿಕೊ ಟ್ಟರು. ಈ ವರನಿಗೆ ಆಪ್ತೇಷ್ಟರು ಯಾರೂ ಇಲ್ಲವೆಂದೂ, ಮೊದಲಿನ ಹೆಂಡ ತಿಯು ಮೃತಳಾಗಿದ್ದು, ದಾಯಾದಿಗಳ ಉಪಟಳದಿಂದ ಇಲ್ಲಿಯವರೆಗೆ ಇವರ ದ್ವಿತೀಯ ವಿವಾಹವಾಗಿಲ್ಲವೆಂದೂ, ಆದರೂ ವರನ ವಯಸ್ಸ ಮೂವತ್ತಕ್ಕೆ ಮೀರಿಲ್ಲವೆಂದೂ ಪುಷ್ಪಪುರದಿಂದ ಬಂದ ಸದ್ಗೃಹಸ್ಥರು ರಾಯರಿಗೆ ತಿಳಿಸಿ ದರು. ರಾಯರು ಮಾತ್ರ ವರನಿಗೆ ವಯಸ್ಸು ಬಹಳ ಆಗಿದೆಯೆಂದು ತುಸು ಗುಣಗುಟ್ಟಿದರು. ಆಗ ವಿಜಯಪುರದ ಮಂಡಳವು ಅವರನ್ನು ಒಳಗೆ ಕರೆ ದೊಯ್ದು, “ ನೀವು ವರದಕ್ಷಿಣೇ ಕೊಡೋಹಾಂಗಿಲ್ಲ. ಹೆಚ್ಚಿಗೆ ಉತ್ಪನ್ನ ಇರೋ ಇಪ್ಪತ್ತು ವರುಷದವರನ್ನು ಹುಡುಕಿದರ ಸಿಗೋದು ಸಾಧ್ಯ ಇಲ್ಲ. ಈ ವರಕ್ಕ ಕನ್ಯಾ ಮೇಲಾಡಲಿಕ್ಕೆ ಹತ್ಯಾವ. ನಿಮ್ಮ ಮಗಳು ರೂಪವತಿ ಇರೋದ್ರಿಂದ ಈ ವರ ನಿಮಗೆ ಸಿಗೋ ಸಂಭವ ಅದೆ. ಈಗ ಉದಾಸೀನ ಮಾಡಿದ್ರ ಮುಂದ ಇಂಥಾ ವರ ನಿಮಗ ಸಿಗಲಿಕ್ಕಿಲ್ಲ. ನೋಡ್ರಿ ” ಎಂದು ಉಪದೇಶಮಾಡಿತು. ರಾಯರು ವತನದ ಮೋಹಕ್ಕೆ ಬಿದ್ದು ಒಪ್ಪಿಕೊಂಡರು.

ಕನ್ನಿಕೆಯ ಕುಲಗೋತ್ರ ಲಾವಣ್ಯಗಳ ಬಗ್ಗೆ ವಿಜಯಪುರ ಮಂಡಳದ ವರೂ, ವರನ ಸದ್ಗುಣಸದಾಚಾರಗಳ ಬಗ್ಗೆ ಪುಷ್ಪಪುರ ಮಂಡಲದವರೂ

ಹೊಣೆಹೊತ್ತರು. ನವೀನ ಪದ್ಧತಿಯಿಂದೂ ಕನ್ಯಾವರರ ಭೆಟ್ಟಿಯೂ ಆಯಿತು. ವರನು ಕನ್ನಿಕೆಗೆ ಮೂರುಸೇರು ಭಂಗಾರದ ಆಭರಣಗಳನ್ನು ಸರಪಳಿ, ಒಡ್ಯಾಣ, ಪೈಜಣ ಮೊದಲಾದ ಬೆಳ್ಳಿಯ ಒಡವೆಗಳನ್ನು, ಜರದ ಪೀತಾಂಬರ, ನಾಲ್ಕು ಸೀರೆ, ಹತ್ತುಖಣಗಳು— ಇತ್ಯಾದಿ ಕೊಡತಕ್ಕದ್ದು; ಕನಿಕೆಯ ತಂದೆಯು ಮೂರುನೂರು ರೂಪಾಯಿ ವರದಕ್ಷಿಣೆ ವರೋಪಚಾರ ಗಳ ಬಗ್ಗೆ ಕೊಡತಕ್ಕದ್ದು; ಆದರೆ ನಿಶ್ಚಯ ಪತ್ರದಲ್ಲಿ ಮೂರು ಸಾವಿರ ರೂಪಾಯಿ ಎಂದು ಬರೆಯಿಸತಕ್ಕದ್ದು. ಎಂದು ನಿರ್ಣಯವಾಯಿತು.

ಬನಶಂಕರಿಯಲ್ಲಿ ಮದುವೆಯಾಗತಕ್ಕದ್ದೆಂದು ನಿಶ್ಚಯವಾಯಿತು. ವಿಜಯಪುರಮಂಡಲದವರು ಕನ್ಯಾಪಕ್ಷದಿಂದ ಒಂದುನೂರು ರೂಪಾಯಿಗಳನ್ನೂ ಪುಷ್ಪಪುರದವರು ವರಪಕ್ಷದಿಂದ ಎರಡನೂರು ರೂಪಾಯಗಳನ್ನೂ ಲಗ್ನದ ವೆಚ್ಚಕ್ಕೆಂದು ಪಡೆದು ಗುತ್ತಿಗೆ ಹಿಡಿದರು. ಭಾದ್ರಪದ ಶುದ್ಧ ಪಂಚಮಿಯ ದಿನ ಎಲ್ಲರೂ ಬನಶಂಕರಿಗೆ ಬಂದರು. ಅಲ್ಲಿ ಎರಡೂ ಮಂಡಲದವರು ಕೂಡಿ, ಕ್ಷೇತ್ರ ಪುರೋಹಿತರಿಗೆ ಐವತ್ತುರೂಪಾಯಿ ಕೊಟ್ಟು, ಗಂಡಾಗುಂಡೀ ಮಾಡಿ, ಗಂಡನಿಗೆ ಹೆಂಡತಿಯನ್ನು ಮಾಡಿದರು. ಸದಾಸಿವರಾಯರು ಕೊಟ್ಟ ವರದಕ್ಷಿಣೆವರೋಪಚಾರಗಳನ್ನು ಎರಡೂಮಂಡಳದವರು ಸರಿಯಾಗಿ ಹಂಚಿಕೊಂಡರು. ಒಡಕಣ್ಣನು ಕನ್ನಿಕೆಯ ರೂಪಲಾವಣ್ಯಗಳಿಗೆ ಮೆಚ್ಚಿ ವಿಜಯಪುರದ ಮಂಡಳಕ್ಕೆ ಇನ್ನೂರು ರೂಪಾಯಿಗಳ ಸಂಭಾವನೆಯನ್ನು ಕೊಟ್ಟನು. ಎರಡೂ ಮಂಡಲದವರು ಕೂಡಿ ಒಟ್ಟಿಗೆ ಒಂದು ಸಾವಿರ ರೂಪಾಯಿಗಳನ್ನು ಸಂಪಾದಿಸಿ ಕನ್ಯಾವರ ಸಂಘಟನೆಯನ್ನು ಮಾಡಿಬಿಟ್ಟರು.

## ೨೨. ಜೋಕುಮಾರ

ಇಂದು ಎಳೆಯಷ್ಟಮಿಯು, ಬೊಮ್ಮೀಗೇರಿಯಲ್ಲಿ ಅಲ್ಲಲ್ಲಿ ಜ್ಯೇಷ್ಠಾದೇವಿಯ ಪೂಜೆಯು ನಡೆದಿದೆ. ಪ್ರತಿಯೊಂದು ಪಂಗಡದ ಪ್ರಮುಖರ ಮನೆ ಮನೆಯಲ್ಲಿ ಆ ಪಂಗಡಕ್ಕೆ ಹೊಂದಿದ ಜನರೆಲ್ಲ ಹತ್ತಿಯನ್ನೂ, ರಾಟಗಳನೂ ಪೂಜಿಸಲಿಕ್ಕೆ ಇಟ್ಟಿದ್ದಾರೆ. ಪ್ರತಿಯೊಬ್ಬರೂ ಕೈಯಿಂದ ನೂಲು ತೆಗೆಯ ಬೇಕೆಂಬ ಕಟ್ಟು ಈಗ ಪ್ರತಿಕೂಲ ಪರಿಸ್ಥಿತಿಯ ಮೂಲಕ ಸಡಿಲಾಗಿದ್ದರೂ ವರುಷಕ್ಕೆ ಒಂದು ದಿವಸವಾದರೂ ಅದು ಕರ್ನಾಟಕದಲ್ಲಿ ಪ್ರಚಾರದಲ್ಲಿದೆ. ಹತ್ತಿಯ ಕೈಗಾರಿಕೆಯಿಂದಲ್ಲ

ಪ್ರಾಚೀನಕಾಲದಲ್ಲಿ ಕರ್ನಾಟಕವು ಲಕ್ಷ್ಮಿಯ ವಾಸಸ್ಥಳವಾಗಿತ್ತೆಂಬುದು ಈ ಹಬ್ಬದಿಂದ ಒಡೆದು ಕಾಣುವಂತಿದೆ. ಆ ಕೈಗಾರಿಕೆಯು ಅಳಿದುದರಿಂದಲೆ ಈಗ ಜ್ಯೇಷ್ಠಾಲಕ್ಷ್ಮಿ (ವಿಧಿಲಕ್ಷ್ಮಿ) ಯು ಗಂಟುಬಿದ್ದಿರುವಳೆಂಬುದೂ ಅಲ್ಲಿಯೆ ಕಂಗೊಳಿಸುತ್ತಲಿದೆ. ಭಾದ್ರಪದ ಶುದ್ಧ ಅಷ್ಟಮಿಯ ದಿವಸ ಹತ್ತಿಯನ್ನಾಗಲಿ, ಕೈಯಿಂದ ನೂತ ನೂಲನ್ನಾಗಲಿ ಪೂಜಿಸಿ, ನವಮಿಯ ದಿವಸ ಅದನ್ನು ಧರಿಸತಕ್ಕದ್ದೆಂಬ ಪರಂಪರಾಗತವಾದ ಸಾಂಪ್ರದಾಯವಿದೆ. ನೂಲಿನ ಕೈಗಾರಿಕೆಯನ್ನು ಮಾಡದಿದ್ದವರಿಗೆ ಬಿಕ್ಕೆಬೇಡುತ್ತ ಮನೆಮನೆ ತಿರುಗುವ ಹೊತ್ತು ಬರುವುದೆಂಬುದನ್ನು ತೋರಿಸಲಿಕ್ಕೆಂದು ಅಷ್ಟಮಿಯಿಂದಲೆ ಜೋಕುಮಾರನ ಮೆರೆವಣಿಯ ಸಾಂಪ್ರದಾಯವೂ ಕೆಲವೆಡೆಯಲ್ಲಿ ರೂಢಿಯಲ್ಲಿದೆ. ಜೋಕುಮಾರನ ಮೆರೆವಣಿಗೆಯ ಪದಗಳನ್ನು ಕೇಳಿದವರಿಗೆ ಇದು ಸಹಜವಾಗಿ ಹೊಳೆಯುವಂತಿದೆ. ಜೋಕುಮಾರನ ಪ್ರತಿಮೆಯನ್ನೂ, ಅವನ ಮೆರೆವಣಿಗೆಯನ್ನೂ ನೋಡಿ, ಅರ್ವಾಚೀನನಾಗರಿಕರು "ಇದು ಹಳ್ಳಿಯ ಹುಂಬರ ಹೊಲಸು ಪದ್ಧತಿ" ಯೆಂದು ಮೂಗುಮುರಿಯುತ್ತಾರಲ್ಲದೆ ಈ ಸಾಂಪ್ರದಾಯದ ಉತ್ಪತ್ತಿಯನ್ನು ಸಂಶೋಧಿಸುವ ಗೊಡವೆಗೆ ಹೋಗುವುದಿಲ್ಲ.

ಅದೇನೆ ಇರಲಿ, ಬೊಮ್ಮೇಗೇರಿಯವರು ಮಾತ್ರ ಜೋಕುಮಾರನನ್ನು ಬಿಟ್ಟಿಲ್ಲ. ನವಮಿಯ ದಿವಸ ಅವನಮೆರೆವಣಿಗೆ ಸಡಗರದಿಂದ ನಡೆದದೆ. ಬಾರಿಕೇರ ನೀಲವ್ವನು ಜೋಕುಮಾರನು ಕುಳಿತ ಬುಟ್ಟಿಯನ್ನು ತಲೆಯ ಮೇಲೆ ಹೊತ್ತಿದ್ದಾಳೆ. ನಾಲ್ಕೈದು ಜನ ತರುಣಿಯರು ಅವಳನ್ನು ಸುತ್ತುಗಟ್ಟಿ ಹೊರಟಿದ್ದಾರೆ.

ಊರಲ್ಲಿ ತಿರುಗುತ್ತ ಬಂದು ಅವರು ಕುಲಕರ್ಣಿ ನೀಲಕಂಠರಾಯರ ಮನೆಯಮುಂದೆ ಆ ಜೋಕುಮಾರನ ಬುಟ್ಟಿಯನ್ನು ಇಳಿಸಿದರು. ಕೂಡಲೆ ಸಣ್ಣಹುಡುಗರು ಸುತ್ತಲೂ ಮುಕುರಿ, ಜೋಕುಮಾರನ ಕರಿಮೊಗವನ್ನೂ ಬಾಯಿಗೆ ಹಚ್ಚಿದ ಬೆಣ್ಣೆಯನ್ನೂ ನೋಡಿ ಬೆರಗಾದವು. ಕೆಲವು ಕಿಡಗೇಡಿ ಹುಡುಗರು ಜೋಕುಮಾರನ ಸುತ್ತಲೂ ಚುಚ್ಚಿದ ಬೇವಿನ ಟೊಂಗೆಗಳನ್ನು ಎಳೆಯುವುದಕ್ಕೂ ತೊಡಗಿದರು. ಆಗ ಬಾರಿಕೇರ ನೀಲವ್ವನು ಆ ಬಾಲಕರನ್ನೆಲ್ಲ ಬೆದರಿಸಿ, ತನ್ನ ಮೇಳದವರೊಂದಿಗೆ—

ಜೋಕಮಾರ ಬಂದನ ಜೋಕಮಾರಾ ।
ಬೆಗಾನ ಬೆಣ್ಣೀ ಕೊಡರೆವ್ವಾ ॥
ದಿಷ್ಣಾದೇವೀ ನಿನ್ನ ಕುವರಾ ।
ಬಾಯಿಗೆ ಬೆಣ್ಣೀ ಕಣಲಿಲ್ಲ ॥

ಎಂದು ಸರಸವಾಗಿ ಹಾಡತೊಡಗಿದಳು. ಓಣಿಯೊಳಗಿನ ಹೆಣ್ಣುಮಕ್ಕಳು ಪದವನ್ನು ಕೇಳಲಿಕ್ಕೆ ಕೂಡಿದರು. ನೀಲವ್ವನು ಮೇಳದವರ ಪಲ್ಲವಿಯೊಂದಿಗೆ ನಾಲ್ಕೈದು ಹಾಡುಗಳನ್ನು ರಸಭರಿತವಾಗಿ ಹಾಡಿದಳು. ಆ ಪದಗಳಲ್ಲಿ ಜೋಕುಮಾರನ ಉತ್ಪತ್ತಿಯೂ, ಅವನುಮಾಡಿದ ದುಷ್ಕೃತ್ಯಗಳೂ ಕೊನೆಗೆ ಅವನಿಗಾದ ಬವಣೆಯೂ ವರ್ಣಿತವಾಗಿದ್ದವು. ಅವಳ ಹಾಡು ನಡೆದಾಗಲೆ ಶಾನುಭೋಗರ ಮನೆಯ ಸಮೀಪದಲ್ಲಿ ವಾಲಗದ ಸ್ವರವು ಕೇಳ ಬರಹತ್ತಿತು. ಅಲ್ಲಿ ಕೂಡಿದ ಹುಡುಗರಿಗೆ ಜೋಕುಮಾರನ ಪದಗಳು ರುಚಿಸದ್ದರಿಂದಲೂ, ಬಜಂತ್ರಿಯ ಸದ್ದು ಕೇಳಿಸಹತ್ತಿದ್ದರಿಂದಲೂ ಹುಡುಗರ ಹಿಂಡು ಅಲ್ಲಿಂದ ಹೊರಳಿತು. ಅಷ್ಟರಲ್ಲಿ ಬಜಂತ್ರಿಯ ಮೆರವಣಿಗೆಯೂ ಅಲ್ಲಿಗೆ ಬಂತು.

ಒಡಕಣ್ಣನು ಉತ್ತಮವಾದ ವಸ್ತ್ರಾಲಂಕಾರಗಳನ್ನು ಧರಿಸಿ, ಚಿಕ್ಕ ಬಾಲಕಿಯೊಬ್ಬಳನ್ನು ಮುಂದೆ ಕೂಡಿಸಿಕೊಂಡು ಕುದುರೆಯ ಮೇಲೆ ಕುಳಿತಿದ್ದಾನೆ. ಶ್ರೀಪಾದಭಟ್ಟರೂ, ಭೀಮಣ್ಣನಾಯಕರೂ ಎಡಬಲಗಳಲ್ಲಿ ಸಾವಕಾಶವಾಗಿ ನಡೆಯುತ್ತಿದ್ದಾರೆ, ಪುಷ್ಪಪುರ ಮಂಡಳದ ನಾಲ್ಕು ಜನರು ಕುದುರೆಯ ಹಿಂದೆ, ಅವರ ಹಿಂದೆ ಎರಡು ಕಮಾನು ಗಾಡಿಯಲ್ಲಿ ನಾಲ್ಕಾರು ಮಂದಿ ಹೆಣ್ಣುಮಕ್ಕಳು, ಆರೇಳು ಹುಡುಗರು. ಕುದುರೆಯ ಮುಂದೆ ವಾಲಗದ ಸ್ವರದೊಂದಿಗೆ ಹಲಗೆಯ ಮಜಲು ನಡೆದಿದೆ. ಹೀಗೆ ವೈಭವದಿಂದ ಒಡಕಣ್ಣನ ಮದುವೆಯ ಮೆರೆವಣಿಗೆಯು ಹೊರಟಿದೆ. ಅದು ಬೊಮ್ಮೀಗೇರಿಯ ಪೇಟೆಯಲ್ಲಿ ಹಾಯ್ದು ಶಾನುಭೋಗರ ಮನೆಯಮುಂದೆ ಬಂದಕೂಡಲೆ ಜೋಕುಮಾರನ ಪದಗಳು ಅಲ್ಲಿಗೇ ನಿಂತವು. ಅಲ್ಲಿ ಕೂಡಿದ ಹೆಣ್ಣುಮಕ್ಕಳೆಲ್ಲ ಕುಲಕರ್ಣಿಯವರ ಮನೆಯೊಳಗೆ ಹೊಕ್ಕರು, ಅವರಲ್ಲಿ ಒಬ್ಬ ವಿಧವೆಯು ಹೊರಳಾಡಿ, ಎದೆ ಎದೆ ಬಡಿದುಕೊಂಡು ಆಕ್ರೋಶಮಾಡತೊಡಗಿದಳು.

ಅಲ್ಲಿ ಕೂಡಿದ ಹೆಂಗಸರು ಅವಳಿಗೆ, "ಅವ್ವಾ ಅಳಬ್ಯಾಡ್ರಿ. ನಿಮ್ಮ, ಹೊಟ್ಟ್ಯಾಗ ಬಿದ್ದ ಉರಿ ಎಂದಿಗೂ ಆರೋದಿಲ್ಲ. ಅವನೂ ಈ ಊಗಾಗ ಜೋಕುಮಾರ ಇದ್ಧಾಂಗ ಇದ್ದಾನ. ಅವನ ಮೆರವಣಿಗಿ ಯಾಕ ನಡೀಬಾರದು? ಈ ಜೋಕುಮಾರನ್ಹಾಂಗ ಮುಂದ ಅವನಗತೀನೂ ಆಗೇ ಆಗತದ. ಮುದಿಮಗಾ ಆಗಿ ಮದವೀ ಮಾಡಿಕೊಂಡು ಮೆರೀತಾನ. ಅವಗೇನು ನಾಚಿಕಿಲ್ಲ, ಮರೇದಿಲ್ಲ. ಉಟ್ಟಿದ್ದs ತಲಿಗೆ ಸುತ್ತಿದ ವ್ಯಾಲ ಮಾಡೋದೇನು? ಹೇಣತೀಮಾಡಿಕೊಂಡು ಹ್ಯಾವಾ ಗೆದ್ದೆ ಅಂತ ಊರಿಗೆಲ್ಲ ತೋರಿಸಲಿಕ್ಕೆ ಹೊಂಟಾನ, ಜೋಕುಮಾರ. ಮೂಗುಕೊಯಿಸಿ ಕೊಂಡ್ರೂ, ವ್ಯಾಣದ ಮುಗು ಹಚಿಕೊಂಡು ಮೆರಿದೋವ್ರಿಗೆ ಮಾಡೋದೇನು? ನಮ್ಮನs ಅತ್ತತ್ತು. ಆಯಾಸಾ ಮಾಡಿಕೋಬ್ಯಾಡ್ರಿ, ಒಳಗ ಹೋಗೋಣ ಬರ್ರಿ" ಎಂದು ಸಂತೈಸಿ ಅವಳನ್ನು ಒಳಗೆ ಕರೆದುಕೊಂಡು ಹೋದರು. ಒಡಕಣ್ಣನ ಮೆರವಣಿಗೆಯು ಊದುತ್ತ ಊರೆಲ್ಲ ಸುತ್ತಿಂದು ಅವರ ಮನೆಗೆ ಬಂದು ಮುಟ್ಟಿತು.

ಬೊಮ್ಮೇಗೇರಿಗೆ ಬಂದ ಮರುದಿನವೇ ಒಡಕಣ್ಣನು ತನ್ನ ಕುಲಸ್ವಾಮಿಯಾದ ವೆಂಕಟರಮಣನ ಸಮಾರಾಧನೆಯನ್ನು ಹೂಡಿದನು. ಬುಂದೆಯ ಉಂಡೆಗೆ ಬಾಯಿಬಿಡುತ್ತಿದ್ದ ಬ್ರಹ್ಮವೃಂದವು ಭೋಜನಕ್ಕೆ ಕೂಡಿತು. ಊಟವಾದ ಮೇಲೆ ತಾಂಬೂಲ ಸೇವನೆ ನಡೆದಾಗ ಶ್ರೀಪಾದಭಟ್ಟರು ಒಡಕಣ್ಣನ ವೈರಿಗಳನ್ನು ಮನಬಂದಂತೆ ಹಳಿದು, ಗೂಗಿ ಬೊಬ್ಬಿ ಹೊಡದರ ಸಿಂಹದ ಮರಿಗೆ ಅಪಮಾನ ಆಗತದೇನು? ನಮ್ಮ ದೇಸಾಯ್ರು ಮದುವಿ ಆಗಬಾರದಂತ ಬೊಮ್ಮೇಗೇರ್ಯಾಗ ಬಹುಜನರು ಪ್ರಯತ್ನಮಾಡಿದರು. ಆದರೂ ದೇಸಾಯ್ರು ಮದವಿ ವೈಭವದಿಂದ ನಡೀತು. ಮೂರುಸಾವಿರ ರೂಪಾಯಿ ವರದಕ್ಷಿಣಿ ಕೊಟ್ಟು, ಯದ್ದೊಟ್ಟಿಯ ದೇಸಾಯ್ರು ತಮ್ಮ ಮಗಳನ್ನ ಧಾರಿಯೆರದು ಕೊಟ್ರು. ಇಕಾ ನೋಡ್ರಿ ವಿವಾಹನಿಶ್ಚಯದ ಪತ್ರ" ಎಂದು ಹೇಳಿ ನಿಶ್ಚಯ ಪತ್ರವನ್ನು ಅಲ್ಲಿಕುಳಿತ ಬ್ರಾಹ್ಮಣರೆದುರಿಗೆ ಇಟ್ಟರು. ಮೂಲೆಯಲ್ಲಿ ಕುಳಿತ ಹಾರುವನೊಬ್ಬನು "ಹುಲಿಚರ್ಮ ಹೊತ್ತುಕೊಂಡ ಅಗಸನ ಕತ್ತೀಕಥಿಹಾಂಗ ಇದೊಂದು ಘಟನಾ ನಡದಿದ್ದೀತು. ಸ್ವಲದಿವಸದಾಗ ಸತ್ಯ ಹೊರಬೀಳತದ" ಎಂದು ಗುಣಗುಟ್ಟಿದನು. ಬ್ರಾಹ್ಮಣರು ತಲೆ ಹಾಕಿ ತಮ್ಮ ತಮ್ಮ ಮನೆಗೆ ತೆರಳಿದರು

ಒಡಕಣ್ಣನು ಒಳೆಯ ವಿಲಾಸದಿಂದ ಇರತೊಡಗಿದನು. ಸವಿನುಡಿಗಳಿಂದ ಊರೊಳಗಿನ ಮರುಳ ಜನರ ಮನವೊಲಿಸಿ, ಅರ್ಧಮರ್ಧವಿದ್ಯೆ ಕಲಿತು ಉಂಡಾಡಿಗರಾಗಿ ತಿರುಗಾಡುವ ಹುಡುಗರ ಹಿಂಡನ್ನು ಕೂಡಿಸಹತ್ತಿದನು. ಇವರಲ್ಲಿ ಮುಲಕೀ ಪರೀಕ್ಷೆಯ ಯಾತ್ರೆಯನ್ನು ಮಾಡಿಬಂದವರೂ, ಮ್ಯಾಟ್ರಿಕ್ಕನ್ನು ಮುಟ್ಟಿ ಬಂದವರೂ ಇದ್ದರು. ಕುಂದರಿಗೆಯ ದೇಶಪಾಂಡೆ ಹನುಮಂತರಾಯನು ಈ ಹಿಂಡಿನಲ್ಲಿಯೆ ಹೆಚ್ಚಿನವನು. ಚಿಕ್ಕಂದಿನಲ್ಲಿಯೆ ಅವನ ತಂದೆಯು ತೀರಿಕೊಂಡದ್ದರಿಂದ ಹನುಮಂತರಾಯನು ಸ್ವತಂತ್ರನಾಗಿ ಮೂರುವರ್ಷ ಮ್ಯಾಟ್ರಿಕ್ಕಿನೊಡನೆ ಹೋರಾಡಿ, ತೇರ್ಗಡೆಹೊಂದದೆ ಸ್ವಗ್ರಾಮವನ್ನು ಸೇರಿದ್ದನು. ಅವನು ಹತ್ತೆಂಟು ವರ್ಷ ಪಟ್ಟಣವಾಸಿಯಾಗಿದ್ದುದರಿಂದ ತಾನು ಒಳ್ಳೆಯ ಸುಧಾರಿಸಿದವನೆಂಬ ಅಭಿಮಾನವು ಅವನಲ್ಲಿ ತುಂಬಿ ತುಳುಕುತ್ತಿತ್ತು. ಸೂಟು ಬೂಟು ಹ್ಯಾಟುಗಳನ್ನು ಧರಿಸಿ, ಕೈಯಲ್ಲಿ ಬೆತ್ತವನ್ನು ಹಿಡಿದುಕೊಂಡು ಸಾಯಂಕಾಲದಲ್ಲಿ ತಿರುಗಾಡಲಿಕ್ಕೆ ಹೋಗುವ ಅವನ ಬೆಡಗನ್ನು ನೋಡಿ, ಹಳ್ಳಿಯ ಜನರು ಬೆರಗಾಗಿ ನಿಲ್ಲುವರು. ಅವನು ಆಡುವ ಮಾತಿನಲ್ಲಿ ಎಷ್ಟೋ ಇಂಗ್ಲಿಷ ಅಪಭ್ರಂಶ ಶಬ್ದಗಳು ಇರುತ್ತಿದ್ದುದರಿಂದ ಹಳ್ಳಿಗರಿಗೆ ಅವನ ಭಾಷೆಯೆ ತಿಳಿಯುತ್ತಿರಲಿಲ್ಲ. “ನಾನು ಹತ್ತು ವರ್ಷದತನಕ ಇಂಗ್ಲಿಶ್ ಭಾಷಾದೊಳಗ ಮಾತಾಡತಿದ್ದೆ. ಅದಕ್ಕ ಕನ್ನಡ ಶಬ್ದ ಎಲ್ಲಾ ಮರತ ಹೋಗ್ಯಾವ. ಈಗ ಇಂಗ್ಲಿಶ್ ರಾಜಭಾಷಾ ಆದ್ದರಿಂದ ಅದಕ್ಕs ಹೆಚ್ಚು ಇಂಪಾರ್ಟನ್ಸ್. ಪಟ್ಟಣಕ್ಕ ಹೋದ್ರ ಕೆನರೀಜ್ ಮಾತಾಡೋರು ಕಾಗೀಕಿಂತ ಕಡೀ ಆಕ್ಕಾರ.” ಎಂದು ಅವನು ಹೆಮ್ಮೆಯಿಂದ ನುಡಿಯುವನು. ಅವನು ಒಂದು ಹಳೆಯ ವರ್ತಮಾನ ಪತ್ರವನ್ನು ಯಾವಾಗಲೂ ತನ್ನ ಕೋಟಿನ ಬಕ್ಕಣದಲ್ಲಿ ಇಟ್ಟುಕೊಂಡಿರುತ್ತಿದ್ದನು. ಹಳ್ಳಿಯಲ್ಲಿ ಜನರು ಗುಂಪು ಗೂಡಿದಲ್ಲಿಗೆ ಹೋಗಿ, ಆ ವರ್ತಮಾನ ಪತ್ರವನ್ನು ಹೊರಕ್ಕೆ ತೆಗೆದು “ಇದು ನೋಡ್ರಿ. ಈ ಪತ್ರದಾಗ ದೇಶ್‌ಪಾಂಡೇ ಎಚ್. ಎನ್. ಅಂತ ಬರದದ ಅದು ನನ್ನ ಹೆಸರು. ನಾನು ಇಂಗ್ಲಿಶ್‌ದಾಗ ಹೈಯೆಸ್ಟ್ ಬಂದಿದ್ದೆ. ಸರಕಾರದವರು ನನಗ ಮಾಮ್ಲೇದಾರ್ರ ಕೆಲಸಾ ಮಾಡ್ರೀ ಅಂತ ದುಂಬಾಲ ಬಿದಿದ್ರು. ಆದ್ರ ನಾನು ಸರಕಾರದ ನೌಕ್ರೀ ಮಾಡಾವಲ್ಲ

ಅಂತ ಹೇಳಿ ಊರಿಗೆ ಹೊಂಟು ಬಂದೆ. ಈ ಹಳ್ಳೀ ಇಂಪ್ರೂಮೆಂಟ್ ಅಂದ್ರ ಸುಧಾರಣಾ ಮಾಡಬೇಕಂತ ನನಗ ಭಯಂಕರ ಉತ್ಸಾಹ ಅದ. ನಾ ಹೇಳಿ ಪಂತ ನಡದರ ಈ ಹಳ್ಳಿನ್ನ ಊರ್ಜಿತ ಸ್ಥಿತಿಗೆ ತರತೀನಿ" ಎಂದು ಉಪ ದೇಶಮಾಡುತ್ತಿದ್ದನು. ಆದರೇನು? ಅವನೆಷ್ಟು ಪ್ರಯತ್ನ ಮಾಡಿದರೂ ಅವರು ಇವನ ಬಲೆಗೆ ಬೀಳಲಿಲ್ಲ. ಕುಂದರಿಗೆಯಲ್ಲಿ ತನ್ನ ಪ್ರತಿಷ್ಠೆಯನ್ನು ಬೆಳೆಯಿಸಲಾರದೆ ನಿರಾಶೆಯಿಂದ ಅವನು ಬೊಮ್ಮೀಗೇರಿಗೆ ಬಂದುಒಡಕಣ್ಣನ ಶಿಷ್ಯತ್ವವನ್ನು ವಹಿಸಿದನು.

ಅಲ್ಪಸ್ವಲ್ಪ ಆಂಗ್ಲಭಾಷೆಯ ಜ್ಞಾನವುಳ್ಳ ತರುಣನೊಬ್ಬನು ದೊರೆತ ದ್ದರಿಂದ ಒಡಕಣ್ಣನಿಗೆ ಪರಮಾನಂದವಾಯಿತು. ಅವನು ಹನುಮಂತರಾ ಯನಿಗೆ ತನ್ನ ನಾಲ್ಕು ತತ್ವಗಳನ್ನು ಉಪದೇಶ ಮಾಡಿದನು. ಎಚ್. ಎನ್. ದೇಶಪಾಂಡೆಯು ಆ ತತ್ವಗಳನ್ನು ಅರಗಿಸಿಕೊಂಡು ಕುಂದರಿಗೆಯಲ್ಲಿ ಅವು ಗಳ ಪ್ರಯೋಗವನ್ನು ಆರಂಭಿಸಿದನು. ಒಡಕಣ್ಣನ ಸಹಾಯದಿಂದ ತನ್ನ ದಾಯಾದಿಗಳನ್ನೆಲ್ಲ ಅವನು ಮುರಿಬಡಿದನು. ಮುಂದೆ ಕೆಲ ದಿನಗಳಲ್ಲಿಯೆ ಕುಂದರಿಗೆಯಲ್ಲಿ ಒಡಕು ಹುಟ್ಟಿಸಿ ತನ್ನ ಪ್ರತಿಷ್ಠೆಯನ್ನು ಬೆಳೆಯಿಸಿಕೊಂಡನು. ಒಡಕಣ್ಣನು ಹನುಮಂತರಾಯನನ್ನೇ ಮುಂದೆ ಮಾಡಿ ಬೊಮ್ಮೀಗೇರಿಯಲ್ಲಿ ತನ್ನ ತಂತ್ರಗಳನ್ನು ಹರಿಬಿಟ್ಟನು. ಹನುಮಂತರಾಯನು ಹಳ್ಳಿಯಲ್ಲಿ ತನ ಗಿದ್ದ ಕಾಯದೆಯ ಅಗಾಧ ಪಾಂಡಿತ್ಯವನ್ನು ಪ್ರಕಟಿಸಿ, ಹೊಸ ಹೊಸ ವ್ಯಾಜ್ಯಗಳನ್ನೂ ಹುಟ್ಟಿಸಿದನು. ಹಳ್ಳಿಯ ಪಂಚರಿಂದ ಸಹಜವಾಗಿ ಬಗೆ ಹರಿಯುತ್ತಿದ್ದ ಸಣ್ಣಪುಟ್ಟ ವ್ಯಾಜ್ಯಗಳು ಕೂಡ ಕೋರ್ಟನ್ನು ಕಂಡವು. ಹೀಗಾದ್ದರಿಂದ ಹನುಮಂತರಾಯನು ವಕೀಲರಏಜೆಂಟನಾದನು. ನಾಲ್ಕಾರು ವ್ಯಾಜ್ಯಗಳಲ್ಲಿ ಜಯವನ್ನು ಪಡೆದು ಹಳ್ಳಿಯ ಬ್ಯಾರಿಸ್ಟರನೆಂದೂ ಎನ್ನಿಸಿ ಕೊಂಡನು. ಹನುಮಂತರಾಯನ ಪ್ರಯತ್ನ ಪ್ರಭಾವದಿಂದ ಹಳ್ಳಿಯ ದ್ರವ್ಯ ಪ್ರವಾಹವು ಪಟ್ಟಣಗಳ ಅಟ್ಟಕ್ಕೆ ಏರಹತ್ತಿತು. ಬೊಮ್ಮೀಗೇರಿಯ ಲ್ಲಿಯೂ, ಕುಂದರಿಗೆಯಲ್ಲಿಯೂ ಬಹು ಜನರು ಸಾಹುಕಾರರ ಸೇವಕರಾ ದರು. ತಾನು ಬಿತ್ತಿದ ವಿಷಬೀಜದ ಕಟುಫಲಗಳನ್ನು ಬೊಮ್ಮೀಗೇರಿಯ ಜನರೆಲ್ಲ ತಿನ್ನುತ್ತಿರುವುದನ್ನು ಕಂಡು ಒಡಕಣ್ಣನ ಅಂತರಂಗಕ್ಕೆ ಪರಮ ಶಾಂತಿಯುಂಟಾಯಿತು.

# ೨೪. ಗಂಡುಳ್ಳ ಹೆಂಡತಿ

ಶಶಿಕಲೆಯು ಮೈನೆರೆದು ಪತಿಯ ಮಂದಿರಕ್ಕೆ ಬಂದಳು. ಒಡಕಣ್ಣನು ಹರೆಯದ ಹುಡುಗನಂತೆ ಹಾವಭಾವಗಳನ್ನು ತೋರಿಸಹತ್ತಿದನು. ಚಂದ್ರಾವತಿಬಾಯಿಯವರು ಅತ್ತೆಯ ಅಧಿಕಾರವನ್ನು ಮತ್ತೆ ನಡೆಯಿಸಬೇಕೆಂದು ಹಾತೊರೆಯಹತ್ತಿದರು. ಶಶಿಕಲೆಯು ಮುಂದರಿದು ಮನೆಗೆಲಸಗಳನ್ನು ಮಾಡುತ್ತ ಅತ್ತೆಯ ಆದರಕ್ಕೆ ಪಾತ್ರಳಾದಳು. ಇದರಿಂದ ತಿಂಗಳೊಪ್ಪತ್ತಿನಲ್ಲಿಯೆ ಅವಳಿಗೆ ಅಡುಗೆ ಮನೆಯ ಅಧಿಕಾರವು ದೊರೆಯಿತು. ಶಶಿಕಲೆಯು ಸುದೃಢಳೂ, ಮನೆಗೆಲಸಗಳಲ್ಲಿ ನುರಿತವಳೂ ಇದ್ದುದರಿಂದ ಅಡುಗೆಮನೆಯ ಅಧಿಕಾರವನ್ನು ಅಚ್ಚುಕಟ್ಟನಿಂದ ನಡೆಯಿಸತೊಡಗಿದಳು. ಚಂದ್ರಾವತಿಬಾಯಿಯವರು ಒಡಕಣ್ಣನೊಡನೆ ಚಕ್ಕಂದದಿಂದ ವಿನೋದ ಮಾಡುತ್ತ ಕಾಲ ಕಳೆಯತೊಡಗಿದರು.

ಒಂದು ದಿವಸ ಮೂರು ತಾಸು ರಾತ್ರಿಯಲ್ಲಿ ಚಂದ್ರಾವತಿಬಾಯಿಯವರು ಒಡಕಣ್ಣನ ಕೋಣೆಯೊಳಗೆ ಅವನು ಮಲಗುವ ಗಾದಿಯ ಮೇಲೆ, ಕಾಲ ಮೇಲೆ ಕಾಲು ಹಾಕಿಕೊಂಡು ಕುಳಿತು ವಿನೋದ ಮಾಡುತ್ತಿರುವುದನ್ನು ಶಶಿಕಲೆಯು ಕಂಡಳು. ಕೂಡಲೆ ಅವಳಿಗೆ ಸಂಶಯವೊಂದು ಬಡಿದುಕೊಂಡಿತು. ಅವಳು ಬಾಯಿಯವರಿದ್ದಲ್ಲಿಗೆ ಬಂದು, "ಅತ್ತೆವರೇ ನಿಮ್ಮ ನಡತೇನು ನನಗ ಸರಿ ಬರೋದಿಲ್ಲ. ಹಿಂದಿನ ಹೊಲಸು ಪದ್ಧತಿ ಬಿಡ್ರಿ. ಇನ್ನು ಮ್ಯಾಲ ನಿಮ್ಮ ಮರೇದಿ ಉಳೀಲಿಕ್ಕಿಲ್ಲ ನೋಡ್ರಿ" ಎಂದು ಆವೇಶದಿಂದ ನುಡಿದಳು.

ಬಾಯಿಯವರು, "ಹುಚ್ಚ ಶಟವೀ! ಮನೀಗೆ ಬಂದು ಮೂರು ತಿಂಗಳಾಗಿಲ್ಲ; ನನ್ನ ಮ್ಯಾಲ ಅಧಿಕಾರ ನಡಸಲಿಕ್ಕೆ ಬಂದೀಯಾ? ತಾಯಿಮಗಾ ನಾವು ಬೇಕಾದ ಮಾತು ಆಡತೇವಿ. ಅದರ ಗೊಡವಿ ನಿನಗ ಯಾಕ ಬೇಕು? ಮೊದಲ ಇದ್ದ ಕಾಲಿನಕಿಂತ ಹಿಂಥ ಹುಟ್ಟಿಡ ಕೋಡಿನ ಉರುವಣಿಗೇ ಹೆಚ್ಚಾದ ಹಾಂಗಾತಲ್ಲ. ಎರೀಸೀಮೀ ಹುಂಬರಿಗೆ ಪ್ರೀತೀ ಮಟ್ಟಾ ಗೊತ್ತಿರೋದಿಲ್ಲ. ಮುನ್ನೊಡಿ ಮುಸುರೀ ತಿಕ್ಕಹೋಗು" ಎಂದು ಕಣ್ಣು ಕೆಂಪಗೆ ಮಾಡಿದರು.

ಅದಕ್ಕೆ ಶಶಿಕಲೆಯು, "ನೀವೀಗ ನಡಿಸಿದ್ದು ತಾಯಿ ಮಕ್ಕಳ ಪ್ರೀತ್ಯಲ್ಲ; ಜಗತ್ತಿಗೇ ಅಸಹ್ಯ ಅನಸೋ ನಡತಿ. ಬೆಳವಲದವರು ಹುಂಬರಾದ್ರೂ, ಮಲ್ಲಾಡದವರಹಾಂಗ ಮೋಸಗಾರ್ರಲ್ಲ. ನಿಮ್ಮ ಅತ್ತೀ ಅಧಿಕಾರ ನನ್ನ ಮ್ಯಾಲ ನಡೀಲಿಕ್ಕಿಲ್ಲ. ನನ್ನ ಈ ಕೋಣ್ಯಾಗ ಇನ್ನು ಮ್ಯಾಲ ಕಾಲಿಟ್ಟಗಿಟ್ಟೀರಿ" ಎಂದು ನುಡಿದು, ಬಾಯಿಯವರನ್ನು ತೋಳುಹಿಡಿದು ಕೋಣೆಯೊಳಗಿಂದ ಹೊರಗೆಳೆಯಹತ್ತಿದಳು.

ಬಾಯಿಯವರು, "ಅಯ್ಯೋ! ನಾ ಇಷ್ಟು ದಿವ್ಸ ಮಾಡಿದ್ದೆಲ್ಲಾ ಮಣ್ಣಾತೂ. ಹೇಣತೀ ಕೈಲಿಂದ ನನ್ನ ಮರೇದೀ ಕಳೀಲಿಕ್ಕೆಹತ್ತೀಯೇನು? ನಿನ್ನ ವಚನಾ ಎಲ್ಲಿ ಅದ? ನಿನ್ನ ದಶಿಂದಾ ನಾ ಎಷ್ಟು ಕಷ್ಟಬಟ್ಟೆ! ಎಲ್ಲಾ ಮರತ್ಯಾ? ಷಂಢನಹಾಂಗ ಯಾಕ ನಿಂತೀದಿ? ಎರಡೇಟು ಹಾಕು" ಎಂದು ಚೆಳ್ಳಾಬಳ್ಳಾ ಚೀರುತ್ತಾ ಒಡಕಣ್ಣನನ್ನು ಹುರಿದುಂಬಿಸಿದರು.

ಒಡಕಣ್ಣನು ಅಲ್ಲಿಯೆ ಮೂಲೆಯಲ್ಲಿದ್ದ ಕಸಬರಿಗೆಯನ್ನು ತೆಗೆದುಕೊಂಡು ಅದರ ಹಿಡಿಯಿಂದ ಶಶಿಕಲೆಯ ಬೆನ್ನ ಮೇಲೆ ಎರಡೇಟುಕೊಟ್ಟನು. ಶಶಿಕಲೆಯು ಅದಕ್ಕೆ ಪ್ರತಿಯಾಗಿ ಚಂದ್ರಾವತಿಬಾಯಿಯವರಿಗೆ ಎರಡು ಮುಷ್ಟಿ ಪ್ರಹಾರಗಳನ್ನು ನೀಡಿ ಅವರನ್ನು ನಡುಮನೆಯ ಮೂಲೆಗೆ ದೂಡಿದಳು. ಒಡಕಣ್ಣನು ಆರ್ಭಟಿಸುತ್ತ ಎದುರಿಗೆ ಬರಲು, ಅವನ ಕೈಯೊಳಗಿನ ಕಸಬರಿಗೆಯನ್ನು ಕಸಿದುಕೊಂಡು ಅದರ ಹಿಡಿಯಿಂದಲೆ ಅವನನ್ನು ಬಡಿಯತೊಡಗಿದಳು.

ಚಂದ್ರಾವತಿಬಾಯಿಯವರ ಕೆಟ್ಟ ದನಿಯನ್ನೂ, ಕಸಬರಿಗೆಯ ಬಡಿತದ ಶಬ್ದವನ್ನೂ ಕೇಳಿ ನೆರೆಮನೆಯವರು ಒಡಕಣ್ಣನ ಮನೆಗೆ ಬಂದರು. ಕೂಡಲೆ ಒಡಕಣ್ಣನು "ಹ್ಯಾಂಗದ? ಮಾತಾಡಿದೀ ಅಂದ್ರ ಮತ್ತ ಎರಡೇಟ ತಿಂದೀ. ದೇಸಾಯ್ರ ನೆಲಿ ನಿನಗ ಗೊತ್ತಿಲ್ಲ" ಎಂದು ಆರ್ಭಟಿಸುತ್ತಾ ಹೊರಗೆ ಬಂದನು. ನೆರೆದ ಜನರು, "ಏನ್ರೀ ದೇಸಾಯ್ರ! ಒಳಗ ಏನೋ ಅನರ್ಥ ನಡಿಸಿಬಿಟ್ಟೀರಲ್ಲ?" ಎಂದು ಕೇಳಿದರು.

ಅದಕ್ಕೆ ಒಡಕಣ್ಣನು, "ಯರೀಸೀಮೀ ಹೆಣ್ಣು ಮೈನುಗ್ಗಾದ ಮ್ಯಾಲಽ ಗೊತ್ತಾಗೋದು. ಜಾಣಗ ಮಾತಿನ ಪೆಟ್ಟಂತಽ, ಕೋಣಕ ಬಡಿಗೀ

ಪೆಟ್ಟೆಂತ. ಈ ಹೆಣ್ಣಿಗೆ ಅಸೀಮಿಸೀ ನೋಡೋ ಹಾಂಗಿಲ್ರೀ, ಅದಕ್ಕಂತs ಇವತ್ತ ಒಂದು ಕೈ ತೋರಿಸಿಬಿಟ್ಟೆ" ಎಂದು ಗರ್ಜಿಸಿದನು.

ಒಳಗೆ ಕುಳಿತ ಶಶಿಕಲೆಯು, "ಕೈಸಾಗದವರಿಗೆ ಬಾಯಿತಿಂಡಿ ಬಹಳ" ಎಂದು ಗುಣಗುಟ್ಟಿದಳು. ಅಲ್ಲಿ ಕೂಡಿದವರು, "ನಿಮ್ಮ ಮನೆತನದ ಜಗಳ ನಮಗ ಯಾಕ ಬೇಕು? ಗುದ್ದಿದವರs ಬಲ್ಲರು, ಗುದ್ದಿಸಿಕೊಂಡವರs ಬಲ್ಲರು" ಎನ್ನುತ್ತ ತಮ್ಮ ಮನೆಗೆ ಹೋದರು.

ಶಶಿಕಲೆಯು ಒಡಕಣ್ಣನ ಮನೆಗೆ ಬರುವಷ್ಟರಲ್ಲಿ ಚಂದ್ರಾವತಿಬಾಯಿ ಯವರ ಯೌವನದ ಕಳೆಯು ಇಳಿದಿತ್ತು. ಅಶುದ್ಧವಾದ ರಸಾಯನಗಳ ಸೇವನೆಯಿಂದ ಅವರ ಹಲ್ಲುಗಳೆಲ್ಲ ಉದುರಿದ್ದವು. ಗನೋರಿಯಾ ರೋಗದ ಬಾಧೆಯಿಂದ ಅವರು ಅತಿಶಯವಾಗಿ ಅಶಕ್ತರಾಗಿದ್ದರು, ಒದಕಣ್ಣನು ಆ ರೋಗದ ಬಲೆಯಲ್ಲಿ ಬಿದ್ದು ನಿರ್ವೀರ್ಯನಾಗಿದ್ದರೂ, ಅದನ್ನು ಹೊರಗೆಡಹದೆ ಹರೆಯದ ಹುಡುಗನಂತೆ ಮೆರೆಯುತ್ತಿದ್ದನು. ಶಶಕಲೆಯು ಬಲಿಷ್ಠಳೂ ಎದೆಗಾರ್ತಿಯೂ, ಸ್ವಾತಂತ್ರ್ಯಪ್ರಿಯಳೂ, ಸುಶಿಕ್ಷಿತಳೂ ಇದ್ದುದರಿಂದ ಬಾಯಿಯವರ ಅತ್ತೆಯ ಅಧಿಕಾರವಾಗಲಿ, ಒಡಕಣ್ಣನ ದರ್ಪವಾಗಲಿ ಅವಳ ಮೇಲೆ ನಡೆಯಲಿಲ್ಲ.

ಪಟ್ಟಣದಲ್ಲಿಯೆ ಹುಟ್ಟಿಬೆಳೆದು ಸ್ವೇಚ್ಛೆಯಿಂದ ಸಂಚರಿಸಿದ ಅವಳಿಗೆ ಮನೆಯಲ್ಲಿ ಮೂಲೆಹಿಡಿದು ಕುಳಿತುಕೊಳ್ಳುವುದು ಸಾಧ್ಯವಿರಲಿಲ್ಲ. ಮನೆಗೆಲಸಗಳನ್ನೆಲ್ಲ ಮುಗಿಸಿಕೊಂಡು ಸಾಯಂಕಾಲದಲ್ಲಿ ಊರಲ್ಲಿ ವಿಹರಿಸುತ್ತಿದ್ದಳು. ಊರಿನ ಹೆಂಗಳೆಯರೊಡನೆ ಪ್ರೇಮದಿಂದ ನಡೆದುಕೊಂಡು ಕೆಲವರು ಗೆಳತಿಯರನ್ನೂ ಸಂಪಾದಿಸಿದಳು. ಅವರಿಂದ ತನ್ನ ಗಂಡನ ಮನೆಯ ವೃತ್ತಾಂತವನ್ನೆಲ್ಲ ಅರಿತುಕೊಂಡು, ಮನೆತನಕ್ಕೆ ಅಂಟಿದ ಹಿಂದಿನ ಹೊಲಸನ್ನೆಲ್ಲ ತೊಳೆದು ಪತಿಗ್ರಹದ ಪ್ರಗತಿಯನ್ನು ಮಾಡಬೇಕೆಂದು ಹವಣಿಸಿದಳು. ಊರಲ್ಲಿ ಒಡಕನ್ನು ಹುಟ್ಟಿಸಿ ತನ್ನ ಪ್ರತಿಷ್ಠೆಯನ್ನು ಹೆಚ್ಚಿಸಬೇಕೆಂದು ಒಡಕಣ್ಣನು ಯತ್ನಿಸುತ್ತಿದ್ದರೆ, ಊರಲ್ಲೆಲ್ಲ ಒಕ್ಕಟ್ಟನ್ನು ಬೆಳೆಯಿಸಿ ತನ್ನ ಉನ್ನತಿಯನ್ನೂ ಗಳಿಸಿಕೊಳ್ಳಬೇಕೆಂದು ಶಶಿಕಲೆಯು ಎಣಿಸುತ್ತಿದ್ದಳು. ಈ ಪೂರ್ವಪಶ್ಚಿಮಗಳು ಕೂಡುವದೆಂತು? ಒಡಕಣ್ಣನು ಅವಳನ್ನು ತನ್ನಂತೆಯೆ ಮಾಡಿಕೊಳ್ಳಬೇಕೆಂದು ಪಟ್ಟ ಪ್ರಯಾಸವು ವಿಫಲವಾಯಿತು. ಕೊನೆಗೆ ತನ್ನ

ಮರ್ಯಾದೆ ಹೋದೀತೆಂಬ ಭಯದಿಂದಲೂ, ಮನೆತನವು ಮುಂದರಿಯು ಲೆಂಬ ಮೋಹದಿಂದಲೂ ಅವನು ಅವಳು ಹೇಳಿದಂತೆ ಕೇಳತೊಡಗಿದನು. ಇದರಿಂದ ಚಂದ್ರಾವತಿಬಾಯಿಯವರಿಗೆ ವ್ಯಥೆಯಾಯಿತು. ಆದರೆ ಮಾಡು ವುದೇನು? ಶಶಿಕಲೆಯ ಮುಂದೆ ಅವರ ಆಟವೇ ಸಾಗುತ್ತಿದ್ದಿಲ್ಲ. ಶಶಿಕ ಲೆಯನ್ನು ಯಾವುದಾದರೊಂದು ಯುಕ್ತಿಯಿಂದಲೆ ಮೂಲೆಗುಂಪು ಮಾಡ ಬೇಕೆಂದು ಅವರು ನಿರ್ಧರಿಸಿದರು. ಬಹುದಿನಗಳ ವರೆಗೆ ಒಡಕಣ್ಣನ ಸಹ ವಾಸದಲ್ಲಿದ್ದುದರಿಂದ ಅವರಿಗೆ ಅನೇಕ ಕುಯುಕ್ತಿಗಳು ಅವಗತವಾಗಿದ್ದವು.

ಅವರು ಸೊಸೆಯ ಸಂಗಡ ಪ್ರೇಮದಿಂದ ನಡೆಯುವಂತೆ ನಟಿಸಿ, ಅವ ಳಿಗೆ ಮನೆಗೆಲಸಗಳಲ್ಲಿ ನೆರವಾಗತೊಡಗಿದರು. ಶಶಿಕಲೆಗೆ ಅದರ ಮರ್ಮವೆ ಹೊಳೆಯಲಿಲ್ಲ. ಒಂದು ದಿನ ಅವಳು ನಿಚ್ಚಣಿಕೆಯಿಟ್ಟು ಅಟ್ಟ ಹತ್ತಿ ಅಲ್ಲಿಯ ಕೋಲಿನ ಮೇಲೆ ಬಟ್ಟೆಗಳನ್ನು ಒಣಹಾಕುತ್ತಿದ್ದಳು. ಚಂದ್ರಾ ವತಿಬಾಯಿಯವರು ಅಟ್ಟಕ್ಕೆ ಬಂದು, ಮೇಲೆ ಮುಖ ಮಾಡಿಕೊಂಡು ನಿಂತ ಶಶಿಕಲೆಯನ್ನು ಅಟ್ಟದಿಂದ ಕೆಳಕ್ಕೆ ದೂಡಿಬಿಟ್ಟರು. ಶಶಿಕಲೆಯು ಬಲಿಷ್ಠಳೂ ಚಪಲೆಯೂ ಇದ್ದುದರಿಂದ ಚೆದರದೆ, ನಿಚ್ಚಣಿಕೆಯ ತೋಳಿಗೆ ಜೋತುಬಿದ್ದು ಉಳಿದುಕೊಂಡಳು ಅವಳಿಗೆ ಅರ್ಥವಾಯಿತು. ಕೂಡಲೆ ಅವಳು ಮುಯ್ಯಕ್ಕೆ ಮುಯ್ಯ ತೀರಿಸಬೇಕೆಂದು ನಿಚ್ಚಣಿಕೆಯ ಒಂದುಹಲ್ಲನು ಹಿಂದಕ್ಕೆ ಸರಿಸಿ ಚೀರುತ್ತ ಹೊರಳಾಡತೊಡಗಿದಳು. ಚಂದ್ರಾವತಿಬಾಯಿ ಯವರು ಲಗುಬಗೆಯಿಂದ ಇಳಿಯುವುದಕ್ಕೆ ತೊಡಗಲು, ನಿಚ್ಚಣಿಕೆಯ ಹಲ್ಲು ಕಳಚಿ "ಅಯ್ಯೋ ಸತ್ತೆ" ಎಂದು ಅವರು ಕಡಿದುಕೊಂಡು ಬಿದ್ದರು. ಅವರ ಬಲಗಡೆಯ ಮೊಳಕಾಲ ಸಂದುತಪ್ಪಿ ಬೆನ್ನಿಗೆ ಬಲವಾದ ಪೆಟ್ಟುಬಿದ್ದಿತ್ತು.

ಅತ್ತೆಸೊಸೆಯರ ಆರ್ತಸ್ವರವನ್ನು ಕೇಳಿ ಓಣಿಯೊಳಗಿನ ಜನರೂ, ಕೋಣೆಯೊಳಗಿನ ಒಡಕಣ್ಣನೂ ಓಡುತ್ತಬಂದರು. ಎಚ್ಚರದಪ್ಪಿ ಬಿದ್ದ ಅತ್ತೆಯ ನೆತ್ತಿಗೆ ಶಶಿಕಲೆಯು ನೀರು ಬಡಿಯುತ್ತಿದ್ದಳು. ಉಪಚಾರಗಳಿಗೆ ಆರಂಭವಾಯಿತು. ಶಶಿಕಲೆಯು, "ಅತ್ತೆವರ, ನೀವು ಇಳಿಯೋ ಕಾಲಕ್ಕs ನಿಚ್ಚಣಿಕೀ ಹಲ್ಲು ಕಳಚಬೇಕs? ಏನು ಅನರ್ಥ ಆತಲ್ಲಾ! ನನ್ನ ಅತ್ತೆವರು ಹ್ಯಾಂಗ ಬದಿಕ್ಯಾರು" ಎಂದು ಬೋರಾಡಿ ಅಳಹತ್ತಿದಳು.

ಹಡಪದ ಹನುಮಣ್ಣನು ಬಂದು ಮೊಳಕಾಲ ಸಂದನ್ನು ಕೂಡಿಸಲಿಕ್ಕೆ ಯತ್ನಿಸಿದನು. ಬಾಯಿಯವರು ಕಾಲ ಮೇಲೆ ಕೈಯಾಡಿಸಗೊಡಗಿದ್ದರಿಂದ ಆದಕ್ಕೆ ಮೇಲಿಂದಲೆ ಉಪಚಾರ ಮಾಡಬೇಕಾಯಿತು. ಕೆಲ ದಿನಗಳ ಮೇಲೆ ಅವರ ಬೆನ್ನ ನೋವು ಕಡಮೆಯಾಯಿತು; ಆದರೆ ಮೊಳಕಾಲಸಂದು ಕೂಡದ್ದರಿಂದ ಆವರು ಕಡೆತನಕ ಊನರಾಗಿ ಉಳಿತರು.

ಶಶಿಕಲೆಯು ಒಡಕಣ್ಣನ ಮನೆಗೆ ಬಂದಕಾಲದಲ್ಲಿ ಹನುಮಂತರಾಯನ ಸಲಿಗೆಯು ಅವರ ಮನೆಯಲ್ಲಿ ವಿಶೇಷವಾಗಿತ್ತು. ಅವಳು ತನ್ನ ಗಂಡನ ಆಪ್ತನಿರಬಹುದೆಂದು ಆವಳು ಭಾವಿಸಿಕೊಂಡಳು. ಒಡಕಣ್ಣನಲ್ಲಿ ತರಬೇತಾದ ಹನುಮಂತರಾಯನು ಅವನ ಮನೆಯಲ್ಲಿಯೆ ಆವನಿಗೆ ಗುರು ಮಂತ್ರವನ್ನು ತಿರುಗಿಸತೊಡಗಿದನು. ತನ್ನ ಆಂಗ್ಲಭಾಷಾ ಪಾಂಡಿತ್ಯವನ್ನು ತೋರಿಸಿ ಶಶಿಕಲೆಯ ಮೇಲೆ ತನ್ನ ಬಲೆಯನ್ನು ಬೀಸಿದನು. ತನ್ನ ಆತ್ತೆಯ ಮೋಸವೂ, ಗಂಡನ ದುರ್ಬಲತೆಯೂ ಹೊಳೆದ ಬಳಿಕ ಆವಳಿಗೆ ಹನುಮಂತ ರಾಯನನ್ನು ಕಂಡು ಚಡಪಡಿಕೆಯಾಗತೊಡಗಿತು. ಆದರೂ ಅವಳು ಪ್ರಯತ್ನಪೂರ್ವಕವಾಗಿ ತನ್ನ ಮನಸ್ಸನ್ನು ಹುಚ್ಚಿಗೆ ಹರಿಯದಂತೆ ಬಿಗಿಯಾಗಿ ಬಂಧಿಸಿಕೊಂಡಳು. ಆವಳ ಶುದ್ಧ ಹೃದಯದ ಮುಂದೆ ಹನುಮಂತರಾಯನ ಕುಟಿಲ ತಂತ್ರಗಳು ನಿಷ್ಫಲವಾದುವು.

ಇಷ್ಟರಲ್ಲಿಯೆ ಅವನು ವಿಧುರನಾದನು. ಚಂದ್ರಾವತಿಬಾಯಿಯವರು "ನೀ ಇನ್ನೂ ಹರೇದ ಹುಡುಗ. ಇನ್ನೊಂದು ಲಗ್ನ ಮಾಡಿಕೋ" ಎಂದು ಉಪದೇಶ ಮಾಡಿದರು. ಹನುಮಂತರಾಯನು ತನಗೆ ಹಿರಿಯರು ಚಿಕ್ಕವನಿರುವಾಗಲೆ ಹಳ್ಳಿಯ ಹುಡಿಗಿಯೊಂದನ್ನು ಗಂಟುಹಾಕಿದ್ದರಿಂದ ತನಗಾದ ವಿರಸ ದಾಂಪತ್ಯವನ್ನು ಬಣ್ಣಿಸಿ, ವಿಷಮವಿವಾಹದ ದುಷ್ಪರಿಣಾಮಗಳ ಮೇಲೊಂದು ಭಾಷಣವನ್ನೆ ಬಿಗಿದನು. ಶಶಿಕಲೆಯು ಅವನ ಮಾತಿನ ಮರ್ಮವನ್ನು ಅರಿತು, "ರಾಯರ ನೀವು ಅಜ್ಞಾನಿ ಇದ್ದಾಗ ಆದದ್ದು ಆಗಿ ಹೋಯಿತು. ಈಗ ನಿಮ್ಮ ಮನಸ್ಸಿಗೆ ಬಂದ ಕನ್ಯಾ ಮಾಡಿಕೊಂಡು ಸಂಸಾರ ಸಾಗಸರಿಲ್ಲಾ" ಎಂದಳು. ಆದಕ್ಕೆ ಅವನು ವಿಷಮವಿವಾಹದಿಂದ ಗೋಳಾಡುವ ಸ್ತ್ರೀಯರನ್ನು ಕಂಡು ತನಗಾಗುವ ಕಳವಳವನ್ನು ವಿವರಿಸಿ ವಿವಾಹವಿಚ್ಛೇದಕ್ಕೂ, ಪುನರ್ವಿವಾಹಕ್ಕೂ ರಾಜಶಾಸನದ ಒಪ್ಪಿಗೆಯು

ದೊರೆಯುವತನಕ ತನ್ನ ಇಚ್ಛೆಯು ಪೂರ್ಣವಾಗಲಾರದೆಂದು ಆಧ್ಯತೆಯಿಂದ ನುಡಿದುಬಿಟ್ಟನು. ಚಂದ್ರಾವತಿಬಾಯಿಯವರು, "ಇಂಗ್ರೇಜೀ ಕಲತ್ ಒಳ್ಳೇ ಸುಧಾರಿಸಿ ಬಂದೀಯಪಾ! ಯಾವಾಕಿನ್ನಾರ ಓಡಿಸಿಕೊಂಡುಹೋಗ ಬೇಕು, ಇಲ್ದಿದ್ರ ಅಮ್ಮನ್ನ ಲಗ್ನಾಮಾಡಿಕೋಬೇಕು ಅಂತ ಮಾಡೀಯೆನು? ಭಾಳ ಪಂಡಿತ ಆಗೀದಿ. ನೀ ಇನ್ನ ಹಳ್ಳ್ಯಾಗಿರಬಾರದು. ಬೆಂಗಳೂರು ಪುಣೇದ ಕಡಿಗೆ ಹೋಗು" ಎಂದು ಹಂಗಿಸಿದರು.

ಹಿಂದುಗಡೆ ಬಾಯಿಯವರಿಂದ ಹನುಮಂತರಾಯನ ಮಾತಿನ ಮರ್ಮ ವನ್ನೆಲ್ಲ ತಿಳಿದುಕೊಂಡ ಒಡಕಣ್ಣನಿಗೆ ಬಹಳ ವ್ಯಥೆಯಾಯಿತು. ಈ ದೇಶ ಪಾಂಡೆಯನ್ನು ಬಗ್ಗುಬಡಿಯುವ ನಿರ್ಧಾರ ಮಾಡಿ ಹೊಂಚುಹಾಕಿಕೊಂಡು ಕುಳಿತನು. ಅಲ್ಪಾವಕಾಶದಲ್ಲಿ ಅವನಿಗೊಂದು ಅನುಕೂಲ ಸಮಯವೂ ಬಂತು.

ಕುಂದರಿಗೆಯಲ್ಲಿ ಆಸನ್ನಮರಣಳಾದ ವಿಧವೆಯೊಬ್ಬಳ ಹೆಬ್ಬೆರಳನ್ನೊತ್ತಿಸಿ, ಮೃತ್ಯುಪತ್ರವೆಂದು ಮೇಲೆ ಬರೆಯಿಸಿ, ಒಳಗೆ ದತ್ತಕ ಪತ್ರದ ವಿಷಯವನ್ನೂ ಅವನು ಸೇರಿಸಿದ್ದನು ಇದರಿಂದ ಆ ವಿಧವೆಯ ಸೋದರಳಿಯ ಶಾಲಂಭಟ್ಟನಿಗೆ ಹದಿನೈದು ಎಕರೆ ಭೂಮಿ ಸಿಕ್ಕಂತಾಗಿತ್ತು. ಒಡಕಣ್ಣನು ಆ ವಿದವೆಯ ಮೈದುನನ ಮಗನಾದ ನೀಲಕಂಠಭಟ್ಟನನ್ನು ಹುರಿಮುಂಬಿಸಿ, ಆ ಮೃತ್ಯುಪತ್ರವು ಖೊಟ್ಟಿಯೆಂದು ವ್ಯಾಜ್ಯ ಹೂಡಿಸಿದನು. ಒಡಕಣ್ಣನು ಎಷ್ಟು ಸಾಕ್ಷಿಗಳನ್ನು ಹೇಳಿಸಿದರೂ ಮೃತ್ಯುಪತ್ರವು ಕೃತ್ರಿಮವೆಂದು ಸಾಧ್ಯ ವಾಗಲಿಲ್ಲ. ನೀಲಕಂಠಭಟ್ಟರು ಐನೂರು ರೂಪಾಯಿಗಳನ್ನು ಕಳೆದುಕೊಂಡರು. ಒಡಕಣ್ಣನು ನೀಲಕಂಠಭಟ್ಟರನ್ನು ಮತ್ತೆ ಹುರುದುಂಬಿಸಿದನು. ಐದುನೂರು ರೂಪಾಯಿಗಳನ್ನು ವೆಚ್ಚ ಮಾಡಿ ಕೋರ್ಟಿನಲ್ಲಿದ್ದ ಮೃತ್ಯು ಪತ್ರಕ್ಕೆ ಮೊದಲಿದ್ದ ಹೆಬ್ಬರಳಿನ ಗುರುತಿನ ಮೇಲೆ, ಹೊಸದಾಗಿ ಹೆಣದ ಹೆಬ್ಬೆರಳಿನ ಮುದ್ರೆ ಹಾಕಿಸಿಟ್ಟನು. ಹನುಮಂತರಾಯನಿಗೆ ಇದು ಹೊಳೆ ಯಲಿಲ್ಲ. ಆ ಪತ್ರದಲ್ಲಿ ಮೃತ್ಯುಪತ್ರ, ದತ್ತಕ ಪತ್ರಗಳೆರಡರ ಅಭಿಪ್ರಾಯ ಗಳಿದ್ದುದರಿಂದ ಸಾಕ್ಷಿದಾರರೂ ತತ್ತರಿಸಿದರು. ಒಡಕಣ್ಣನು ಬೆರಳಿನ ಗುರುತನ್ನು ಶೋಧಕ್ಕಾಗಿ ಕಳುಹಿಸಿ ಅದು ಹೆಣದ ಹೆಬ್ಬೆರಳೆಂದು ನ್ಯಾಯಾಧೀಶರಿಗೆ ಮನವರಿಕೆ ಮಾಡಿಕೊಟ್ಟನು.

ಹನುಮಂತರಾಯ ಹಾಗೂ ಅವನ ಸಂಗಡಿಗರ ಮೇಲೆ ಖೊಟ್ಟಿಕಾಗದ ಮಾಡಿದ ಬಗ್ಗೆ ಫಿರ್ಯಾದೆಯಾಯಿತು. ಅವನು ಹೌಹಾರಿ, ವಕೀಲರ ಬೆನ್ನು ಬಿದ್ದು ಸಾವಿರಾರು ರೂಪಾಯಿ ವೆಚ್ಚ ಮಾಡಿದರೂ ಅವನು ನಿರಪರಾಧಿ ಯೆಂದು ನಿರ್ಣಯವಾಗಲಿಲ್ಲ. ಶಾಲಂಭಟ್ಟನಿಗೂ ಅವನಿಗೂ ಎರಡು ವರ್ಷ ಗಳ ಶಿಕ್ಷೆಯಾಯಿತು. ಉಳಿದವರಿಗೆ ಒಂದು ವರ್ಷವಾಯಿತು. ಒಡಕಣ್ಣಾ ಹನುಮಂತರಾಯರ ಅಂತರಂಗ ದ್ವೇಷದ ಕಿಚ್ಚು ನಿರಪರಾಧಿಗಳಾದ ಬಹು ಜನರನ್ನು ಭಸ್ಮಮಾಡಿತು. ನೀಲಕಂಠಭಟ್ಟರು ವತನಕ್ಕೆ ಬಾಯಿತೆರೆದು ತಮ್ಮ ದುಡ್ಡನ್ನೆಲ್ಲ ಹಾಳುಮಾಡಿಕೊಂಡರು. ಒಡಕಣ್ಣಾನು ತನಗೆ ಬಾಧಿಸು ತ್ತಿದ್ದ ಮುಳ್ಳನ್ನು ಮತ್ತೊಂದು ಮುಳ್ಳಿನಿಂದ ತೆಗೆದೊಗೆದನು.

ಅವನು ಈ ಗೆಲವಿನಿಂದ ಹಿಗ್ಗುತ್ತಿರುವಾಗ ಚಂದ್ರಾವತಿಬಾಯಿಯವರು ಗನೋರಿಯಾ ರೋಗದಿಂದ ಹಾಸಿಗೆ ಹಿಡಿದರು. ಶರೀರದಲ್ಲಿ ಸಣ್ಣಾ ಸಣ್ಣಾ ಗುಳ್ಳೆಗಳೆದ್ದು ಒಡೆದವು. ಹೊಟ್ಟೆಯಲ್ಲಿಯ ಉರಿಗೆ ಮೈಯ ಚರ್ಮವೆಲ್ಲ ಸುಲಿ ಯತೊಡಗಿತು. ದೇಹದ ದುರ್ವಾಸನೆಗೆ ಹತ್ತಿರ ಯಾರೂ ಕುಳಿತುಕೊಳ್ಳ ವಂತಿಲ್ಲ. ಒಡಕಣ್ಣಾನು ಕೂಡ ಸಮೀಪಕ್ಕೆ ಬರಲು ಹಿಂಜರಿಯುತ್ತಿದ್ದಾನೆ. ಶಶಿಕಲೆಯು ಮಾತ್ರ ಹೇಸಿಕೊಳ್ಳದೆ ಅತ್ತೆಯವರ ಉಪಚಾರವನ್ನು ದಕ್ಷತೆ ಯಿಂದ ಮಾಡುತ್ತಲಿದ್ದಾಳೆ. ಅದನ್ನು ನೋಡಿ ಬಾಯಿಯವರ ಅಂತರಂಗವು ತಲ್ಲಣಿಸಿದೆ. ವ್ಯಾಧಿಯ ವೇದನೆಯನ್ನು ತಾಳಲಾರದೆ ಅವರು 'ಅಯ್ಯೋ ನಾನು ಯಾವಾಗ ಸತ್ತೇನು' ಎಂದು ಉದ್ಗಾರ ತೆಗೆಯುವರು; "ನಾಮಾಡಿದ ಕರ್ಮ ಬಲವಂತವಾದರೆ ನೀ ಮಾಡುವುದೇನೊ ಹರಿಯೆ' ಎಂಬ ದಾಸರ ಪದವನ್ನು ಹಾಡುವರು. ಒಡಕಣ್ಣಾನನ್ನು ಕಂಡರೆ ಕಿಡಿಕಿಡಿಯಾಗುವರು ಶಶಿಕಲೆಯು ಸೇವೆ ಮಾಡುವ ಕಾಲಕ್ಕೆ ಕಣ್ಣೀರು ತಂದು, "ಹುಲೀ ಬಾಯಿಗೆ ಬಿದ್ದು ನಾವೊಬ್ಬಾಕಿ ಕೆಟ್ಟೆ. ನೀ ಮಾತ್ರ ಬಹಳ ಜೋಕೆವ್ವಾ" ಎಂದು ಅವಳಿಗೆ ಉಪದೇಶ ಮಾಡುವ ಅವಸ್ಥೆಗೂ ಅವರು ಬಂದರು. ಅಂತ್ಯಕಾಲಕ್ಕೆ ಅತ್ತೆಯವರು ತನ್ನ ಮೇಲೆ ತೋರುವ ಮಮತೆಯನ್ನು ಕಂಡು ಶಶಿಕಲೆಯು ಹಿಂದಿನದನ್ನೆಲ್ಲ ಮರೆತು ಹೆಚ್ಚಿನ ಆದರದಿಂದ ಅವರನ್ನು ಉಪಚರಿಸತೊಡಗಿ ದಳು. ಚಂದ್ರಾವತಿಬಾಯಿಯವರು ಕೊನೆಯ ಸಮಯದಲ್ಲಿ ಅವಳಿಗೆ ತಾವು

ಸಂಪಾದಿಸಿ ಗುಪ್ತವಾಗಿ ಹೂಳಿಟ್ಟ ನಿಧಿಯ ಸ್ಥಳವನ್ನೂ ಹೇಳಿಬಿಟ್ಟರು. ಆದರ ಮರುದಿನವೆ ಅವರಿಗೆ ಮೇಲುಬ್ಬಸವು ಕೂಡಿ ಅವರು ತೀರಿಕೊಂಡರು.

ಒಡಕಣ್ಣನು ಅವರ ಉತ್ತರಕ್ರಿಯೆಯನ್ನು ವೈಭವದಿಂದ ನೆರವೇರಿಸಿದನು. ಅವನು ಬಾಂಧವರನ್ನೂ, ಶಶಿಕಲೆಯ ತಂದೆತಾಯಿಗಳನ್ನೂ ಅದಕ್ಕೆ ಕರೆಯಿಸಿಕೊಂಡಿದ್ದನು. ಶಶಿಕಲೆಯು ಅತ್ತೆಯವರು ಹೇಳಿದ ನಿಕ್ಷೇಪವನ್ನೆಲ್ಲ ತನ್ನ ತಾಯಿಯ ಸ್ವಾಧೀನ ಮಾಡಿಬಿಟ್ಟಳು. ಈ ನಿಕ್ಷೇಪದ ಸ್ಥಳವು ಒಡಕಣ್ಣನಿಗೆ ಗೊತ್ತಿತ್ತು; ಆದರೆ ಶಶಿಕಲೆಗೆ ಅದರ ಸುಳಿವೆ ಹತ್ತಿಲ್ಲವೆಂದು ಅವನು ಭಾವಿಸಿದ್ದರಿಂದ, ಹಾಗೂ "ದತ್ತಕ ತಾಯಿಯ ಉತ್ತರ ಕ್ರಿಯೆಯನ್ನು ಹೀಗೆ ಯಾರೂ ಮಾಡಿರಲಿಕ್ಕಿಲ್ಲ"ವೆಂದು ಜನರಿಂದ ಹೊಗಳಿಸಿಕೊಳ್ಳಬೇಕೆಂಬ ಹವ್ಯಾಸದಲ್ಲಿದ್ದುದರಿಂದ ಅವನು ಆತ್ತಕಡೆಗೆ ಲಕ್ಷ್ಯವಿಡಲಿಲ್ಲ. ಒಡಕಣ್ಣನು ಭೂದಾನ ಗೋದಾನಾದಿಗಳಿಂದ ಬ್ರಹ್ಮವೃಂದವನ್ನು ತಣಿಸಿ ಉತ್ತರಕ್ರಿಯೆಯನ್ನು ಸಾಂಗಮಾಡಿದನು ಬಂದುಬಾಂಧವರೂ, ಶಶಿಕಲೆಯ ತಂದೆತಾಯಿಗಳೂ ತಮ್ಮ ತಮ್ಮ ಊರಿಗೆ ಹೊರಟುಹೋದರು.

ಮುಂದೆ ಒಂದು ದಿವಸ ಒಡಕಣ್ಣನು ನಿಕ್ಷೇಪದ ಸ್ಥಳಕ್ಕೆ ಬಂದು ನೋಡುತ್ತಾನೆ; ನಿಧಿಯಲ್ಲಾ ಮಾಯವಾಗಿತ್ತು! ಅಲ್ಲಿ ನಾಲ್ಕಾರು ಸಾವಿರ ರೂಪಾಯಿಗಳಾದರೂ ಇರಬಹುದೆಂದು ಅವನ ತರ್ಕವಿತ್ತು. ಇಷ್ಟು ದುಡ್ಡು ಕೈಬಿಟ್ಟು ಹೋಯಿತಲ್ಲ ಎಂದು ಎದೆಎದೆ ಬಡಿದುಕೊಂಡು, ಆಲೋಚಿಸಿದನು. ಶಶಿಕಲೆಯ ಮೇಲೆಯೆ ಅವನಿಗೆ ಸಂಶಯ ಬಂತು. ಅವಳನ್ನು ಸವಿಮಾತಿನಿಂದ ಮರುಳುಮಾಡಿ ಅವಳಿಂದ ಸತ್ಯಸಂಗತಿಯನ್ನು ಹೊರಗೆಡಹಲಿಕ್ಕೆ ಯತ್ನಿಸಿದನು. ಶಶಿಕಲೆಯು ಏನನ್ನೂ ಅರಿಯದವಳಂತೆ, "ಅಯ್ಯೋ! ಇದೇನು ಅರಿಷ್ಟ! ಅತ್ತೆವರು ಮನೆತನದ ಸುದ್ದಿ ಒಂದೂ ನನ್ನೆದುರಿಗೆ ತಗೀತಿದ್ದಿಲ್ಲ. ನಿಮ್ಮ ಮನ್ಯಾಗ ನಾ ಒಂದು ಜೀತದ ಆಳಾಗಿ ದುಡಿಯೋ ಆಕಿ ದುಡ್ಡಿನ ಉಸಾಬರಿ ನನಗ್ಯಾಕ ಬೇಕು?" ಎಂದು ಹಾರಿಸಿ ನುಡಿದಳು. ಒಡಕಣ್ಣನು, "ಊರಿಗೆ ಊರನ್ನ ಬುಡಮೇಲು ಮಾಡಿದ ನನ್ನ ಮುಂದೆ ನಿನ್ನ ಜಂಭ ಜೊಚ್ಚಬ್ಯಾಡ. ನೀ ಬದಕಬೇಕಂತಿದ್ರ ಖರೇ ಹೇಳು" ಎಂದು ಬೆದರಿಸಿದ್ದೂ ನಿಷ್ಫಲವಾಯಿತು. ಶ್ರೀಪಾದಭಟ್ಟ ಭೀಮಣ್ಣನಾಯಕರ ಮಧ್ಯಸ್ತಿಕೆಗೆ ಬಂದರೆ ಅವಳು "ನನಗೇನೂಗೊತ್ತಿಲ್ಲ" ವೆಂದು ನಿರ್ಧಾರವಾಗಿ ಹೇಳಿ

ಬಿಟ್ಟಳು. ಸಾಮ ದಾನ ಭೇದೋಪಾಯಗಳು ವ್ಯರ್ಥವಾದ ಮೇಲೆ ಉಳಿದ ದ್ದೊಂದೇ.

ಮರುದಿವಸ ಶ್ರೀಪಾದಭಟ್ಟ ಭೀಮಣ್ಣನಾಯಕರೊಂದಿಗೆ ಒಡಕಣ್ಣನು ಶಶಿಕಲೆಯನ್ನು ಮೋಸದಿಂದ ನೆಲಕ್ಕೆ ಕೆಡಹಿ, ಕೈಕಾಲು ಕಟ್ಟಿ ಬೆನ್ನತುಂಬ ಬಾಸಾಳುಗಳನ್ನು ಮೂಡಿಸತೊಡಗಿದನು. ಶಶಿಕಲೆಯು, "ಮೀಸೀ ಹೊತ್ತ ಗಂಡಸರ‍್ಯ ಇದ್ದಾ ಏನು ನಿಮ್ಮ ಗಂಡಸತನ? ಮೂರುಮಂದಿ ಕೂಡಿ ಸರಿರಾತ್ರ್ಯಾಗ ಒಬ್ಬ ಹೆಣಮಗಳ್ನ ಬಡೀತೀರಿ. ನೀವು ಗಂಡಸರಾಗಿದ್ರ ನನ್ನ ಬಿಚ್ಚಿ ಒಬ್ಬೊಬ್ಬರ ಬರ‍್ರಿ; ನಿಮ್ಮ ತ್ರಾಣ ಎಷ್ಟೂ ನೋಡ್ತೇನಿ. ಮೂರುಮಂದಿ ಹೆಂಡರನ್ನ ಕೊಂದ ಮೂರ್ಖರು ಇನ್ನೊಬ್ಬಾಕಿನ್ನ ಕೊಲ್ಲಲಿಕ್ಕೂ ಹೇಸೂದಿಲ್ಲ. ನಾ ಸತ್ರ ಪಿಶಾಚಿ ಆಗಿ ನಿಮ್ಮ ಕುತಿಗೀ ಹಿಸಕೇನು. ಕೊಲ್ಲಿರೋ ಕೊಲ್ಲಿರಿ ನನ್ನ" ಎಂದು ವೀರಾವೇಶದಿಂದ ಗರ್ಜಿಸಿದಳು.

ಒಡಕಣ್ಣನು ಮೇಲಕ್ಕೆತ್ತಿದ ಬಡಿಕೆಯು ಅಲ್ಲಿಯೆ ಕಳಚಿ ಕೆಳಗೆ ಬಿದ್ದಿತು. ಹಿಂದಕ್ಕೆ ಒಬ್ಬ ಹೆಂಡತಿಯನ್ನು ಕೊಂದು ಹತ್ತು ಸಾವಿರರೂಪಾಯಿಗಳನ್ನು ತೆತ್ತುಬಂದ ನೆನಪಾಗಿ ಅವನ ಎದೆ ಧಕಧಕ ಹಾರತೊಡಗಿತು. ಶ್ರೀಪಾದಭಟ್ಟರು ಗಾಬರಿಯಾಗಿ ಅವಳಿಗೆ ಕಟ್ಟಿದ ಹಗ್ಗವನ್ನು ಬಿಚ್ಚಿದರು-ಭೀಮಣ್ಣನಾಯಕರು ಅವಳ ಕಾಲಿಗೆರಗಿ ಸೆರೆಗೊಡ್ಡಿ ಬೇಡಿಕೊಳ್ಳಹತ್ತಿದರು. ಶ್ರೀಪಾದಭಟ್ಟರು, "ಭರ್ತೃರ್ವಿಪ್ರಕೃತಾಪಿ ರೋಷಣತಯಾ ಮಾ ಪ್ರತೀಪಂ ಗಮಃ" ಎಂದು ಮುಂತಾಗಿ ಪತಿವ್ರತಾ ಧರ್ಮವನ್ನು ಉಪದೇಶ ಮಾಡಿ ಒಡಕಣ್ಣನನ್ನೂ ನಾಯಕರನ್ನೂ ಕರೆದುಕೊಂಡು ಹೊರಗೆಹೋದರು. ಒಡಕಣ್ಣನ ಇಚ್ಛೆಯಂತೆ ಅವರಿಬ್ಬರೂ ಅಂದು ಪಡಸಾಲೆಯಲ್ಲಿಯೇ ಮಲಗಿಕೊಂಡರು.

ಶಶಿಕಲೆಗೆ ಬೆಳತನಕ ನಿದ್ದೆಹತ್ತಲಿಲ್ಲ. ಅವಳು ಅನೇಕ ಆಲೋಚನೆಗಳ ಮಾಡಿ ಮಾಡಿ, ತನ್ನ ಗಂಡನನ್ನು ತಂತ್ರದಿಂದಲೆ ಹಾದಿಗೆ ತರಬೇಕೆಂದು ನಿಶ್ಚಯಿಸಿದಳು. ಬೆಳಗು ಹರಿಯುತ್ತ ಎದ್ದು ಹಿತ್ತಲದಲ್ಲಿಯ ಬಾವಿಗೆ ಹೋದಳು. ಬಾವಿಯಲ್ಲಿ ಕೊಡವನ್ನು ಬಿಟ್ಟು, ಹಗ್ಗವನ್ನು ತೊಲೆಗೆ ಬಿಗಿಯಾಗಿ ಕಟ್ಟಿ ತಾನೂ ಬಾವಿಯಲ್ಲಿ ಇಳಿದಳು, ಈಸುಬಲ್ಲ ಅವಳಿಗೆ

ನೀರಿನ ಭಯವಿದ್ದಿಲ್ಲ, ಬಾವಿಯಲ್ಲಿ ಈಸುಬಿದ್ದು ನೀರನ್ನು ಬಡಿದು, ಕೊಡದ ಮೇಲೆ ಬಂದು ಕುಳಿತಳು.

ಬೆಳಗಿನಲ್ಲಿ ಭೀಮಣ್ಣನಾಯಕರೊಡನೆ ಮಾತಾಡುತ್ತ ಕುಳಿತ ಒಡಕಣ್ಣನು 'ಥಬ್' ಎಂಬ ಶಬ್ದವನ್ನು ಕೇಳಿ ಗಾಬರಿಯಾದನು. ಒಳಗೆ ಬಂದ್ರು ನೋಡುತ್ತಾನೆ ಶಶಿಕಲೆ ಇಲ್ಲ! ಹಿತ್ತಲಬಾಗಿಲು ತೆರೆದದ್ದನ್ನು ನೋಡಿ ಆತನು ಬಾವಿಗೆ ಧಾವಿಸಿ ಇಣುಕಿನೋಡಿದನು. ಕೂಡಲೆ ಶಶಿಕಲೆಯು ನೀರಲ್ಲಿ ಮುಳುಗಿ. ಹಗ್ಗವನ್ನು ಹಿಡಿದುಕೊಂಡು ಮೇಲಕ್ಕೆದ್ದು, ಮತ್ತೆ ಕೊಡದ ಮೇಲೆ ಕುಳಿತುಕೊಂಡು, "ಅಯ್ಯೋ ಸತ್ತೆ!" ಎಂದು ಕೂಗಿದಳು.

ಒಡಕಣ್ಣನು, "ಗಟ್ಟಿ ಹಗ್ಗ ಹಿಡಕೋ! ನನ್ನ ಮನೆತನಾ ಮುಳಗಸ ಬ್ಯಾಡಾ ನಿನ್ನೆ ನನ್ನ ತಪ್ಪಾತು. ಇನ್ನ ನಿನ್ನ ತಡವೋದಿಲ್ಲ. ವೆಂಕಟರ ಮಣನ ಆಣೆ ಮಾಡಿ ಹೇಳ್ತೇನಿ. ನಿನ್ನ ಸುಳ್ಳಸುಳ್ಳ ಬಡದೆ ನನ್ನ ತಪ್ಪು ಹೊಟ್ಯಾಗ ಹಾಕ್ಕೋ ಕ್ಷಮಾ ಮಾಡೂ" ಎಂದು ದೀನನಾಗಿ ಬೇಡಿಕೊಳ್ಳ ತೊಡಗಿದನು.

ಶಶಿಕಲೆಯು, "ನಾನು ಬದುಕಿ ಉಣ್ಣೋ ಭಾಗ್ಯಾ ಆದ್ರೂ? ಏನದ? ಜೀವಕ್ಕ ಬ್ಯಾಸತ್ತು ಭಾವೀ ಹಾರೀನಿ ಎರಡು ಮುಳುಗು ಮುಳಿಗಿದೆ. ಪ್ರಾಣ ಸಂಕಟಕ್ಕ ಹಗ್ಗಾ ಹಿಡಿದು ಜೋತುಬಿದ್ದೀನಿ. ನಿಮ್ಮ ದರ್ಶನಾನೂ ಆತು ಇನ್ನ ನೀರಾಗ ಮುಳುಗಿ ಪ್ರಾಣಾ ಬಿಡತೀನಿ" ಎಂದು ತಡವರಿಸುತ್ತ ನುಡಿದಳು.

ಆಗ ಒಡಕಣ್ಣನು "ನೀ ಜೀವಾ ಕಳಕೊಂಡರ ನಾನೂ ಹಾರಿಕೋತೇನಿ ಸಿಟ್ಟಿನ ಕೈಯಾಗ ಬುದ್ಧೀ ಕೊಟ್ಟು ಕೆಟ್ಟ ಕೆಲಸಾ ಮಾಡೀನಿ. ನನ್ನ ಜೀವ ನಿನ್ನ ಕೈಯಾಗದ" ಎಂದು ಹಗ್ಗವನ್ನು ಹಿಡಿದು ಬಾವಿಯಲ್ಲಿ ಹಾರುವವ ನಂತೆ ನಟಿಸಿದನು.

ಅವಳು "ನಾ ಸತ್ತು ಪತಿಘಾತಕಿ ಅನಿಸಿಕೊಳ್ಳಲಾರೆ. ಆತು ಇವತ್ತು ಸಾಯೋದಿಲ್ಲ. ಇನ್ನು ಮುಂದ ಅಂಥಾ ಪ್ರಸಂಗ ಬಂದ್ರ ನನ್ನ ಪ್ರಾಣ ನನ್ನ ಕೈಯಾಗದ. ನೀವೇನು ಹಾರಬ್ಯಾಡ್ರಿ ನನ್ನ ಮ್ಯಾಲಕ್ಕ ತಗಸರಿ" ಎಂದು ಹೇಳಿದಳು.

ಅಷ್ಟರಲ್ಲಿ ಶ್ರೀಪಾದಭಟ್ಟರೂ ಭೀಮಣ್ಣನಾಯಕರೂ ಇಬ್ಬರು ಗಟ್ಟಿಗರನ್ನು ಕರೆತಂದು ತೊಟ್ಟಿಲನ್ನು ಬಿಟ್ಟು, ಅವಳನ್ನು ಮೇಲಕ್ಕೆ ತಂದರು. ಅವಳು ನಿಸ್ತೇಜಳಾಗಿ, ಗದಗದ ನಡುಗುತ್ತಿದ್ದಳು. ಅವಳನ್ನು ಒಳಗೆ ಕರೆದೊಯ್ದು, ಅಗ್ಗಿ ಹಾಕಿ ಕಾಸಿಕೊಳ್ಳಲಿಕ್ಕೆ ಹೇಳಿದರು.

ಒಡಕಣ್ಣನು ಹೊರಗೆ ನಿಂತು ಕೂಡಿದ ಜನರಿಗೆ, "ನಮ್ಮ ಪ್ರಪಂಚಾನ ಮುಳುಗೋಹೊತ್ತು ಬಂದಿತ್ರೀ. ಕುಲಸ್ವಾಮಿ ವೆಂಕಟರಮಣ ಕಾದಾ ನೀರು ಸೇದಲಿಕ್ಕೆ ಹೋಗಿ, ಆಧಾರ ತಪ್ಪಿ ಭಾವ್ಯಾಗ ಬಿದ್ದಿದ್ಲು. ನನ್ನ ಪುಣ್ಯ ಇತ್ತೂ ಅಂತ ಬದಕಿ ಬಂದ್ಲು" ಎಂದು ಹೇಳಹತ್ತಿದನು.

ಜನರು, "ಹೌದು, ನಿಮ್ಮ ಪುಣ್ಯ ಇನ್ನೂ ಬಲವತ್ತರ ಅದ" ಎಂದು ಹೊರಟುಹೋದರು. ಒಡಕಣ್ಣನು ಶಶಿಕಲೆಯ ಮೇಲೆ ಬಹಿರಂಗದಲ್ಲಿ ಬಹಳ ಅಂತಃಕರಣವನ್ನು ತೋರುತ್ತಿದ್ದರೂ ಅಂತರಂಗದಲ್ಲಿ ಯಾವಾಗಲೂ ಕುದಿಯುತ್ತಿದ್ದನು. ತನ್ನ ಹೆಂಡತಿಗೆ ಹನುಮಂತರಾಯನೊಬ್ಬನು ನೆರವಾಗುತ್ತಿದ್ದುದನ್ನು ಕಂಡು ಅವನಿಗೆ ಭಯವುಂಟಾಯಿತು. ಶಶಿಕಲೆಯು ಸತ್ತಿದ್ದರೆ ತಾನು ಸೆರೆಮನೆಯ ಸೋಬತಿಯಾಗುವ ಪ್ರಸಂಗಬರುತ್ತಿತ್ತು. ಈ ಎಟ್ಟ ಹೆಣ್ಣನ್ನು ಮನೆಯಲ್ಲಿ ಇಟ್ಟುಕೊಳ್ಳುವುದು ಘಟಸರ್ಪವನ್ನು ಇಟ್ಟುಕೊಂಡಂತೆ. ಇನ್ನೂ ಯಾವ ಪ್ರಸಂಗ ತಂದು ಒಡ್ಡುತ್ತಾಳೆಯೊ, ಏನೋ! ಸರಿ ಯಾವುದಾದರೂ ಒಂದು ಉಪಾಯದಿಂದ ಇವಳನ್ನು ತವರೂರಿಗೆ ಹಾಕಿಬಿಟ್ಟರೆ ಬದುಕಿಕೊಂಡೇನು ಎಂದುಕೊಂಡು ಒಡಕಣ್ಣನು ಯೋಚಿಸಿದನು.

ಅವನು ಅದರಂತೆ ಭೀಮಣ್ಣನಾಯಕರಿಂದೊಂದು ಪತ್ರವನ್ನು ಬರೆಯಿಸಿ ಅದನ್ನು ಪುಷ್ಪಪುರದ ಅಂಚೆಯಕಟ್ಟೆಗೆ ಹಾಕಿಸಿ, ಮರುದಿನವೆ ಹನುಮಾಪುರಕ್ಕೆ ಹೊರಟುಹೋದನು. ಅವನು ಹಾಕಿಸಿದ ಪತ್ರವು ಶಶಿಕಲೆಯ ಕೈಗೆ ಬಂತು. ಅದನ್ನು ಓದಿ ನೋಡಿ ಅವಳು ಗಾಬರಿಯಾದಳು. ಅವಳ ತಾಯಿಯು ಮರಣೋನ್ಮುಖಳಾಗಿರುವಳಂತೆ! "ನಾನು ನನ್ನ ತಾಯೀ ಮೋರೀ ಹ್ಯಾಂಗ ಕಂಡೇನು" ಎಂದು ಅವಳು ಅಳತೊಡಗಿದಳು. ಸಖಿಯರ ಕೂಡಿ ಸಮಾಧಾನ ಹೇಳಿದರು.

ಶ್ರೀಪಾದಭಟ್ಟರು ಆಳನ್ನು ಕಳುಹಿ ಒಡಕಣ್ಣನನ್ನೂ ಅದೇ ರಾತ್ರಿಯಲ್ಲಿ ಕರೆಯಿಸಿಕೊಂಡರು. ಮರುದಿನ ಬೆಳಗಾಗುತ್ತಲೆ ಒಡಕಣ್ಣನು ಚಕ್ಕಡಿಯನ್ನು ಸಿದ್ಧಪಡಿಸಿ, ಶಶಿಕಲೆಗೆ, "ನೀನು ವಸ್ತ್ರಾವಡಿವೀ ಏನು ವೈಬ್ಯಾಡ. ನಾಕಾರು ದಿನದಾಗ ಹೊರಟು ಬಾ" ಎಂದು ಹೇಳಿದನು. ದುಃಖಸಂತಪ್ತಳಾದ ಶಶಿಕಲೆಗೆ ತವರೂರಿಗೆ ಹೋಗುವ ಆತುರದಲ್ಲಿ ಒಡಕಣ್ಣನ ತಂತ್ರವೇ ಹೊಳೆಯಲಿಲ್ಲ. ಅವಳು ಒಂದೆರಡು ಸೀರೆಕುಪ್ಪುಸಗಳನ್ನು ಮಾತ್ರ ತೆಗೆದುಕೊಂಡು ಹೊರಟಳು. ಭೀಮಣ್ಣನಾಯಕರು ಪುಷ್ಪಪುರದ ನಿಲುಮನೆಯಲ್ಲಿ ಅವಳಿಗೆ ಟಿಕೀಟು ಕೊಟ್ಟು, ಅವಳನ್ನು ಹೆಣ್ಮಕ್ಕಳ ಡಬ್ಬಿಯಲ್ಲಿ ಕುಳ್ಳಿರಿಸಿ, ತಾವು ಹಿಂದಿನ ಡಬ್ಬಿಯಲ್ಲಿಯೆ ಕುಳಿತುಕೊಳ್ಳುವೆವೆಂದು ಹೊರಟುಹೋಹೋದರು. ವಿಜಯಪುರದ ನಿಲುಮನೆಯಲ್ಲಿ ಬಂದು ನೋಡಲು ಭೀಮಣ್ಣನಾಯಕರ ಸುಳಿವೆ ಇಲ್ಲ. ಇದೇನೋ ಮೋಸವಿರಬೇಕೆಂದು ಆಗ ಆಕೆಗೆ ಹೊಳೆಯಿತು. ಆದರೆ ಮಾಡುವುದೇನು? ಅವಳ ಹತ್ತಿರ ಒಂದು ಕಾಸು ಕೂಡ ಇರಲಿಲ್ಲ.

ಆಕೆಯು ಹಾಗೆಯೆ ನಡೆಯುತ್ತ ಮನೆಗೆ ಬಂದು ನೋಡಿದರೆ ಅವಳ ತಾಯಿಯು ಅಕ್ಕಿಬೇಳೆಗಳನ್ನು ಹಸನಮಾಡುತ್ತಾ ನಡುಮನೆಯಲ್ಲಿ ಕುಳಿತುಕೊಂಡಿದ್ದಳು! ಮಗಳು ಒಬ್ಬಳೆ ಅಕಸ್ಮಾತ್ತಾಗಿ ಬಂದದ್ದನ್ನು ಕಂಡು ಬೆರಗಾಗಿ ತಾಯಿಯು, "ಇದೇನು? ಎಲ್ಲಾ ಕ್ಷೇಮ?" ಎಂದಳು. ಶಶಿಕಲೆಯು, "ಅವ್ವಾ ಅನರ್ಥ ಆತು. ನನ್ನ ಬಾಳುವಿ ಹಾಳಾತು. ಎಷ್ಟು ಜತನದಿಂದ ಇದ್ರೂ ಕಡಿಗೆ ನಾ ತಂತ್ರದ ಬಲಿಗೆ ಬಿದ್ದೆ ಉಪಾಯ ಇಲ್ಲ" ಎಂದು ಉಸಿರ್ಗರೆದಳು.

ಸದಾಶಿವರಾಯರು ಮಗಳಿಂದ ಅಳಿಯನ ಮನೆಯಲ್ಲಿ ನಡೆದ ಸಮಾಚಾರವನ್ನೆಲ್ಲ ತಿಳಿದುಕೊಂಡು ಅವಳಿಗೆ "ಮುಂದೆ ಬಂದದ್ದು ನೋಡಿಕೊಳ್ಳೋಣ. ನೀ ಸಮಾಧಾನದಿಂದಿರು" ಎಂದು ಸಂತೈಸಿದರು. ನಾಲ್ಕಾರು ದಿನಗಳಲ್ಲಿ ಅವರಿಗೆ ಓಲೆಯೊಂದು ಬಂತು.

"..........ನೀವು ನಮ್ಮ ಮನೆಯಲ್ಲಿಯ ಹತ್ತು ಸಾವಿರ ರೂಪಾಯಿ ಎತ್ತಿಹಾಕಿಕೊಂಡು ಹೋಗಿರುವಿರಿ. ಆ ದುಡ್ಡನ್ನು ಕೊಟ್ಟು ಅವಳನ್ನು

ಇಲ್ಲಿಗೆ ಕಳಿಸಿರಿ. ಇಲ್ಲದಿದ್ದರೆ ಅವಳು ಸಾಯುವವರೆಗೆ ನಿಮ್ಮಲ್ಲಿಯೇ ಇರತಕ್ಕದ್ದು. ತಿಳಿಯುವದು. ಇಂತೀ ನಮಸ್ಕಾರಗಳು,

ಶ್ರೀವಲ್ಲಭರಾವ ದೇಸಾಯಿ

ಸದಾಶಿವರಾಯರು ಆ ಪತ್ರದ ಸುದ್ದಿಯನ್ನೆ ಹೊರಗೆಡವಲಿಲ್ಲ

ಒಡಕಣ್ಣನು ತಿಂಗಳೊಪ್ಪತ್ತು ಉತ್ತರದ ಹಾದಿ ನೋಡಿ ನೋಡಿ ಕೊನೆಗೆ ಶಶಿಕಲೆಯನ್ನು ಬಿಟ್ಟದ್ದೇ ನಿರ್ಧಾರ ಎಂದುಕೊಂಡು ಒಂಟಿಗನಾಗಿ ಉಳಿತನು.

## ೨೪. ಗಂಗೊಳ್ಳಿಯ ಗಿರಜಿ.

ಶಂಕರರಾಯನು ಮುಪ್ಪಿನಕಾಲದಲ್ಲಿ ಮೂರನೆಯ ಹೆಂಡತಿಯನ್ನು ಮಾಡಿಕೊಂಡು ಕೃತಪುರದಲ್ಲಿ ವಾಸವಾಗಿದ್ದನು. ಅವನ ತಮ್ಮನ ಮಗನಾದ ಮಾಧವನು ಐದನೆಯ ಇಯತ್ತೆಗೇ ಇಂಗ್ಲಿಷ ಶಾಲೆಗೆ ಶರಣು ಹೊಡೆದನು; ಆದರೆ ಅವನ ಸೋದರತ್ತೆಯ ಮೊಮ್ಮಗನಾದ ಚಿದಂಬರನು ಮ್ಯಾಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದನು. ಒಡಕಣ್ಣನು ಹೆಂಡತಿಯನ್ನು ಬಿಟ್ಟು ಬಿಟ್ಟದ್ದರಿಂದ ಅವನ ಮನೆಯಲ್ಲಿ ಯಾರೂ ಇದ್ದಿಲ್ಲ. ಅವನು ಶಂಕರರಾಯನನ್ನು ಸಕುಟುಂಬವಾಗಿ ಬೊಮ್ಮೀಗೇರಿಗೆ ಕರೆಯಿಸಿಕೊಂಡು ತನ್ನ ಮನೆಯಲ್ಲಿಯೆ ಇರಿಸಿಕೊಂಡನು. ಶಂಕರಾಯನ ನಾದಿನಿಗೂ, ಅವನ ಮೂರನೆಯ ಹೆಂಡತಿಗೂ ವ್ಯಾಜ್ಯ ಹುಟ್ಟಿದ್ದರಿಂದ ಒಡಕಣ್ಣನು ಶಂಕರರಾಯನ ಆಸ್ತಿಯನ್ನು ಎರಡು ಪಾಲುಮಾಡಿ. ಮಾಧವನಿಗೆ ಅರ್ಧಪಾಲನ್ನು ಕೊಡಿಸಿದನು. ಶಂಕರರಾಯನು ಒಡಕಣ್ಣನ ಹೇಳಿಕೆಯನ್ನು ಮರೆಯದೆ, ಪಿತ್ರಾರ್ಜಿತವಾದ ಜಂಗಮ ಆಸ್ತಿಯೇನೂ ಇಲ್ಲವೆಂದು ಹೇಳಿಬಿಟ್ಟನು

ಮಾಧವನಿಗೆ ಚಿದಂಬರನ ತಂಗಿಯನ್ನು ಕೊಟ್ಟು ಮದುವೆಯಾಯಿತು. ಅವನು ಬೊಮ್ಮೀಗೇರಿಯಲ್ಲಿಯೇ ಬೇರೊಂದು ಮನೆಯನ್ನು ಮಾಡಿಕೊಂಡು ಸಂಸಾರಕ್ಕೆ ತೊಡಗಿದನು. ಆಸ್ತಿವಿಭಾಗದ ಕಾಲಕ್ಕೆ ಒಡಕಣ್ಣನು ಚಿದಂಬರನಿಗೂ ಎರಡು ಹೊಲಗಳನ್ನು ಕೊಡಿಸಿದ್ದನು. ಅವನಿಗೆ ತಾಲೂಕ ಕಚೇರಿಯಲ್ಲಿ ಕೆಲಸವಾಗಿ ಮದುವೆಯೂ ಆಯಿತು. ಒಡಕಣ್ಣನ ಕಣ್ಣೆದುರಿಗೆ ಎಲ್ಲರ ಮದುವೆಯಾಯಿತು. ತನಗೆ?

ಶಂಕರರಾಯನು ಮುಪ್ಪಿನಕಾಲಕ್ಕೆ ಮೂವರು ಮಕ್ಕಳನ್ನು ಪಡೆದನು. ಮಾಧವನಿಗೂ ಎರಡು ಹೆಣ್ಣು ಹುಟ್ಟಿದುವು. ಚಿದಂಬರನ ಹೆಂಡತಿಯು ಗಂಡು ಮಗುವನ್ನು ಹೆತ್ತಳು. ಒಡಕಣ್ಣನಿಗೆ ಬಹಳ ಕಸಿವಿಸಿಯಾಯಿತು. ತನ್ನ ಬಾಳುವೆ ಏನಾಯಿತು? ನಾಲ್ವರನ್ನು ಮದುವೆಯಾದರೂ ಮಕ್ಕಳ ಮೋರೆಯನ್ನು ಕಾಣಲಿಲ್ಲ. ಪರರ ಕೈಬಾಯಿಗಳನ್ನು ನೋಡುತ್ತ ಒಂಟಿಗನಾಗಿ ಕುಳಿತುಕೊಳ್ಳಬೇಕಾಯಿತಲ್ಲ! ತನಗಿಂತ ಚಿಕ್ಕವರು ಮೊಮ್ಮಕ್ಕಳನ್ನು ಕಂಡರೂ—

ಒಡಕಣ್ಣನಿಗೆ ಸಂಕಟವಾಯಿತು. ಶಂಕರರಾಯರನ್ನು ಕಂಡು ಅವನಿಗೆ ಹೊಟ್ಟೆಯುರಿಯಾಯಿತು. ಅವನ ಹೆಂಡತಿಗೆ ಇವನ ಆಳಿಕೆನಲ್ಲಿರುವುದು ಸರಿದೋರದ್ದರಿಂದ ಅವಳು ತನ್ನ ಗಂಡನಿಗೆ ಹೇಳಿ ಬೇರೊಂದು ಮನೆಯನ್ನು ಬಾಡಿಗೆ ಹಿಡಿದು ಅಲ್ಲಿಗೆಹೋದಳು. ಒಡಕಣ್ಣನಿಗೆ ಒಂಟಿಗನಾಗಿರುವುದು ಅಸಹ್ಯವೆನಿಸಿತು.

ಇನ್ನೊಂದು ಮದುವೆಮಾಡಿಕೊಂಡು ಮಕ್ಕಳನ್ನು ಪಡೆಯಬೇಕೆಂಬ ಆಶೆಯು ಬಲವತ್ತರವಾಯಿತು. ಆದರೆ ಮೂವರು ಹೆಂಡಿರನ್ನು ಮಣ್ಣುಗೂಡಿಸಿ, ನಾಲ್ಕನೆಯವಳನ್ನು ದಿಕ್ಕೇಡು ಮಾಡಿದವನಿಗೆ ಹೆಣ್ಣು ಕೊಡುವವರಾರು? ಒಡಕಣ್ಣನ ಕೃತಿಯಿಂದ ಕನ್ಯಾವರ ಸಂಘಟನಾ ಮಂಡಳದವರೂ ಅವದ ವಿರೋಧಿಗಳಾಗಿದ್ದರು. ಕೊನೆಗೆ ಅವನು ಸಾವಿರಾರು ರೂಪಾಯಿಗಳ ಕನ್ಯಾದಕ್ಷಿಣೆಯನ್ನು ಕೊಡಲಿಕ್ಕೂ ಸಿದ್ಧನಾದನು.

ಭೀಮಣ್ಣನಾಯಕರು ಅವನನ್ನು ಕರೆದುಕೊಂಡು ಪಂಢರಪುರಕ್ಕೆ ತೆರಳಿದರು. ಅಲ್ಲಿ ಹನ್ನೆರಡುನೂರು ರೂಪಾಯಿಗಳಿಗೆ ಒಬ್ಬ ಕನ್ನಿಕೆಯನ್ನು ಗೊತ್ತುಮಾಡಿ, ಐದುನೂರು ರೂಪಾಯಿಗಳನ್ನು ಮುಂಗಡಕೊಟ್ಟರು. ಒಡಕಣ್ಣನು ಸಂತೋಷದಿಂದ ಉಬ್ಬಿಕೊಂಡನು.

ಆದರೆ ತಿರುಗಿ ವಿಚಾರಿಸಲಾಗಿ ಅದು ಅನಾಥ ಬಾಲಕಾಶ್ರಮದ ಹುಡಿಗೆಯೆಂಬುದು ಅವರಿಗೆ ತಿಳಿದುಬಂತು! ಒಡಕಣ್ಣನು ಐದುನೂರು ರೂಪಾಯಿಗಳನ್ನು ಕಳೆದುಕೊಂಡು ಹಿಂದಿರುಗಿದನು. ಗಿರಿಜೆಯೊಬ್ಬಳು ಅವನ ಕೈಹಿಡಿಯಲಿಕ್ಕೆ ಸಿದ್ಧಳಾಗಿ ಬರುವವಳಿದ್ದಳೆಂದು ಅವನಿಗೆ ಕನಸಿನಲ್ಲಿಯೂ ಹೊಳೆದಿರಲಿಲ್ಲ.

ಗಿರಿಜೆಯು ಗಂಗೊಳ್ಳಿಯ ಗೌಡರ ಮಗಳು ಅವಳು ಹುಟ್ಟಿದ ನಾಲ್ಕೈದು ವರ್ಷಗಳಲ್ಲಿಯೆ ಅವಳ ತಂದೆಯು ತೀರಿಕೊಂಡಿದ್ದನು. ಬಡ ತನ, ಮೇಲೆ ಐವರು ಮಕ್ಕಳು! ಗಿರಿಜೆಯ ತಾಯಿಯು ಶ್ರೀಮಂತರ ಮನೆ ಯಲ್ಲಿ ಅಡುಗೆ ನೀರುಗಳನ್ನು ಮಾಡಿ ಮಕ್ಕಳನ್ನು ಸಲಹಬೇಕಾಯಿತು. ಹೇಗೋ ಶ್ರಮಬಟ್ಟು ಇಬ್ಬರು ಹೆಣ್ಣುಮಕ್ಕಳ ಮದುವೆಮಾಡಿದಳು. ಹಿರಿ ಯಮಗನು ದುಡಿಯದೆ ಮನೆಹಿಡಿದು ಕುಳಿತಿದ್ದನು. ಚಿಕ್ಕಮಗನಾದ ಶೇಷನು ಅಲ್ಪ ಸ್ವಲ್ಪ ವಿದ್ಯೆಯನ್ನು ಕಲಿತವನು. ಶ್ರೀಮಂತಗ್ರಹಸ್ಥ ನೊಬ್ಬನು ತನ್ನ ವೈರಿಯನ್ನು ಬಗ್ಗುಬಡಿಯಬೇಕೆಂದು ಶೇಷನನ್ನು ಒಂದು ದೊಡ್ಡ ಮನೆತನಕ್ಕೆ ದತ್ತಕಮಾಡಿ, ವ್ಯಾಜ್ಯ ಹೂಡಿದನು. ಗಿರಿಜೆಯ ತಾಯಿಯು ಆ ಶ್ರೀಮಂತನನ್ನೆ ಆಶ್ರಯಿಸಿದಳು.

ಹೊಟ್ಟೆಯೊಂದು ತುಂಬಿದರೆ ಆಯಿತೆ? ಗಿರಿಜೆಗೆ ಹದಿನೈದು ವರ್ಷ ವಾಗಿದೆ. ಮದುವೆ ಹೇಗಾದೀತು? ಹುಡುಗಿ ನೋಡಿದರೆ ಕುರೂಪಿ: ತಿಳಿ ನೀಲಿಯ ಬಣ್ಣ, ಕಾಡಿಗೆಗಣ್ಣು, ಕಪ್ಪುತುಟಿ, ಕರ್ಕಶಧ್ವನಿ. ವರನನ್ನು ಹುಡುಕಿ ಹುಡುಕಿ ತಾಯಿಯು ಬೇಸತ್ತಳು. ಗಿರಿಜೆಯಾದರೋ ಚಿಕ್ಕಂದಿ ನಲ್ಲಿ ಸ್ವೇಚ್ಛೆಯಾಗಿ ತಿರುಗಿದಂತೆ ಈಗಲೂ ತಿರುಗುತ್ತಾಳೆ. ಓದು ಬರೆಹ ಬಾರದಿದ್ದರೂ, ಮಾತಿನಲ್ಲಿ ಬಲುಜಾಣೆಯಾಗಿ ಕಂಡವರೊಡನೆ ಹರಟೆಗೆ ನಿಲ್ಲುತ್ತಾಳೆ. ಅವಳು ಮೈನೆದು ಮೂರು ವರ್ಷವಾದರೂ ಹರೆಯದ ಹುಡುಗರ ಸಂಗಡ ಸರಸವಾಡುವುದೆಂದರೇನು? ಊರವರು ಅವಳ ಮೇಲೊಂದು ಅಪವಾದವನ್ನೆ ಹೊರಿಸಿದರು.

ಅದು ಗಿರಿಜೆಯ ಅಣ್ಣನ ಕಿವಿಗೆ ಬಿದ್ದಿತು. ಇನ್ನು ಮೇಲೆ ಇವಳ ಲಗ್ನವಾಗುವುದೆ ಅಸಂಭವವೆಂದು ಅವನಿಗೆನಿಸಿತು. ತಾಯಿಯನ್ನು ವಿಚಾ ರಿಸಿ, ಅಕ್ಕನ ಗಂಡನ ಮರೆಹೊಕ್ಕು. ಒಬ್ಬ ಬಡವನಿಗೆ ಅವಳನ್ನು ಧಾರೆ ಯೆರೆದುಕೊಟ್ಟು ಅಪವಾದದಿಂದ ಮುಕ್ತನಾಗಬೇಕೆಂದು ಅವನು ಚಡಪಡಿ ಸಿದನು. ಕೈಯಲ್ಲಿ ಕಾಸಿಲ್ಲ; ಎಲ್ಲಿಯೂ ದುಡ್ಡು ದೊರೆಯುವಂತಿಲ್ಲ. ಏನು ಮಾಡಬೇಕು? ಕೊನೆಗೆ ಅವನ ಅಕ್ಕನ ಗಂಡನು ಕರುಣೆಯಿಂದ ಲಗ್ನದ ವೆಚ್ಚವನ್ನು ಹೊರವುದಕ್ಕೆ ಒಪ್ಪಿಕೊಂಡನು.

ಇಬ್ಬರೂ ಕೂಡಿ ವರನನ್ನು ಶೋಧಿಸುತ್ತ ಹೊರಟರು. ಸುತ್ತಲೂ ಹತ್ತುಹರದಾರಿ ತಿರುಗಿದರೂ ಅವರಿಗೆ ಬೇಕಾದ ವರನು ಸಿಗಲಿಲ್ಲ. ಬಡ ಹುಡುಗರನ್ನು ಹುಡುಕುತ್ತಾ ಬೊಮ್ಮೀಗೇರಿಗೆ ಬಂದರು. ಅಲ್ಲಿಯೂ ನಿರಾಶೆಯಾಗಿ ಮುಂದೆ ಹೊರಡುವವರಿದ್ದರು. ಅಷ್ಟರಲ್ಲಿ ಈ ಸುದ್ದಿಯನ್ನು ಕೇಳಿ ಶ್ರೀಪಾದಭಟ್ಟರು ಅವರನ್ನು ಕರೆಯಿಸಿಕೊಂಡರು. ಒಡಕಣ್ಣನ ವಿವಾಹವಿಷಯುವನ್ನೆತ್ತಿ, "ದೊಡ್ಡ ವತನದಾರರು. ನಿಮುಗ ವ್ಯಾಜ್ಯದಾಗ ನೆರವಾಗೋ ಅವರು. ಏನ್ರೆಪ. ಈ ಊರಾಗ ದುರ್ಜನರ ಉಪದ್ರ್ವದಿಂದ ಅವರ ಲಗ್ನ ತಡದು ನಿಂತದ. ನನ್ನ ಮಾತು ನಂಬ್ರಿ, ಧೈರ್ಯಮಾಡ್ರಿ. ನಿಮ್ಮ ತಂಗೀ, ನೀವೂ ಭಾಗ್ಯಶಾಲಿಗಳಾಗ್ತೀರಿ. ಮತ್ತ ನಿಮುಗ ಒಂದು ಕಾಸುಸಹಿತ ಖರ್ಚಾಗಧಾಂಗ ಲಗ್ನಮಾಡಸ್ತೇನಿ. ಮೂರು ಸೇರು ಭಂಗಾರಾ ಬೇಕಾದಂಥಾ ವಸ್ತ್ರಾ ಕನ್ಯಾದಾನ ಮೈಮ್ಯಾಲ ಇಡಸತೇನಿ ನೋಡ್ರಿ, ನಿಮುಗ ಇಂಥಾ ವರಾ ಸಿಗಲಿಕ್ಕಿಲ್ಲ. ವಿಚಾರಮಾಡ್ರಿ" ಎಂದು ನುಡಿದರು.

ಇನ್ನು ಕೆಲದಿನಬಿಟ್ಟರೆ ಗಿರಿಜೆಯ ಲಗ್ನವಾಗುವುದೆ ಅಶಕ್ಯವೆಂದು ಅವಳಣ್ಣನಿಗೆ ಮನವರಿಕೆಯಾಗಿತ್ತು. ಮನೆತನದ ಮರ್ಯಾದೆ ಕಳೆದುಕೊಳ್ಳುವದಕ್ಕಿಂತ ಮುದುಕನಿಗೆ ಮದುವೆಮಾಡಿ- ಕೊಡುವುದೇನು ಕೇಡಲ್ಲವೆಂದು ಅವನು ನಿರ್ಣಯಿಸಿದನು. ಅನ್ನ ಹಳಸಿದ್ದಕ್ಕೂ ನಾಯಿ ಹಸಿದದ್ದಕ್ಕೂ ಸಮಯಕೂಡಿತು.

ಶ್ರೀಪಾದಭಟ್ಟರು ಅವರಿಬ್ಬರನ್ನೂ ಒಡಕಣ್ಣನಮನೆಗೆ ಕರೆದುಕೊಂಡು ಹೋದರು. ದೇಸಾಯರ ಶ್ರೀಮಂತಿಕೆಗೂ, ಒಡಕಣ್ಣನ ಸವಿಮಾತುಗಳಿಗೂ ಅವರು ಮರುಳಾದರು. ಲಗ್ನದ ವೆಚ್ಚವನ್ನೆಲ್ಲ ತಾನೇ ವಹಿಸುವೆನೆಂದು ಒಡಕಣ್ಣನು ಒಪ್ಪಿಕೊಂಡದ್ದಲ್ಲದೆ, ಗಿರಿಜೆಯ ಅಣ್ಣನ ಕೈಯಲ್ಲಿ ಅವರ ವೆಚ್ಚಕ್ಕೆಂದು ಇನ್ನೂರು ರೂಪಾಯಿಗಳನ್ನೂ ಕೊಟ್ಟುಬಿಟ್ಟನು.

ಮುಂದೆ ಹತ್ತುದಿನಗಳಲ್ಲಿಯೆ ಒಡಕಣ್ಣನ ವಿವಾಹವಾಯಿತು. ಗಿರಿಜೆಯನ್ನು ಒಡಕಣ್ಣನಿಗೆ ಒಪ್ಪಿಸಿ, ತಾನೊಂದು ದೊಡ್ಡ ಕುತ್ತದಿಂದ ಪಾರಾದೆನೆಂದು ಅವಳ ತಾಯಿಯು ಎದೆ ಹಗುರುಮಾಡಿಕೊಂಡಳು. ಮುಂದೆ ಹದಿನೈದು ದಿವಸಗಳಲ್ಲಿಯೆ ಫಲಶೋಭನಪ್ರಸ್ತವಾಯಿತು.

ಒಡಕಣ್ಣನ ವಯಸ್ಸು ಐವತ್ತಕ್ಕೆ ಮಿಕ್ಕಿದ್ದರೇನು? ಅವರು ಷಡ್ಭುಜನಾಗಿ ಸಂಸಾರ ಸುಖವನ್ನು ಅನುಭವಿಸ ತೊಡಗಿದನು. ಇವೇ ಸಮಯಕ್ಕೆ ಒಡಕಣ್ಣನ ಆಶ್ರಯದಲ್ಲಿದ್ದ ಗುರುನಾಥ ದೀಕ್ಷಿತನು (ವಿಧುರನಾಗಿ, ಮೂರು ವರ್ಷ ಮನೆಯನ್ನು ಬಿಟ್ಟುಹೋದವನು.) ಯೋಗಸಾಧನೆಯನ್ನು ಕಲಿತುಕೊಂಡು ಬೊಮ್ಮೇಗೇರಿಗೆ ಬಂದಿದನು. ವೃದ್ಧರನ್ನು ತರುಣರನ್ನಾಗಿ ಮಾಡುವ ಯೋಗಸಾಧನೆಯು ಅವನಿಗೆ ಬರುತ್ತದಂತೆ! ಇದನ್ನ ಕೇಳಿದೊನೆಯೆ ಒಡಕಣ್ಣನೂ ಶಂಕರರಾಯನೂ ಬಾಯಿತೆರೆದುಕೊಂಡು ಅವನಲ್ಲಿಗೆ ಹೋಗಿ, ತಮಗೆ ಆ ಯೋಗವನ್ನು ದಯಪಾಲಿಸಬೇಕೆಂದು ಬೇಡಿಕೊಂಡರು.

ಒಡಕಣ್ಣನ ಅಟ್ಟದಮೇಲೆ ಯೋಗಾಸನವು ಸಿದ್ಧವಾಯಿತು. ಗುರುನಾಥ ದೀಕ್ಷಿತನು ಪದ್ಮಾಸನವನ್ನು ಹಾಕಿ ಕುಳಿತುಕೊಂಡು ಯೋಗಸಾಧನದ ಮಟ್ಟನ್ನು ಅಟ್ಟಹಾಸದಿಂದ ತೋರಿಹತ್ತಿದನು. ಅವನು ಶ್ವಾಸವನ್ನು ಏರಿಸುವಾಗಲೂ, ಇಳಿಸುವಾಗಲೂ ಆಗುವ ಶಬ್ದವನ್ನು ಕೇಳಿ ಮರುಳು ಜನರು ಮೋಹಿತರಾದರು. ಒಡಕಣ್ಣನಂತೂ ದೀಕ್ಷಿತರ ಯೋಗ್ಯತೆಯು ಬಹಳ ಮಿಗಿಲಾದದ್ದೆಂದು ಹೊಗಳತೊಡಗಿದನು. ಈ ಅದ್ಭುತವನ್ನು ನೋಡುವುದಕ್ಕೆ ಬಹುಜನರು ಬರತೊಡಗಿದರು. ಜಟಾಧಾರಿಯಾಗಿ, ಮೈತುಂಬ ಭಸ್ಮವನ್ನು ಬಳಿದುಕೊಂಡು, ಕೊರಳಲ್ಲಿ ರುದ್ರಾಕ್ಷಿಯ ಮಾಲೆಯನ್ನು ಧರಿಸಿ, ಪದ್ಮಾಸನ ಹಾಕಿಕೊಂಡು ಶಾಲಿಗ್ರಾಮದ ಶಿಲೆಯಂತೆ ಯೋಗಾರೂಢನಾಗಿ ಕುಳಿತಿರುವ ದೀಕ್ಷಿತರ ಮೂರ್ತಿಯನ್ನು ನೋಡಿ ಕೆಲವರು ಚಕಿತರಾದರು. ಹಲವರು ಇದೊಂದು ಸುಡುಗಾಡಸಿದ್ಧರ ಆಟ ಹೂಡಿರುವನೆಂದು ನಿಂದಿಸಿದರು.

ಜನರು ಏನೆಂದರೇನು? ಶಂಕರರಾಯನೂ ಒಡಕಣ್ಣನೂ ದೀಕ್ಷಿತರಿಂದ ಯೋಗದೀಕ್ಷೆಯನ್ನು ಪಡೆದರು. ಗಿರಿಜೆಯೂ ದೀಕ್ಷಿತರ ಸೇವೆಯನ್ನು ಮಾಡಹತ್ತಿದಳು. ಬರುಬರುತ್ತ ದೀಕ್ಷಿತರ ಪ್ರತಿಷ್ಠೆಯು ಒಡಕಣ್ಣನ ಮನೆಯಲ್ಲಿ ಬೆಳೆಯಹತ್ತಿತು. ದೀಕ್ಷಿತರು ಒಡಕಣ್ಣನಿಗೆ, "ದಶರಥರಾಯ ಮುಪ್ಪಿನಕಾಲಕ್ಕೆ ಗುರುಗಳ ಅನುಗ್ರಹದಿಂದಲೇ ಮಕ್ಕಳನ್ನ ಪಡೆದ. ಚಿತ್ರವೀರ್ಯ ವಿಚಿತ್ರವೀರ್ಯರ ಮನೆತನ ನಿಲ್ಲಲಿಕ್ಕೆ ಸದ್ಗುರುಗಳೇ ಕಾರಣರು. ಹರ ಮುನಿದರೂ ಗುರು ಕಾಯುತಾನ" ಎಂದು ಉಪದೇಶಮಾಡಹತ್ತಿದರು. ಹೇಗ್ಗಾ

ದರೂ ಮಕ್ಕಳಾಗಿ ಮನೆತನವು ನಿಂತರೆ ಸಾಕೆಂದು ಒಡಕಣ್ಣನು ದೀಕ್ಷಿತರು ಹೇಳಿದಂತೆ ಕೇಳತೊಡಗಿದನು.

ಗಿರಿಜೆಗೆ ಮೊದಲಿಂದಲೂ ಲಜ್ಜೆಯ ಗುರುತೇ ಇರದ್ದರಿಂದ ಹಾಗೂ ಒಡಕಣ್ಣನು ಗುರುಗಳ ವಿಷಯದಲ್ಲಿ ಅವಳಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟುಬಿಟ್ಟದ್ದಂದ ಅವಳು ದೀಕ್ಷಿತರ ಪಾದಸೇವೆಮಾಡುವುದಕ್ಕಾಗಲಿ ಅವರೊಡನೆ ವಿನೋದ ಮಾಡುವುದಕ್ಕಾಗಲಿ ಯಾವ ಆತಂಕವೂ ಇರಲಿಲ್ಲ. ಗಿರಿಜೆಯ ಸೇವೆಗೆ ಮೆಚ್ಚಿ ಗುರುಗಳು ಅವಳಮೇಲೆ ಅನುಗ್ರಹಮಾಡಿದರು.

ಗಿರಿಜೆಯು ಗರ್ಭಿಣಿಯಾದದ್ದನ್ನು ಕಂಡು ಒಡಕಣ್ಣನು ಆನಂದ ಭರಿತನಾದನು. ಸೀಮಂತ ಮೊದಲಾದ ಗರ್ಭಸಂಸ್ಕಾರಗಳು ವೈಭವದಿಂದ ನೆರವೇರಿದುವು. ಹತ್ತನೆಯ ತಿಂಗಳಲ್ಲಿ ದೀಕ್ಷಿತರ ಪ್ರತಿಬಿಂಬದಂತಿರುವ ಹೆಣ್ಣು ಕೂಸನ್ನು ಗಿರಿಜೆಯು ಹೆತ್ತಳು.

ಮುಂದೆ ಮೂರು ವರ್ಷಗಳಲ್ಲಿಯೆ ಗಿರಿಜೆಯು ಪುತ್ರಸಂತಾನವನ್ನೂ ಪಡೆದಳು, ಒಡಕಣ್ಣನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ತನ್ನ ಬಯಕೆಯು ಸಫಲವಾಯಿತೆಂದು ಹೊಸಹುರುಪಿನಿಂದ ಅವನು ಪುತ್ತೆ ತನ್ನ ತಂತ್ರಗಳ ಜಾಲವನ್ನು ಹರಡತೊಡಗದನು. ಅವನು ನಾಲ್ಕು ಲಗ್ನಗಳನ್ನು ಮಾಡಿಕೊಂಡಿದ್ದರೂ ಸಮಾನ ಗುಣಶೀಲಸಂಪನ್ನೆಯಾದ ಸಹಧರ್ಮಚಾರಿಣಿಯು ದೊರೆಯದ್ದರಿಂದ ಅವನ ವಯಸ್ಸಿನ ಪೂರ್ವಾರ್ಧದಲ್ಲಿ ಆಗತಕ್ಕಷ್ಟು ಜನಾಹಿತದ ಕಾರ್ಯಗಳು ಅವನಿಂದ ಆಗಿರಲಿಲ್ಲ. ಅನುಕೂಲಳಾದ ಐದನೆಯ ಹೆಂಡತಿಯ ಸಮಾಗಮನದಿಂದ ಅವನ ಪ್ರಪಂಚದ ಚಿಂತೆಯೆಲ್ಲ ದೂರಾಯಿತು. ತನ್ನ ವಯಸ್ಸಿನ ಉತ್ತರಾರ್ಧದಲ್ಲಿ ಪ್ರಸಿದ್ಧ ಪುರುಷನಾಗುವ ಯೋಗವಿದೆಯೆಂದು ಅವನಿಗೆ ಸಂತೋಷವಾಯಿತು.

ಲೋಕಾಪಕಾರದ ಸಂಧಿಯೊಂದು ಕೂಡಲೆ ಅವನಿಗೆ ಒದಗಿಬಂತು. ಒಡಕಣ್ಣನ ಆಶ್ರಯದಲ್ಲಿದ್ದು, ತಮ್ಮ ಜೀವದ ಹಂಗುದೊರೆದು ಅವನಿಗೆ ನೆರವಾದ ಭೀಮಣ್ಣನಾಯಕರಿಗೆ ಗುದ್ದಮ್ಮನಬೇನೆ (ಇನ್‌ಫ್ಲುಎಂಜಾ)ಯು ಬಂತು. ಅವರಿಗೆ ಹೆಂಡಿರು ಮಕ್ಕಳಿದ್ದಿಲ್ಲ. ದತ್ತಕ ಮಗನೊಬ್ಬನಿದ್ದನು. ಅವರ ಉಪಪತ್ನಿಯೂ ತನ್ನ ಮಗನೊಂದಿಗೆ ಅದೇ ಊರಲ್ಲಿದ್ದಳು. ಈ

ಬೇನೆಯಿಂದ ತಾವು ಬದುಕುವುದು ಅಸಂಭವೆಂದು ತಿಳಿದಾಗ ಅವರು ತಮ್ಮ ಮನೆತನದ ಮುಂದಿನ ವ್ಯವಸ್ಥೆಯ ಬಗ್ಗೆ ಒಡಕಣ್ಣನನ್ನು ಕರೆಕಳುಹಿದರು. ಒಡಕಣ್ಣನು ತಪ್ಪಿಸಿಕೊಂಡು ಹನುಮಾಪುರಕ್ಕೆ ಹೋಗಿಬಿಟ್ಟನು. "ಒಡಕ ನನ್ನ ದುಡ್ಡು ಎತ್ತಿಹಾಕಿದಾ. ನನ್ನ ಮನೆತನ ಮುಳುಗಿಸಿದಾ" ಎಂದು ಬಡಬಡಿಸುತ್ತ ನಾಯಕರು ಪ್ರಾಣಬಿಟ್ಟರು. ಊರೊಳಗಿನ ಜನರು ವಂತಿಗೆ ಹಾಕಿ ಅವನ ಶವಸಂಸ್ಕಾರ ಮಾಡಿದರಂತೆ!

ಭೀಮಣ್ಣನಾಯಕರು ಒಡಕಣ್ಣನಲ್ಲಿಟ್ಟದ್ದ ಆಸ್ತಿಯನ್ನು ಕೇಳುವುದಕ್ಕೆ ಅವರ ದತ್ತಕ ಪುತ್ರನು ಬಂದನು. ಒಡಕಣ್ಣನು ಅವನ ಮೇಲೆ ತಂತ್ರವನ್ನು ಹೂಡಿ, ಮನೆಮಾರುಗಳನ್ನು ಮಾರಿಸಿ, ಅವನು ದೇಶಭ್ರಷ್ಟನಾಗುವಂತೆ ಮಾಡಿದನು. ನಾಯಕರ ಸೂಳೆಯು ಒಡಕಣ್ಣನ ಭಯದಿಂದ ಮಗನನ್ನು ಕಟ್ಟಿಕೊಂಡು ಬೊಮ್ಮೇಗೇರಿಯಿಂದ ದಿಕ್ಕೇಡಿಯಾಗಿ ಓಡಿಹೋದಳು.

ಒಡಕಣ್ಣನು ತನ್ನ ಮನೆತನದ ವರ್ತ್ವಾಧಿಕಾರವನ್ನು ಶ್ರೀಪಾದಭಟ್ಟರ ಮಗನಾದ ಗಣೇಶಭಟ್ಟನಿಗೆ ಕೊಟ್ಟು ಅವನ ವಿವಾಹವನ್ನೂ ಮಾಡಿ, ತನ್ನ ಮನೆಯಲ್ಲಿಯೆ ಅವನನ್ನು ಇಟ್ಟುಕೊಂಡನು. ಗಿರಿಜೆಯೂ ಗಣೇಶಭಟ್ಟನ ಮೇಲೆ ಬಹಳ ಪ್ರೇಮಮಾಡಹತ್ತಿದಳು. ಇನ್ನು ತಾವು ಕೃತಕೃತ್ಯರಾದೆವೆಂದು ಭಾವಿಸಿ ಶ್ರೀಪಾಭಟ್ಟರು ವಾನಪ್ರಸ್ಥಾಶ್ರಮಿಗಳಾಗಿ, ಒಬ್ಬ ಬಾಲವಿಧವೆಯೊಂದಿಗೆ ಕ್ಷೇತ್ರಯಾತ್ರೆಗೆ ಹೊರಟುಹೋದರು.

ಒಡಕಣ್ಣನು ತನ್ನ ಪುತ್ರವತಿಯಾದ ಹೆಂಡತಿಯೊಂದಿಗೆ ಸಂತೋಷದಿಂದರತೊಡಗಿದನು.

## ೨೫. ಚಿದಂಬರನ ಚಂಡಿಕೆ

ಮಾಧವನ ತಾಯಿಗೆ ಒಡಕಣ್ಣನ ಕುತಂತ್ರಗಳ ಪ್ರಭಾವವೆಲ್ಲವೂ ತಿಳಿದದ್ದರಿಂದ ಅವಳು ಮಗನಿಗೆ ಒಡಕಣ್ಣನ ಸಹವಾಸ ಮಾಡಬೇಡವೆಂದು ಬಹು ಪರಿಯಿಂದ ತಿಳಿಸಿಹೇಳಿದಳು. ಆದರೆ ಮಾಧವನು ಅದಕ್ಕೆ ಕಿವಿಗೊಡದೆ ಒಡಕಣ್ಣನೊಡನೆ ಬಹು ಪ್ರೇಮದಿಂದ ವರ್ತಿಸುತ್ತಿದ್ದನು. ಒಡಕಣ್ಣನಿಗೆ ತನ್ನ ತಮ್ಮನು ಮಾಡಿದ ಅಪಮಾನವಿನ್ನೂ ಮರೆತಿರಲಿಲ್ಲ. ಅದರ

ಸೇಡನ್ನು ಅವನ ಮಗನ ಮೇಲಾದರೂ ತೀರಿಸಿಕೊಳ್ಳಬೇಕೆಂದೇ ಅವನು ಮಾಧವನನ್ನು ತನ್ನ ಬಲೆಯಲ್ಲಿ ಎಳೆದು ಕೊಂಡಿದ್ದನು. ಹೊತ್ತು ಸಾಧಿಸಿ ಮಾಧವನ ಮೇಲೆ ಅವನು ಚಾಟಮಾಟಗಳ ಪ್ರಯೋಗವನ್ನು ಮಾಡಿ ಬಿಟ್ಟನು. ಮಾಧವನು ಕೃಶನಾಗುತ್ತಾ ನಡೆದನು. ಔಷಧೋಪಚಾರ ಗಳೆಲ್ಲ ನಿರುಪಯೋಗಿಯಾದವು. ತನ್ನ ಮುಪ್ಪಿನ ತಾಯಿಯನ್ನೂ ಚಿಕ್ಕ ಹೆಂಡತಿಯನ್ನೂ ಬಿಟ್ಟು ಮಾಧವನು ಪರಲೋಕವಾಸಿಯಾದನು.

ಅಂದಿನಿಂದ ತನ್ನ ತಂಗಿಯ ಮನೆತನದ ವ್ಯವಸ್ಥೆಯಭಾರವೆಲ್ಲ ಚಿದಂಬ ರನ ಮೇಲೆ ಬಿದ್ದಿತು. ಅವನು ಸರಕಾರದ ಸೇವೆಯಲ್ಲಿ ತೊಡಗಿದವನಾದ್ದ ರಿಂದ, ವರ್ಷಕ್ಕೆ ನಾಲ್ಕಾರು ಸಲ ಮಾತ್ರ ಬೊಮ್ಮೇಗೇರಿಗೆ ಬಂದು ಒಂದೆ ರಡು ದಿನವಿದ್ದು ಹೊರಟುಹೋಗುತ್ತಿದ್ದನು. ಒಡಕಣ್ಣನೆ ಅದರ ವ್ಯವಸ್ಥೆ ಮಾಡುವವನು. ಒಡಕಣ್ಣನೆ ತಮ್ಮ ಮನತನವನ್ನು ಮುಂದೆ ತಂದವನೆಂಬ ನಂಬಿಗೆಯಿಂದ ಚಿದಂಬರನು ಅವನೊಡನೆ ಭಯಭಕ್ತಿಯಿಂದ ನಡೆದು ಕೊಳ್ಳುತ್ತಿದ್ದನು.

ಹೀಗೊಂದು ಸಲ ಅವನು ಬೊಮ್ಮೇಗೇರಿಗೆ ಬಂದಾಗ ಒಡಕಣ್ಣನು ಅವನನ್ನು ಸಾಯಂಕಾಲದ ಊಟಕ್ಕೆ ತನ್ನ ಮನೆಯಲ್ಲಿಯೆ ನಿಲ್ಲಿಸಿಕೊಂಡನು. ನಾಲ್ಕು ತಾಸು ರಾತ್ರಿಗೆ ಊಟವಾಯಿತು. ಮುಂದೆ ಹರಟೆ ಕೊಚ್ಚುತ್ತ ಎರಡು ತಾಸುಗಳನ್ನು ಕಳೆದ ಮೇಲೆ, ಒಡಕಣ್ಣನು ಚಿದಂಬರನಿಗೆ, " ನಿನ್ನ ತಂಗಿಗಂತೂ ಗಂಡುಮಕ್ಕಳಿಲ್ಲ. ನೀನು ಎಂದಾದರೊಮ್ಮೆ ಬಂದು ಹೋಗಾ ತಕ್ಕವ. ನಿಮ್ಮ ತಂಗೀ ಮನೆತನದ ವ್ಯವಸ್ಥಾ ನೋಡೋರು ಯಾರಪಾ? ನನಗಂತೂ ನನ್ನ ಮನತನದ್ದು ನೋಡಿಕೊಳ್ಳೋದ್ರ ಆಗಲೊಲ್ಲದು. ಅದಕ್ಕ ನಿಮ್ಮ ತಂಗಿಗೆ ಶಂಕರರಾಯನ ಮಗನ್ನ ದತ್ತಕ ಮಾಡೋಣ; ಈ ಕೆಲಸ ಮಾಡೇನಿ. ಊರಿಗೆ ಹೋಗು " ಎಂದು ಹೇಳಿದನು.

ಆಗ ಚಿದಂಬರನು, ತಂಗಿ ಇನ್ನೂ ಚಿಕ್ಕವಳು. ಗಂಡನ್ನ ಕಳಕೊಂಡ ದುಃಖದಾಗ ಇದ್ದಾಳ. ಮೇಲಾಗಿ ಎರಡು ಸಣ್ಣ ಹೆಣ್ಣುಮಕ್ಕಳವ. ಇಂಥಾ ಸ್ಥಿತೀವಳಗ ದತ್ತಕ ಮಾಡಿಕೋ ಅನ್ನೋದು ನನ್ನಿಂದಾಗದು. ಮಕ್ಕಳ ಮದಿವಿ ಆದಮ್ಯಾಲ ಶಂಕರರಾಯನ ಮಗನ್ನs ದತ್ತಕ ತಗೋತಾಳ. ಈಗ ಈ ವಿಷಯ ಆಕೀಗೆ ಹೇಳಿ ಗಾಯದ ಮ್ಯಾಲ ಬರೀಕೊಟ್ಟಹಾಂಗ ಮಾಡ ಬ್ಯಾಡ್ರಿ. ಎಂದು ವಿನಯದಿಂದ ಹೇಳಿಕೊಂಡನು.

ಒಡಕಣ್ಣನು, "ಥೂ ಮೂರ್ಖಾ ! ಏನು ಬೊಗಳತೀ. ಯಾರಿಂದ ನಿನ್ನ ಕಲ್ಯಾಣ ಆತಂಬೋ ಎಚ್ಚರ ಅದೆ ಏನು ನಿನಗ ? ನೀ ಹೇಳಿಧಾಂಗ ನಿನ್ನ ತಂಗಿ ಕೇಳೋದಿಲ್ಲ ? ನಿನ್ನ ಆಟ್ಟುವೆಟ್ಟು ಎಲ್ಲಬಲ್ಲ ನನ್ನ ಮುಂದ ನಿನ್ನ ಆಟ ನಡೀಲಿಕ್ಕಿಲ್ಲ. ನಿನ್ನ ಮಗನ್ನ ದತ್ತಕ ಕೊಟ್ಟು ವತನ ಎತ್ತಿ ಹಾಕಬೇಕಂತ ಮಾಡಿಯೇನು ? ನಾಳಿನ ದಿನಾನ ದತ್ತಕ ಪತ್ರ ಆಗಲಿಕ್ಕೆ ಬೇಕು. ನಿನ್ನಗತಿ ನೆಟ್ಟಗಾಗಲಿಕ್ಕಿಲ್ಲ—" ಎಂದು ಕಣ್ಣು ಕೆಂಪಗೆ ಮಾಡಿ ಗದ್ದರಿಸಿದನು.

ತನ್ನ ಕನಸುಮನಸ್ಸಿನಲ್ಲಿಲ್ಲದ್ದನ್ನು ಸಂಶಯಗಸ್ಥನಾದ ಒಡಕಣ್ಣನು ಆಡಿದ್ದನ್ನು ಕಂಡು ಚಿದಂಬರನು ಬೆಚ್ಚಿದನು. ಇವರ ಮಾತಿನಂತೆ ನಡೆದರೆ ಮುಪ್ಪಿನ ಮುದುಕಿ ಬಿಕ್ಕೆಬೇಡುತ್ತ ತಿರುಗಬೇಕಾದೀತು. ತನ್ನ ತಂಗಿಯ ಕುತ್ತಿಗೆ ಕೊಯ್ಯುವ ಕೆಲಸಕ್ಕೆ ತಾನು ನೆರವಾಗಬೇಕೆ ? ಏನಾದರೂ ತಾನು ಆ ಕೆಲಸ ಮಾಡಲಿಕ್ಕಿಲ್ಲವೆಂದು ನಿರ್ಧರಿಸಿಕೊಂಡು ಅವನು ಕುಳಿತುಕೊಂಡನು

ಅವನು ಯೋಚನೆಯಲ್ಲಿ ಸುಮ್ಮನೆ ಕುಳಿತದ್ದನ್ನು ಕಂಡು ಒಡಕಣ್ಣನು "ಯಾಕೋ ಮನಸ್ಸು ಬಿಚ್ಚಿ ಹೇಳು. ಈ ದತ್ತಕ ಮಾಡಿಸೋ ಇಚ್ಛಾ ನಿನಗಿಲ್ಲಿದಿದ್ರ ನಾವು ನಿನಗ ಕೊಟ್ಟ ವತನಾ ಎಲ್ಲಾ ಬರಕೊಟ್ಟು ಹೋಗು. ಇಲ್ಲಾ ಅಂದ್ರ ನಿನ್ನ ಕುತಿಗೀ ಹಿಸುಕಿ ನೆಲಮನ್ಯಾಗ ಹಾಕಿಬಿಡತೇನಿ...." ಎಂದು ಮೊದಲಾಗಿ ಗುಡುಗು ಹಾಕಿದನು. ಇವರ ಕೈಯಲ್ಲಿ ಸಿಕ್ಕುಬಿದ್ದ ತಪ್ಪಿಗಾಗಿ ಚಿದಂಬರನು ಮಿಡುಕಿ ಕೊನೆಗೆ "ಮಾವಾ, ನೀವು ಹೇಳೂ ಮಾತು ನನ್ನ ತಂಗಿಗೆ ನಾ ಹೇಳಲಾರೆ. ರಟ್ಟೀ ಮುರಿದು ಹೊಟ್ಟೀ ತುಂಬಿ ಕೊಳ್ಳೋವಷ್ಟು ಯೋಗ್ಯತಾ ನನಗದ. ನಿಮ್ಮ ಹೊಲಾ ನಿಮಗ ಬರದು ಕೊಡತೀನಿ. ಬೇಕಾದರ ಈಗ ಬರಿಸಿಕೊಳ್ರಿ"

ಅದಕ್ಕೆ ಒಡಕಣ್ಣನು ರೊಚ್ಚಿಗೇರಿ, "ಥೂ ಉಪಗಾರಗೇಡೀ ! ನಾವು ಹೊಲಾ ಕೊಡದಿದ್ರ ನಿನನಗೆಲ್ಲೆ ಲಗ್ನಾಗತಿತ್ತು ? ನಾವು ವಿದ್ಯಾ ಕಲಸ ದಿದ್ರ ನಿನಗೆಲ್ಲೆ ಕೆಲಸ ಆಗತಿತ್ತು ? ನಮ್ಮ ವತನ ನಮಗ ಸಿಗಬಾರದಂತೀ ಯಲ್ಲಾ— ಅದನ್ನ ನೀ ಹ್ಯಾಂಗ ನುಂಗತಿಯೋ ನುಂಗು. ನೋಡೋಣ. ನಾವು ಕೊಟ್ಟದ್ದು ನಮಗ ಕೊಡೋದೇನು ದೊಡ್ಡಿಸ್ತನ ಅಲ್ಲ. ಸ್ಟಾಂಪು

ತರೋತನಕ ಇಲ್ಲೇ ಬಿದ್ದಿರು" ಎಂದು ಅವನನ್ನು ಒಳಗೆ ಕುಳ್ಳಿರಿಸಿ, ಕೋಣೆಯ ಬಾಗಿಲಿಗೆ ಬೀಗವನ್ನು ಜಡಿದು ಬಿಟ್ಟನು.

ಆದರೆ ಅವನಿಗೆ ಸ್ಟಾಂಪು ದೊರೆಯಲಿಲ್ಲ. ಸ್ಟಾಂಪು ಮಾರುವ ಶೇಷಾಚಾರ್ಯರಿಗೆ ಅವನು ಮುಂಚಿತವಾಗಿಯೆ ಹೇಳಿಟ್ಟಿದ್ದನು; ಆದರೆ ಅವರ ಮಗಳಮೈಯಲ್ಲಿ ನೆಟ್ಟಗಿದ್ದಿಲ್ಲವೆಂದು ಪತ್ರಬಂದದ್ದರಿಂದ ಅವರು ಅಂದು ರಾತ್ರಿಯಲ್ಲಿಯೆ ಅಳಿಯನ ಊರಿಗೆ ಹೋಗಿದ್ದರು. ಪೋಸ್ಟಿನ ಟಿಕೀಟನ್ನು ಪಡೆಯಬೇಂದರೆ ಮಾಸ್ತರನು ಬಾಗಿಲನ್ನೆ ತೆರೆಯಲಿಲ್ಲ. ಒಡಕಣ್ಣನು ಹಳೆಯ ಕಾಗದಪತ್ರಗಳ ಗಂಟನ್ನೆಲ್ಲ ಬಿಚ್ಚಿ ಕಷ್ಟಪಟ್ಟು ಶೋಧಿಸಿದ ಮೇಲೆ ಅವನಿಗೆ ಆಣೆಯ ಟಿಕೀಟುಗಳೆರಡು ದೊರೆತವು.

ಅಷ್ಟರಲ್ಲಿ ನಸುಕು ಹರಿಯುತ್ತ ಬಂದಿತ್ತು. ಕೋಳಿಗಳು ಕೂಗುತ್ತಿದ್ದವು. ಒಕ್ಕಲಿಗರ ಹೆಣ್ಣುಮಕ್ಕಳು ರೊಟ್ಟಿ ಬಡೆಯುವ ಸದ್ದಾಗುತ್ತಿತ್ತು ವೈದಿಕರು ಉದಯರಾಗದೊಂದಿಗೆ ಪ್ರಾತಃಸ್ಮರಣೆಯ ಶ್ಲೋಕಗಳನ್ನುಅನ್ನುತ್ತಿರುವುದು ಕೇಳತೊಡಗಿತು. ಹಕ್ಕಿಗಳು ಕಿಲಕಿಲವೆನ್ನಹತ್ತಿದ್ದವು. ಒಡಕಣ್ಣನು ಲಗುಬಗೆಯಿಂದ ಬೀಗವನ್ನು ತೆರೆದು ಚಿದಂಬರನ ಬಳಿಗೆ ಬಂದನು. ಶಂಕರರಾಯನು ಲೇಖನಸಾಮಗ್ರಿಗಳೊಡನೆ ಸಿದ್ಧನಾಗಿದ್ದನು. ಚಿದಂಬರನು ತಡವರಿಸುತ್ತ ಎದ್ದು ಕುಳಿತುದನ್ನುಕಂಡು ಒಡಕಣ್ಣನು, "ಇಕಾ! ಈ ಕಾಗದಗಳ ಮ್ಯಾಲ ಎರಡುವರ್ಷದ ಹಿಂದಿನಮಿತಿ ಹಾಕಿ ನನ್ನ ಹೆಸರ್ಲೆ ಒಂದು, ಹೀಂಗ ಎರಡೆರಡು ಸಾವಿರ ರೂಪಾಯಿ ಪ್ರಾಮಿಸರಿ ನೋಟು ಬರಕೊಡು" ಎಂದು ಗರ್ಜಿಸಿದನು.

ಚಿದಂಬರನು ಕಾಗದಮೇಲೆ ಶ್ರೀಕಾರವನ್ನು ಹಾಕಿ, "ಮಾವಾ, ನನಗ ಎರಡೂ ಗೆಜ್ಜಿ ಬಿಗಿದಾಗ. ಹೊರಗ ಹೋಗಿ ಮೂತ್ರ ವಿಸರ್ಜನಾ ಮಾಡಿ ಬರ್ತೀನಿ" ಎಂದು ಕೆಟ್ಟಮೋರೆ ಮಾಡಿ ಮೇಲಕ್ಕೆದ್ದನು. ಒಡಕಣ್ಣನು ಅವನ ಹಿಂದಿನಿಂದಲೆ ಹೋಗಿ ತಲೆಬಾಗಿಲನ್ನು ತೆರೆವನು. ಶಂಕರರಾಯನು ಅಲ್ಲಿಯೆ ಪಡಸಾಲೆಯಲ್ಲಿ ಕುಳಿತನು. ಚಿದಂಬರನು ಬೊಕ್ಕತಲೆಯಿಂದ ಒಡಕಣ್ಣನ ಹಿಂದಿನಿಂದ ಹೊರಟು ತಲೆಬಾಗಿಲ ಚೌಕಟ್ಟನ್ನು ದಾಟ ಜಿಗಿದನು. ಕೂಡಲೆ ಒಡಕಣ್ಣನು ಅವನ ಚಂಡಿಕೆಗಳನ್ನು ಬಿಗಿಯಾಗಿ ಹಿಡಿದು

ಕೊಂಡು, ಶಂಕರರಾಯನನ್ನು ಕೂಗಿದನು. ಚಿದಂಬರನು ಪ್ರಾಣಸಂಕಟ ದಿಂದ ತಲೆಯನ್ನು ಕೊಡವಿ ಮುಂದಕ್ಕೆ ಓಡಿಹೋದನು. ಅವನ ಚಂಡಿಕೆ ಗಳು ಮಾತ್ರ ಒಡಕಣ್ಣನ ಕೈಯೆಲ್ಲಿ ಉಳಿದವು.

ಶಂಕರರಾಯನು ಅವನನ್ನು ಬೆನ್ನಟ್ಟಿದನು. ಚಿದಂಬರನು ಒಂದು ಮುಳ್ಳಬೇಲಿಯನ್ನು ಟಣ್ಣನೆ ಹಾರಿ ಶಂಖವನ್ನು ಪುಟಿಸುತ್ತಾ ತಂಗಿಯ ಮನೆಯ ಹಾದಿ ಹಿಡಿದನು. ಅವನ ಶಂಖವಾದ್ಯವನ್ನು ಕೇಳಿ ಓಣಿಯೊಳಗೆ ಜನರು ಕೂಡಿದ್ದರಿಂದ ಒಡಕಣ್ಣನೂ ಶಂಕರರಾಯನೂ ಹತಾಶರಾಗಿ ಹಿಂದಿರುಗಿ, ಮನೆಯ ಕದವನ್ನು ಹಾಕಿಕೊಂಡು ಒಳಗೆ ಕುಳಿತರು.

ಚಿದಂಬರನು ತಂಗಿಯಮನೆಯಲ್ಲಿ ತಲೆಗೆಸಕ್ಕರೆಯನ್ನು ತುಂಬಿಸಿ ಕೊಂಡುತನ್ನಮೂವರು ಮಿತ್ರರೊಡನೆ ತಾಲೂಕ ಕಚೇರಿಗೆ ಹೋದನು.ಅಲ್ಲಿ ಬೊಮ್ಮೇಗೇರಿಯಲ್ಲಿ ತನಗೆ ಬಂದಿದ್ದ ಪ್ರಾಣಸಂಕಟವನ್ನೆಲ್ಲ ಹೇಳಿ ಒಡಕಣ್ಣನು ಪ್ರಾಣಹಿಂಸೆಗೆ ಪ್ರಯತ್ನಿಸಿದನೆಂದು ಒಂದು ಫಿರ್ಯಾದೆಯನ್ನು ಬರೆಯಿಸಿ ಮಾಮಲೇದಾರರ ಕೈಯಲ್ಲಿ ಕೊಟ್ಟನು. ಆದರೆ ಮಾಮಲೇದಾರರು ಅವನಿಗೆ, " ತಮ್ಮಾ ನಿನ್ನನ್ನು ಸಾಕಿಸಲಹಿದ ಹಿರಿಯರ ಮೇಲೆ ಫಿರ್ಯಾದೆ ಮಾಡುವುದು ವಿಹಿತವಲ್ಲ " ವೆಂದು ಬುದ್ಧಿ ಹೇಳಿದರು. ಚಿದಂಬರನು ತನಗಾದ ಬವಣಿಯನ್ನೆಲ್ಲ ಒಣ್ಣಿಸಿ, ಸಾಹೇಬರಿಗೆ ತನ್ನ ತಲೆಯನ್ನು ತೋರಿಸಿದನು. ಆದರೂ ಸಾಹೇಬರೂ ಅವನಿಗೆ ಉಪದೇಶಮಾಡಿ, ಅರ್ಜುನನ ಶಿರಸ್ಸಿಗಿಟ್ಟ ಕರ್ಣನ ಬಾಣವು ಅವನ ಕಿರೀಟವನ್ನು ಮಾತ್ರ ಹಾರಿಕೊಂಡು ಹೋದಂತೆ, ನಿನ್ನ ಶಿರಕ್ಕಿಟ್ಟಗುರಿಯು ಶಿಖೆಗಳ ಮೇಲೆಯೆ ಹೋಯಿತೆಂದು ಹೇಳಿ, ತಿರುಗಿ ಕಳಿಸಿದರು.

ಪಾಪ ! ಚಿದಂಬರನ ಚಂಡಿಕೆಗಳು ವ್ಯರ್ಥವಾಗಿ ಕಿತ್ತು ಹೋದವು.

## ೨೬. ಒಡಕಿನ ವಿಲಾಸ.

ಚಿದಂಬರು ಒಡಕಣ್ಣನ ವೈರಿಯಾಗಿ ಅವನ ಕಾರ್ಯಕ್ಕೆ ಅಡಿಗಡಿಗೆ ವಿಘ್ನಗಳನ್ನುಂಟುಮಾಡತೊಡಗಿದನು ಒಡಕಣನು ಮಿಗಿಲಾದ ತಂತ್ರ ಪ್ರವೀಣನಾದ್ದುದರಿಂದ ಅವನಿಗೆ ವಿಶೇಷ ನಷ್ಟವೇನೂ ಆಗುವಂತಿರಲಿಲ್ಲ.

ಆದರೆ ಶಂಕರರಾಯನಿಗೆ ಮಾತ್ರ ಬಹಳ ತಾಪವಾಗಹತ್ತಿತು. ಅವನ ಹೊಲಗಳಲ್ಲಿ ಎಷ್ಟೋ ಹೊಲಗಳ ಭಾಗವಾಗಿರಲಿಲ್ಲ. ಅವುಗಳನ್ನೆಲ್ಲ ಚಿದಂಬರನು ಪಡಗಡೆಹಿದನು. ಚಿದಂಬರನೊಡನೆ ವ್ಯಾಜ್ಯ ಮಾಡಿ ಮಾಡಿ, ಕೈಯೊಳಗಿನ ದುಡ್ಡನ್ನೆಲ್ಲ ಕಳೆದುಕೊಂಡು ಶಂಕರರಾಯನು ಪಣ್ಣಾದನು. ಮೊದಲಿಗೆ ಮಕ್ಕಳಾಗಿಲ್ಲವೆಂದು ಕೊರಗುತ್ತಿದ್ದ ಶಂಕರರಾಯನಿಗೆ ಮುಪ್ಪಿನ ಕಾಲದಲ್ಲಿ ಮಕ್ಕಳ ಅತಿವೃಷ್ಟಿಯುಂಟಾಗಿ, ತಿನ್ನಲಿಕ್ಕೆ ಕೂಳಿಲ್ಲದಂತಾಯಿತು. ಆಗ ಅವನು ಒಡಕಣ್ಣನ ಹತ್ತಿರ ಬಚ್ಚಿಟ್ಟ ತನ್ನ ಹಣವನ್ನು ಕೇಳಬೇಕಾಯಿತು. ಒಡಕಣ್ಣನು, “ಎಲ್ಲಿಯದುಡ್ಡು ? ಮೂರು ವರ್ಷ ನನ್ನ ಮನ್ಯಾಗಿಟ ಕೂಳು ತಿಂದು ನನ್ನ ಮ್ಯಾಲ ಆಪವಾದ ಹೊರಸತಿಯಾ ? ನಿನ್ನ ತಮ್ಮನ ಕೂಡ ಪಾಲುಮಾಡಿಕೊಂಡಾಗ ಪಿತ್ರಾರ್ಜಿತ ಆಸ್ತಿ ಏನೂ ಇಲ್ಲಾ ಅಂತ ಹೇಳಿ, ಇಗ ನನ್ನಲ್ಲಿ ದುಡ್ಡು ಇಟ್ಟೇನಿ ಅಂತ ಬೊಗಳತಿಯಾ? ಇನ್ನ ನನ್ನ ಮನೀ ಕಟ್ಟಿ ಹತ್ತಬ್ಯಾಡ” ಎಂದು ಬೆದರಿಸಿ ಅವನನ್ನು ತಳ್ಳಿಬಿಟ್ಟನು. ಭೋಳೆಶಂಕರರಾಯನು ಹಾವನ್ನು ಬಡಿದು ಹದ್ದಿಗೆ ಹಾಕಿದಂತಾಯಿತು. ಚಿದಂಬರನೊಡನೆ ದ್ವೇಷಕಟ್ಟಿಕೊಂಡು ತನ್ನ ಮಕ್ಕಳ ಕೈಯಲ್ಲಿ ಪರಟೆಯನ್ನು ಕೊಡಬೇಕಾಯಿತಲ್ಲ ! ಹಿಂದೆ ಹಿರಿಯರು ಗಳಿಸಿಟ್ಟ ದ್ರವ್ಯವನ್ನು ಒಡಕಣ್ಣನು ಎತ್ತಿಹಾಕಿಬಿಟ್ಟನು ಹಿಂದಿನ ಮನೆಯ ಭಿಕ್ಷವೂ ಹೋಯಿತು. ಮುಂದಿನ ಮನೆಯ ಕೋರಾಣವೂ ತಪ್ಪಿತು ಎಂದು ಖಿನ್ನನಾಗಿ ಕೊರಗುತ್ತ ಅವನು ಕುಳಿತುಕೊಂಡನು.

ಒಡಕಣ್ಣನ ಶಾಲಕನಾದ ಶೇಷನ ದತ್ತಕ ವ್ಯಾಜ್ಯದಲ್ಲಿ ಅವನ ಪ್ರತಿಸ್ಪರ್ಧಿಗಳು ಬಲಿಷ್ಠರಾಗಿ ವತನನ್ನೆಲ್ಲ ತಮ್ಮ ವಶಕ್ಕೆ ತೆಗೆದುಕೊಂಡು ವ್ಯಾಜ್ಯ ನಡೆಯಿಸಿದ್ದರು. ಶೇಷನ ಬೆನ್ನುಕಟ್ಟಿದ ಶ್ರೀಮಂತನು ಹತ್ತುಸಾವಿರ ರೂಪಾಯಿಗಳನ್ನು ಕಳೆದುಕೊಂಡು ಹಣ್ಣಾಗಿ ಹತಾಶನಾದ ಸಮಯದಲ್ಲಿ ಒಡಕಣ್ಣನು ಅವನಿಗೆ ತನ್ನ ದತ್ತಕ ಪ್ರಕರಣದಲ್ಲಿ ಹೂಡಿದ್ದ ತಂತ್ರವನ್ನು ತಿಳಿಸಿದನು; ಈ ವ್ಯಾಜ್ಯವು ಗೆದ್ದರೆ ಬರುವ ಧನವನ್ನೆಲ್ಲ ನೀವೇ ತೆಗೆದುಕೊಳ್ಳತಕ್ಕದ್ದೆಂದು ಶೇಷನಿಂದ ಅವನಿಗೊಂದು ಲೇಖವನ್ನು ಬರೆಯಿಸಿಕೊಟ್ಟನು. ಆಶ್ರೀಮಂತನು ಹುರಿದುಂಬಿ ನಲವತ್ತುಸಾವಿರ ರೂಪಾಯಿಗಳನ್ನು ಸುರುಹಿ, ಆ ತಂತ್ರದಿಂದ

ವ್ಯಾಜ್ಯವನ್ನು ತನ್ನಂತೆ ಮಾಡಿಕೊಂಡನು. ಇದರಿಂದ ಆ ಶ್ರೀಮಂತನಿಗೆ ಅರವತ್ತುಸಾವಿರ ರೂಪಾಯಿಗಳು ದೊರೆತವು, ಒಡಕಣ್ಣನ ಶಾಲಕನು ದೊಡ್ಡ ವತನದಾರನಾದನು. ಶೇಷನು ಒಡಕಣ್ಣನ ಶಿಷ್ಯನಾಗಿ ಅವನ ತತ್ವ ಗಳಿಂದ ಗಂಗೊಳ್ಳಿಯಲ್ಲಿ ತನ್ನ ಪ್ರತಿಷ್ಠೆಯನ್ನು ಸ್ಥಾಪಿಸಿಕೊಂಡನು. ಹೀಗೆ ಗುರುಶಿಷ್ಯರಿಬ್ಬರೂ ಒಟ್ಟುಗೂಡಿ ವತನದಾರರ ಸಮೂಹದಲ್ಲಿ ತಮ್ಮ ತತ್ವ ವನ್ನು ಹರಡುತೊಡಗಿದರು.

ಅಸೆಂಬ್ಲಿಯ ಚುನಾವಣೆಯಲ್ಲಿ ಒಡಕಣ್ಣನು ತೋರಿದ ಕುಟಿಲ ತಂತ್ರ ಗಳಿಗೆ ಮೆಚ್ಚಿ ಪಟ್ಟಗಳಲ್ಲಿಯ ವಕೀಲರು ಸಹ ಅವನಿಗೆ ಜಯಪತ್ರವನ್ನು ಕೊಟ್ಟರೆನ್ನಬಹುದು ಅವನು ಬೆಳೆಯಿಸಿದ ವಿಷವೃಕ್ಷದ ಹರಿಗಳಲ್ಲಿ ಬ್ರಾಹ್ಮ ಣಬ್ರಾಹಣೇತರವೆಂಬ ಭೂತಗಳೆಂದು ಆಗಲೆ ಕುಣಿಯುತ್ತಿದ್ದವು. ಒಡಕ ಣ್ಣನು ಮೊದಲಿಗೆ ಬ್ರಾಹ್ಮಣೇತರ ಭೂತಕ್ಕೆ ಬೆಂಬಲವಾಗಿ ಬ್ರಾಹ್ಮಣ ಭೂತ ವನ್ನು ಹಣಿದನು. ಬ್ರಾಹ್ಮಣೇತರರಲ್ಲಿಯೂ ಒಡಕು ಹುಟ್ಟಿಸುವ ಸಮಯ ವೊಂದು ಅವನಿಗೆ ಬೇಗನೆ ಒದಗಿಬಂತು.

ಜೊಮ್ಮೀಗೇರಿಯಲ್ಲಿ ಗುರುಸಿದ್ದಪ್ಪನೆಂಬ ಬಡಕೂಲಿಕಾರನೊಬ್ಬನು ಹತ್ತೆಂಟು ವರ್ಷಗಳಿಂದ ಹೆಂಡತಿಯನ್ನು ಬಿಟ್ಟುಬಿಟ್ಟಿದ್ದನು. ಅವನು ಬಿಟ್ಟ ಮೇಲೆ ಅವಳಿಗೆರಡು ಮಕ್ಕಳಾಗಿದ್ದವು. ಗುರಸಿದ್ದಪ್ಪನು ಆ ಮಕ್ಕಳ ಭಾರ ವನ್ನು ತಾನು ಹೊರಲಾರೆನೆಂದು ಊರಿನ ಸನಾತನಿಗಳ ಮರೆಹೊಕ್ಕನು. ಸನಾತನಿಗಳು ಕೂಡಿಸಿದ ಸಭೆಯಲ್ಲಿ ತನ್ನ ಹೆಂಡತಿಯು ವ್ಯಭಿಚಾರಿಯೆಂದು ಸ್ಪಷ್ಟವಾಗಿ ಹೇಳಿ ಅವಳಿಗೆ ಬಹಿಷ್ಕಾರ ಕೊಡಿಸಿದನು. ಹಿರಿಯಮಠದ ಬಸ ಲಿಂಗಯ್ಯನವರೂ, ವಿರಕ್ತಮಠದ ಸ್ವಾಮಿಗಳೂ, ಪ್ರಮುಖ ಸನಾತನಿ ಗಳಾದ ವೀರಶೈವರೂ ಬಹಿಷ್ಕಾರ ಪತ್ರಕ್ಕೆ ಸಹಿಹಾಕಿ, ಗುರುಸಿದ್ದಪ್ಪನ ಹೆಂಡತಿಯನ್ನು ಕುಲದಿಂದ ಹೊರಗಿಟ್ಟರು. ವಿರಕ್ತಮಠದ ಬಾವಿಯ ನೀರು ಅವಳಿಗೆ ದೊರೆಯದಂತಾಯಿತು. ಅವಳು ಬಸೆಟ್ಟೆಪ್ಪನ ಮನೆಯಲ್ಲಿರುವವ ಳಾದ್ದರಿಂದ ಬಸೆಟ್ಟಿನ ಮಗನಿಗೆ ಸಿಟ್ಟು ಬಂದು ಅವನು ಒಡಕಣ್ಣನ ಮರೆ ಹೊಕ್ಕನು.

ಗುರಸಿದ್ದಪ್ಪನ ಹೆಂಡತಿಯನ್ನು ಕರೆದುಕೊಂಡು ಹೋಗಿ ಅವಳಿಂದ ಸನಾತನ ಪಂಗಡದ ಹತ್ತು ಜನ ಪ್ರಮುಖರಮೇಲೆ ಫಿರ್ಯಾದೆಯನ್ನು

ಮಾಡಿಸಲಾಯಿತು. ಗುರುಸಿದ್ದಪ್ಪನು ಸನಾತನ ಪಂಗಡಕ್ಕೇ ಸೇರಿದ್ದರಿಂದ ಸನಾತನಿಗಳಿಗೇನೂ ಹೆದರಿಕೆಯಿರಲಿಲ್ಲ. ಬಸೆಟ್ಟೆಪ್ಪನ ಮಗನು ಕೆಲವು ಪಂಗಡಿಗರೊಡನೆ ಸುಧಾರಕ ಪಂಗಡವೊಂದನ್ನು ನಿರ್ಮಿಸಿಕೊಂಡು ಕಚೇರಿಗೆ ಎಡತಾಕಿದನು. ಸಧಾರಕ ಪಂಗಡದವರ ಸಾಕ್ಷಿಗಳೆಷ್ಟಾದರೂ, ಈ ವ್ಯಾಜ್ಯದಲ್ಲಿ ಫಿರ್ಯಾದಿಯ ಗಂಡನೇ ವಿರುದ್ಧವಿದ್ದುದರಿಂದ ನಿರ್ಣಯವು ನಿಮ್ಮಂತೆ ಆಗಲಾರದೆಂದು ಅವರ ವಕೀಲರು ಅಭಿಪ್ರಾಯಕೊಟ್ಟರು. ಹೇವಕ್ಕೆ ಬಿದ್ದು ನಾಲ್ಕಾರು ನೂರು ರೂಪಾಯಿಗಳನ್ನು ಕಳೆದುಕೊಂಡ ಬಸೆಟ್ಟೆಪ್ಪನ ಮಗನು ಹೌಹಾರಿ ಒಡಕಣ್ಣನೆದುರಿಗೆ ಗೋಳಿಟ್ಟನು. ಒಡಕಣ್ಣನು ಅವರನ್ನು ಮತ್ತೆ ಉಬ್ಬಿಸಿ, "ನೀವೆಲ್ಲರೂ ಪಟ್ಟಿಹಾಕಿ ಒಂದು ಸಾವಿರ ರೂಪಾಯಿ ನನ್ನ ಕೈಯಾಗ ಕೊಡ್ರಿ. ನಾ ಗೆದ್ದಕೊಡತೇನಿ; ಇಲ್ಲಿದ್ರ ನಿಮಗ ಎರಡು ಸಾವಿರ ರೂಪಾಯಿ ನಾ ಕೊಡತೇನಿ" ಎಂದು ಎದೆತಟ್ಟಿ ಹೇಳಿದನು.

ಆದರಂತೆ ಸಾವಿರ ರೂಪಾಯಿಗಳನ್ನು ತನ್ನ ಕೈಗೆ ಬಂದಮೇಲೆ, ಅವನು ಗುರುಸಿದ್ದಪ್ಪನನ್ನು ಗುಪ್ತವಾಗಿ ತನ್ನ ಮನೆಗೆ ಕರೆಯಿಸಿಕೊಂಡು, "ತಮ್ಮಾ ನೀನು ಅತಿಬಡವ. ನಿನ್ನಂಥವಗ ಒಣಹ್ಯಾವ ಉಪಯೋಗವಿಲ್ಲ. ಈಗ ನಿನ್ನ ಭಾಗ್ಯೋದಯ ಆಗೋ ಸಮಯ ಬಂದಐದ. ನಿನಗ ಒಂಧ್ಯ ಸಾವಿರರೂಪಾಯಿ ಕೊಡತೀನಿ. ನೀನು ನಿನ್ನ ಬೆನ್ನುಕಟ್ಟಿದವರ ಸಂಗತಿಲೇ ಹೋಗಿ ಕೊರ್ಟಿನೊಳಗ ನನ್ನ ಹೇಣ್ತಿ ನನ್ನ ಮನೀಗೆ ಬರತಾ ಹೋಗತಾ ಇದ್ಲು, ಆಕಿನ್ನೇನು ನಾ ಬಿಟ್ಟಿಲ್ಲಾ ಅಂತ ಸಾಕ್ಷೀ ಹೇಳಬೇಕು. ನಿನ್ನ ಹೇಣತಿ ಹಡದ ಮಕ್ಕಳಿಗೆ ಪಾಲುಹೋದಿತಂಬೋ ಭಯಾನೂ ನಿನಗ ಇಲ್ಲ. ವಿಚಾರಿಸಿ ನೋಡು" ಎಂದು ಉಪದೇಶ ಮಾಡಿದನು.

ಹಗಲೆಲ್ಲ ದುಡಿದರೂ ಮೂರಾಣೆ ಕೂಲಿಸಿಗದ ಗುರುಸಿದ್ದಪ್ಪನು ಸಾವಿರ ರೂಪಾಯಿಗಳ ಮೋಹಕ್ಕೆ ಬಲಿಯಾಗಿ ಒಪ್ಪಿಕೊಂಡನು. ಈ ತಂತ್ರದ ಸುಳಿವೆ ಹತ್ತದ ಸನಾತನಿಗಳು ಉಬ್ಬುಬ್ಬಿ ಕಚೇರಿಗೆ ಹೋದರು ಗುರುಸಿದ್ದಪ್ಪನ ಸಾಕ್ಷಿಯನ್ನು ಕೇಳಿ ಅವರು ಹೌಹಾರಿದರು. ಮುಂದೆ ಅವರು ಸಾವಿರಾರು ರೂಪಾಯಿಗಳನ್ನು ಕಳೆದುಕೊಂಡರೂ ವ್ಯರ್ಥವಾಯಿತು. ಹಿರಿ

ಯಮಠದ ಬಸಲಿಂಗಯ್ಯನವರೂ, ವಿರಕ್ತಮಠದ ಸ್ವಾಮಿಗಳೂ, ಫಿರ್ಯಾದೆಗೆ ಗುರಿಯಾದ ಇತರ ಪ್ರಮುಖರೂ ದಂಡತೆತ್ತು, ಮೋರೆಯೊಣಗಿಸಿಕೊಂಡು, ತಲೆ ತಗ್ಗಿಸಿಕೊಂಡು ಮನೆಗೆ ಮರಳ ಬೇಕಾಯಿತು. ಗುರುಸಿದ್ದಪ್ಪನು ಸಾವಿರ ರೂಪಾಯಿಗಳನ್ನು ಪಡೆದು ಸುಧಾರಕ ಪಂಗಡವನ್ನು ಸೇರಿಕೊಂಡನು.

ಒಡಕಣ್ಣನ ತಂತ್ರದಿಂದ ವೀರಶೈವರಲ್ಲಿ ಎರಡು ಬಣಗಳು ದೃಢವಾದವು ಮುಂದೆ ಆವೆರಡೂ ಪಂಗಡದವರು ಪರಸ್ಪರ ವಿರೋಧಿಗಳಾಗಿ ಪ್ರತಿಯೊಂದು ಸಾಮಾಜಿಕ ಕಾರ್ಯದಲ್ಲಿ ಬಡಿದಾಡತೊಡಗಿದರು. ಒಡಕಣ್ಣನಿಗೆ ಹಿಡಿಸಲಾರದಷ್ಟು ಹಿಗ್ಗಾಯಿತು.

## ೨೭. ಭೀಮನಿಗೆ ಭಿಕ್ಷಾಪಾತ್ರೆ.

ಒಡಕಣ್ಣನ ತಂತ್ರದಿಂದ ಅನಾನ್ಯಗತಿಕರಾದ ರೈತರಲ್ಲಿ ಅದೇನೊ ಒಂದು ಬಗೆಯ ಒಕ್ಕಟ್ಟು ಬೆಳೆದುಬಂದಿತ್ತು. ದಾಯಾದಿಯಾದ ವಾಸುದೇವರಾಯನು ಎದೆಗಾರನಾಗಿ, ಹನುಮಾಪುರದ ರೈತರನ್ನು ಒಂದುಗೂಡಿಸಿ ಅವರ ನೆರವಿನಿಂದ ದೇಸಾಯಿಯನ್ನು ಹಣಿಯುವದಕ್ಕೆ ಆರಂಭಿಸಿದ್ದನು. ಪುಕ್ಕನಾದ ಒಡಕಣ್ಣನು ಅವನ ದರ್ಪಕ್ಕೆ ಬೆದರಿ ಹನುಮಾಪುರಕ್ಕೆ ಹೋಗುವುದನ್ನೆ ಬಿಟ್ಟದ್ದರಿಂದ ಅವನ ಹೊಲಗಳೆಲ್ಲ ಪಡಬಿದ್ದು, ಎರಡು ವರ್ಷಗಳವರೆಗೆ ಅವನು ಕೈದೆರಿಗೆಯನ್ನು ಕೊಡಬೇಕಾಯಿತು. ಕೊನೆಗೆ ವಾಸುದೇವರಾಯನ ಕಾಲಿಗೆರಗಿ, ಕೈತೆರಿಗೆ ಹಿಂದೆ ನಡೆದು ಬಂದಂತೆಯೆ ಹೊಲಗಳನ್ನು ನಡೆಯಿಸುವೆನೆಂದು ಹೇಳಿಕೊಂಡು ಹೊಲಗಳನ್ನು ಸಾಗುವಳಿ ಮಾಡಬೇಕಾದರೆ ಅವನಿಗೆ ಸಾಕು ಬೇಕಾಗಿಹೋಯಿತು. ಇದರಿಂದ ಒಡಕಣ್ಣನ ಉತ್ಪನ್ನವು ಅರ್ಧಕ್ಕರ್ಧ ಇಳಿಯಿತು. ಮನೆಯಲ್ಲಿ ದೀಕ್ಷಿತರೂ, ಗಣೇಶಭಟ್ಟರೂ ಸನ್ನಿಹಿತರಾಗಿದ್ದರು ಗಿರಿಜೆಯು ಮೂರು ವರ್ಷಕ್ಕೊಂದು ಗಂಡುಮಗುವನ್ನು ಹೆತ್ತು ಕುಟುಂಬದ ಸಂಖ್ಯೆಯನ್ನು ಬೆಳೆಯಿಸುತ್ತಲೇ ಇದ್ದಳು. ಒಡಕಣ್ಣನಿಗೆ ಚಿಂತೆಯಾಯಿತು.

ಒಡಕಣ್ಣಿನ ತಂತ್ರಗಳ ಪ್ರಭಾವದಿಂದ ಬೊಮ್ಮೇಗೇರಿಯ ಸಮಾಜವು ಛಿನ್ನವಿಚ್ಛಿನವಾದ ಸಮಯದಲ್ಲಿ ಪರಸ್ಪರ ಸಹಾಕಾರಸಂಘದ ಸುಳಿಗಾಳಿಯು ಬೀಸತೊಡಗೀತು ಸಾಲಗಾರರಾಗಿ ಬಳಲುತ್ತಿದ್ದ ಕೆಲವು ಜನರು ಆ ಸಂಘವನ್ನು ಸ್ವಾಗತಿಸಿದರು. ಒಡಕಣ್ಣನು ತಾನು ಆ ಸಂಘದಲ್ಲಿ ಸೇರದೆ, ಹಿಂದೆ ನಿಂತು ತನ್ನ ತಂತ್ರಗಳನ್ನು ಬೀಸತೊಡಗಿದನು. ವೀರಶೈವ ಸನಾತನ ಸಂಗಡದ ಪ್ರಮುಖರೆ ಆ ಸಂಘದ ಸೂತ್ರಧಾರರಾಗಿದ್ದರೆಂಬುದು ಅವನಿಗೆ ಗೊತ್ತಿತ್ತು. ಅತಿ ಸ್ವಲ್ಪ ಬಡ್ಡಿಯದರದಿಂದ ಸಾಲ ಸಿಗುವುದೆಂದು ಮರುಳಾಗಿ ನಿರಕ್ಷರ ಕುಕ್ಷಿಗಳಾದ ಬಹುಜನ ರೈತರು ಆ ಸಂಘದ ಸದಸ್ಯರಾದರು. ಒಬ್ಬರಿಗೊಬ್ಬರು ಹೊಣೆಯಾಗದೆ ಈ ಸಂಘದಲ್ಲಿ ಸಾಲ ದೊರೆಯುವುದಿಲ್ಲವೆಂದು ಸಂಘದ ಚಾಲಕರು ತಿಳಿಸಿದರು. ಅಜ್ಞಾನಿಗಳಾದ ರೈತರಿಗೆ ಆಗ ಹೊಣೆಯಂದರೇನೆಂಬುದೇ ಹೊಳೆಯದ್ದರಿಂದ ಅವರು ಕಂಡಕಂಡವರಿಗೆ ಹೊಣೆಯಾದರು. ಒಡಕಣ್ಣನೂ ಅವರಿಗೆ ನೆರವಾದನೆಂದು ಬೇರೆ ಹೇಳಬೇಕಾಗಿಲ್ಲ. ಮುಂದೆ ಮೇಘರಾಜನ ಅವಕೃಪೆಯಾದುದರಿಂದ ಸದಸ್ಯರಲ್ಲಿ ಕೆಲವರು ಬೊಮ್ಮೇಗೇರಿಯಿಂದ ಕಾಲ್ಕಿಗೆದರು. ಅವರು ಪಡೆದ ಸಾಲವನ್ನು ಹೊಣೆಗಾರರು ತೆರುವ ಸಮಯವೊದಗಿತು. ಎಷ್ಟೋ ಜನರು ತಮ್ಮ ಹೊಲಗಳನ್ನು ಕಳೆದುಕೊಂಡರು.

ಸಾಲಕೊಡುವ ಸಾಹುಕಾರರಿಗೆ ಈ ಸಂಘವನ್ನು ಕಂಡು ಹೊಟ್ಟೆಯುರಿಯುತ್ತಿತ್ತು. ಸತ್ಯಪ್ಪ ಸೆಟ್ಟರಂತೂ ಬೆಂಕಿ ಬೆಂಕಿಯಾಗಿ ತಮ್ಮ ಸಾಲಗಾರರಿಂದ ಆಗಿಂದಾಗಲೆ ಸಾಲವಸೂಲಾಗಬೇಕೆಂದು ಹರಿದಾಡತೊಡಗಿದರು. ಈ ಸಾಲಗಾರರಲ್ಲಿ ಭೀಮಣ್ಣನಿಗೆ ವಿಶೇಷವಾದ ತೊಂದರೆಯುಂಟಾಯಿತು. ಅವನು ಸತ್ಯಪ್ಪ ಸೆಟ್ಟರಿಂದ ಐದುನೂರು ರೂಪಾಯಿಗಳನ್ನು ಸಾಲವಾಗಿ ಪಡೆದು, ಒಂದು ಸಾವಿರರೂಪಾಯಿಗಳಿಗೆ ತನ್ನ ಹೊಲವನ್ನು ಅಡವು ಹಾಕಿ ತೋರಪತ್ತಿಯ ಪತ್ರವನ್ನು ಬರೆದು ಕೊಟ್ಟಿದ್ದನು. ಅವನು ಬರೆದುಕೊಟ್ಟ ಹೊಲವು ಉತ್ತಮವಾಗಿದ್ದುದರಿಂದ ಅದನ್ನು ಎತ್ತಿಹಾಕಬೇಕೆಂದೇ ಸೆಟ್ಟರು ಅವನಿಗೆ ಸಾಲಕೊಟ್ಟಿದ್ದರು. ಊರಲ್ಲಿ ಸ್ಥಾಪಿತವಾದ ಸಹಾಕಾರಿ ಸಂಘದಿಂದ ತಮ್ಮ ಹಾರೈಕೆಯು ಹಾರಿ ಹೋಗಬಹುದೆಂದು ಅವರು ಚಿಂತೆಗೊಳಗಾದರು. ಭೀಮಣ್ಣನು ಬೇರೆ ಸಂಘದ ಸದಸ್ಯನಾಗಿ ಬಿಟ್ಟಿದ್ದನು. ಸೆಟ್ಟರು ಚಿಂತಿಸಿ

ಚಿಂತಿಸಿ, ಕೊನೆಗೆ ಒಡಕಣ್ಣನ ಮರೆಹೊಕ್ಕರೆ ಅವನ ತಂತ್ರದಿಂದ ನಮ್ಮ ಬಯಕೆಯು ಕೈಗೂಡಬಹುದೆಂದು ಭಾವಿಸಿ, ಒಡಕಣ್ಣನಮನೆಮುಟ್ಟಿ ಹೋಗಿ ಅವನಿಗೆ ಬಹುಪರಿಯಿಂದ ಬೇಡಿಕೊಂಡರು. ಒಡಕಣ್ಣನು ಅವರ ಸಾಲಗಾರನು ತನ್ನ ಕಡೆಗೆ ಪಂಚಾಯಿತಿಗೆ ಬರುವಂತೆಮಾಡಬೇಕೆಂದು ಅವನಿಗೊಂದು ಹಂಚಿಕೆಯನ್ನು ತಿಳಿಸಿಕೊಟ್ಟನು.

ಮರುದಿವಸ ಶೆಟ್ಟರು ಭೀಮಣ್ಣನನ್ನು ಕರೆಯಿಸಿ, ಅವನು ಬಡ್ಡಿಯನ್ನು ಕೊಡದಿದ್ದರ ಕಾರಣವನ್ನೊಡ್ಡಿ ಅವನ ಮೇಲೆ ೧೬ ನೂರು ರೂಪಾಯಿಗಳಿಗೆ ಕೋರ್ಟಿನಲ್ಲಿ ವ್ಯಾಜ್ಯಹೂಡುವೆವೆಂದು ತಿಳಿಸಿದರು. ಭೀಮಣ್ಣನು ದಿಗಿಲುಗೊಂಡು, ಬಡವನ ಗೋಣಮುರಿಯ ಬೇಡಿರೆಂದೂ, ತಿಂಗಳೊಪತ್ತಿನಲ್ಲಿ ಸಾಲ ತೀರಿಸುವೆನೆಂದೂ ಬಹುದೈನ್ಯದಿಂದ ಹೇಳಿಕೊಂಡನು. ಸೆಟ್ಟರು ಕಣ್ಣು ಕೆಂಪಗೆ ಮಾಡಿ, " ಸಾಲವೊಯ್ದು ನಾಕು ವರ್ಸಾದರೂ ನಮ್ಮ ಮನೀ ಮುಂದ ಹಾಯಲಿಲ್ಲಾ, ಒಂದು ಪೈ ಬಡ್ಡೀ ಕೊಡ್ಲಿಲ್ಲಾ. ನಿನ್ನವಚನ ಹೋದವ್ಯಾಗ ನಮ್ಮವಚನಾನೂ ಹೋತು. ನೀ ಬರಕೊಟ್ಟ ಅಸಲಿಗೆ ಇಂದಿನತನಕ ಬಡ್ಡೀ ಹಿಡಿದರ ನೀ ೧೬ ನೂರು ರೂಪಾಯಿ ಕೊಡಬೇಕು. ಅಷ್ಟುಕೊಟ್ಟ ಯಾಳ್ಯಾನೇ ಮಾತಾಡು. ನಾಯೇನು ಒಂದು ಪೈ ಬಡ್ಡೀ ಬಿಡಾವಲ್ಲ. "ಇನ್ನು ನಮ್ಮಾ ನಿಮ್ಮಾ ದರ್ಶನ ಕೋರ್ಟಿನ ಕಟ್ಟೀಮ್ಯಾಗ" ಎಂದು ಛಡಾಳಿಸಿ ನುಡಿದರು.

ಭೀಮಣ್ಣನು, " ನಿಮ್ಮಮ್ಯಾಗ ಎರಗಿ ಬೀಳೋದು ನನಗ ಬೇಕಾಗಿಲ್ಲ. ನಾಳಿನ ದಿವಸ ನಾಕುಮಂದಿ ಬುದ್ಧಿವಂತರ ಎದುರಿಗೆ ನಮ್ಮಾ ನಿಮ್ಮಾ ಕೊಡುಕೊಳ್ಳೀ ನಿರ್ಣಯಾ ಮಾಡಿಕೊಂಡು ಬರೋನು " ಎಂದನು. ಅದಕ್ಕೆ ಸತ್ಯಪ್ಪನವರು, " ನಾಳೆ ಯಾಕ ? ಇಂದ ಸಂಜಿಗೇ ಅದು ತೀರಿ ಹೋಗಲಿ ನೀ ನೂ ದೇಸಾಯರ ಮನಿಗೆ ಬಾ, ನಾನೂ ಬಗತ್ತೀನಿ. ಅಲ್ಲಿ ಹ್ಯಾಗೂ ನಾಕು ಮಂದಿ ಕೂಡಿರತಾರ. ಅವರು ಹೇಳಿದಂತ ನಾವಿಬ್ಬು ನಡಕೊಳ್ಳೋನು. " ಎಂದು ಸೂಚಿಸಿದರು.

ಭೀಮಣ್ಣನು ಒಪ್ಪಿಕೊಂಡನು. ಅವನಿನ್ನೂ ಚಿಕ್ಕಹರೆಯದವನ. ನಾಲ್ಕುಜನ ಬುದ್ದಿವಂತರು ತನ್ನ ಹಾನಿಯನ್ನೆಂದಿಗೂ ಮಾಡಲಾರದೆಂದು

ನಂಬಿ ಸಾಯಂಕಾಲದಲ್ಲಿ ದೇಸಾಯರ ಮನೆಗೆ ಬಂದನು. ಒಡಕಣ್ಣನು ಅಂದೇ ಬಂದಿದ್ದ ತನ್ನ ಶಾಲಕಶೇಷನದುರಿಗೆ ದೀಕ್ಷಿತರ ಯೋಗ ಸಾಮರ್ಥ್ಯ ವನ್ನು ವರ್ಣಿಸುತ್ತಿದ್ದನು. ಒಡಕಣ್ಣನ ಹಸ್ತಕರಾದ ಭರಮಣ್ಣ, ಸದಾ ಸಿವಪ್ಪ ಮೊದಲಾದವರೂ ಕುಳಿತಿದ್ದರು. ಗುರುನಾಥ ದೀಕ್ಷಿತರು ತಮ್ಮ ಅನುಷ್ಠಾನವನ್ನೆಲ್ಲ ತೀರಿಸಿಕೊಂಡು ಬಂದು ಕೃಷ್ಣಾಜನದ ಮೇಲೆ ಗಂಭೀರ ಮುದ್ರೆಯಿಂದ ಕುಳಿತುಕೊಳ್ಳುವ ಸಮಯಕ್ಕೆ ಸತ್ಯಪ್ಪನವರ ಸವಾರಿ ಬಂತು. ಒಡಕಣ್ಣನು “ಓಹೋ! ಬಡವರ ಮನಿಗೆ ಭಾಗೀರಥಿ ಬಂಧಾಂಗಾತು. ಬರ್ರಿ” ಎಂದು ಅವರನ್ನು ಕರೆದು ಲೋಡಿಗೆ ಕುಳ್ಳಿರಿಸಿದನು. ಬಳಿಕ ಸೆಟ್ಟರು ತಾವು ಬಂದ ಸಮಾಚಾರವನ್ನು ವಿವರಿಸಿ, “ಕೊಟ್ಟ ದಡ್ಡು ತಿರುಗಿ ಬರ ಬೇಕಾದ್ರ ಪಂಚಾಯತಿಗೆ ಹೋಗಬೇಕಾದ ಪ್ರಸಂಗ ಬಂದೈತಿ ಕಲಿಕಾಲ. ಉಪಾಯ ಇಲ್ಲ. ಇಕಾ, ಈ ವತ್ತಿಪತ್ರ ನೋಡ್ರಿ, ಲೆಕ್ಕಮಾಡಿ ನಿಮ್ಮ ನಿರ್ಣಯೂ ಹೇಳ್ರಿ” ಎಂದು ಕಾಗದವನ್ನು ಅವನ ಮುಂದಿಟ್ಟರು.

ಒಡಕಣ್ಣನು ಭೀಮಣ್ಣನಿಗೆ, “ತಮ್ಮಾ ನಿನ್ನ ಅಂಬೋಣ ಏನದು?” ಎಂದನು. ಭೀಮಣ್ಣನು ಸೆಟ್ಟರಲ್ಲಿ ಐದುನೂರು ರೂಪಾಯಿ ಪಡೆದು ಸಾವಿರ ರೂಪಾಯಿಗಳಿಗೆ ಒತ್ತೆಯ ಪತ್ರವನ್ನು ಬರೆದು ಕೊಟ್ಟದ್ದನ್ನು ಹೇಳಿ, ಬಡತನದ ಮೂಲಕ ತನ್ನಿಂದ ಸಾಲ ತೀರಿಸುವುದಾಗಲಿಲ್ಲವೆಂದು ವಿವರಿಸಿ, “ಬಡ್ಡೀ ದರಾನೂ ಹೆಚ್ಚಿಗೆ ಐತೆ; ನಾ ಬಡವ. ಬಿದ್ದು ಬೇಡಿಕೋತಿನೀ. ತುಸಾ ಬಡ್ಡೀ ಬಿಡಸ್ರಿ ಇನ್ನು ಒಂದತಿಂಗಳಿಗೇ ಅವರ ದುಡ್ಡು ಓಟೂ ಕೊಡತೀನಿ” ಎಂದು ಹೇಳಿಕೊಂಡನು.

ಒಡಕಣ್ಣನು ತನ್ನ ಶಾಲಕನೊಂದಿಗೆ ಮಾತಾಡಿಕೊಂಡು, “ಸೆಟ್ರ ನಮ್ಮದುರಿಗೆ ನ್ಯಾಯ ನಿರ್ಣಯಕ್ಕ ಬಂತಂದ್ರ ನಾವು ಹೇಳಿದಂತೆ ಇಬ್ರೂ ಕೇಳಬೇಕು. ಹಾಂಗ ವಚನಾ ಕೊಟ್ರ ಹೇಳತೀವಿ. ಯಾರ ಹಂಗೂ ನಮಗಿಲ್ಲ. ಸುಮ್ಮನ ಕೋರ್ಟಿಗೆ ಹೋಗಿ ಬಡದಾಡಿ ರೊಕ್ಕಾ ಹಾಳು ಮಾಡಿ ಕೊಳ್ಳೋದಕಿಂತ, ಕೊಟ್ಟ ತಪ್ಪಿಗೆ ನೂರಾರು ರೂಪಾಯಿ ಬಿಟ್ಟು ಕೊಟ್ಟು ನಿಮ್ಮ ಸಾಲಾ ತೀರಿಸಗೋಬೇಕು. ನಾವು ನೋಡ್ರೀ ಶ್ರೀಮಂತ ರನ್ನ ಹತ್ತಿಕ್ಕಿ, ಬಡವರ ಬೆನ್ನು ಕಟ್ಟವರು. ಏನಂತೀರಿ?” ಎಂದನು.

ಸೆಟ್ಟರು ಒಪ್ಪಿಕೊಂಡರು. ಭೀಮಣ್ಣನೂ ತಲೆಹಾಕಿದನು. ಆಗ ಒಡಕಣ್ಣನು ಶಿಥ್ಯತೆಯಿಂದ; "ಇದು ದುಪ್ಪಟ್ಟು ಹಣಕ್ಕ ಬರಕೊಟ್ಟ ಪತ್ರ. ಅರ್ಧಹಣಕ್ಕ ಲೆಕ್ಕಾ ಮಾಡಿದ್ರ ಆಸಲೂ ಬಡ್ಡೀ ಕೂಡಿ ಎಂಟುನೂರುರೂಪಾಯಿ ಆಗತದ ಬಡವಾ, ಬಿದ್ದು ಹೇಳಕೋತಾನ, ಎಲ್ಲಾ ಸಾಲಾ ಒಮ್ಮೆಗೇ ತೀರಸ್ತೇನೀ ಅಂತಾನ. ಕಾರಣಾ, ನೀವು ಒಂದು ನೂರು ರೂಪಾಯಿ ಬಡ್ಡಿ ಬಿಟ್ಟು ಏಳುನೂರು ರೂಪಾಯಿ ತಕ್ಕೊಂಡು ಅವನ್ನ ರುಣಮುಕ್ತ ! ಮಾಡಬೇಕು" ಎಂದು ನಿರ್ಣಯಿಸಿದನು.

ಸತ್ಯಪ್ಪನವರು ಈಗಿಂದೀಗಲೆ ರೂಪಾಯಿಗಳನ್ನು ಕೊಡಿಸುವುದಾದರೆ ಒಪ್ಪಿಕೊಳ್ಳುತ್ತೇವೆಂದರು. ಭೀಮಣ್ಣನು ಯುಗಾದಿಯುವರೆಗೆ ತಡೆದರೆ ಸೊಸಾಯಿಟಿಯಿಂದ ಸಾಲಪಡೆದು ಹಣವನ್ನು ಕೊಡುವೆನೆಂದನು. ಒಡಕಣ್ಣನು, "ಈಗಂತೂ ನಿನ್ನಲ್ಲಿ ಹಣ ಇಲ್ಲ. ಸೆಟ್ರಿಗೆ ನಿನ್ನ ನಂಬಿಗಿ ಇಲ್ಲ. ಅಂದಮ್ಯಾಲ ಈ ನ್ಯಾಯ ತೀರಸೋದು ಹ್ಯಾಂಗಪಾ ?" ಎಂದನು. ಆಗ ದೀಕ್ಷಿತರು, "ಇಬ್ಬರ ಜುಟ್ಟಾನೂ ನಿಮ್ಮ ಕೈಯಾಗ ಹಿಡಕೊಳ್ರಿ. ಯಾರು ತಪ್ಪತಾರೋ ಅವರ ಪ್ರಾಯಶ್ಚಿತ್ತಾ ಮಾಡ್ರಿ" ಎಂದು ಅಧಿಕಾರವಾಣಿಯಿಂದ ನುಡಿದರು.

ಕೂಡಲೆ ಒಡಕಣ್ಣನು, "ಹೌದು, ಹೌದು. ಸೆಟ್ರು, ನೀವು ನನ್ನ ಮಾತು ಕೇಳೋ ಹಾಂಗಿದ್ರ,— ನನ್ನಮ್ಯಾಲ ನಿಮ್ಮ ವಿಶ್ವಾಸ ಇದ್ರ,— ಹದಿನಾರು ನೂರು ರೂಪಾಯಿ ಇಂದಿಗೇ ಮುಟ್ಟಿದವು ಅಂತ ಭೀಮಣ್ಣನ ಹೆಸರ್ಲೆ ಒಂದು ಪಾವತಿ ಬರದು ನನ್ನ ಕಡಿಗೆ ಕೊಡಬೇಕು. ಭೀಮಣ್ಣಾ ಯುಗಾದಿಗೆ ರೂಪಾಯಿ ಕೊಡೋದು ನಿಶ್ಚಯ ಇದ್ರ, ಅವಾ ಎರಡುಸಾವಿರ ರೂಪಾಯಿಗೆ ತನ್ನ ಹೊಲಾ ನಿಮಗ ಖರೀದಿ ಕೊಟ್ಟ ಬಗ್ಗೆ ಒಂದು ವಚನ ಪತ್ರ ಬರದು ನನ್ನ ಕಡೆಗೇ ಕೊಡಬೇಕು. ಯುಗಾದಿಗೆ ಭೀಮಣ್ಣ ಹಣಾ ತಂದು ಕೊಟ್ಟರ, ಆದೆರಡೂ ಕಾಗದಾ ಅವಗ ಕೊಡತೇನಿ; ಮತ್ತ ಕೊಡದಿದ್ರ ನಿಮ್ಮ ಕೈಯಾಗ ಕೊಡತೇನಿ" ಎಂದು ಹೇಳಿದನು.

ಇಬ್ಬರೂ ಒಪ್ಪಿಕೊಂಡು ಅವನ ಹೇಳಿಕೆಯಂತೆ ಬರೆದು ಕೊಟ್ಟು ಹೊರಟು ಹೋದರು.

ಭೀಮಣ್ಣನು ಪರಸ್ಪರ ಸಹಕಾರೀ ಸಂಘದಲ್ಲಿ ತನ್ನ ಹೆಸರಿಂದ ಏಳು ನೂರು ರೂಪಾಯಿಗಳ ಸಾಲವನ್ನು ಮಂಜೂರು ಮಾಡಿಸಿದನು. ಆದರೆ ಒಡಕಣ್ಣನ ದುರ್ಭೋಧನೆಯ ಪರಿಣಾಮವಾಗಿ ಸಂಘದ ಸಂಚಾಲಕರು ಇಲ್ಲದ ನೆವಹೇಳಿ ಭೀಮಣ್ಣನಿಗೆ ಸಾಲಕೊಡುವುದನ್ನು ಮುಂದಕ್ಕೆ ತಳ್ಳತೊಡಗಿದರು. ಕೊನೆಗೆ ಯುಗಾದಿಯಾದ ಎಂಟು ದಿನಕ್ಕೆ ಸಾಲ ಸಿಗುವುದೆಂದೂ ಹೇಳಿಬಿಟ್ಟರು. ಭೀಮಣ್ಣನು ಒಡಕಣ್ಣನ ಬಳಿಗೆ ಬಂದು ಎಂಟು ದಿನ ತಡೆಯುವಂತೆ ಮಾಡಿರೆಂದು ಹೇಳಿಕೊಂಡನು. ಒಡಕಣ್ಣನು ಅದಕ್ಕೆ ಒಪ್ಪಿಕೊಂಡು ಅವನನ್ನು ಕಳಿಸಿ, ಮುಂದೆ ಯುಗಾದಿಯ ಮರುದಿನವೆ ಅವೆರಡೂ ಲೇಖಗಳನ್ನು ಸೆಟ್ಟರಿಗೆ ಕೊಟ್ಟುಬಿಟ್ಟನು.

ಯುಗಾದಿಯಾದ ಹತ್ತುದಿನಕ್ಕೆ ಭೀಮಣ್ಣನು ಹಣವನ್ನು ಕಟ್ಟಿಕೊಂಡು ಬಂದನು. ಆಗ ಒಡಕಣ್ಣನು ತಪ್ಪಿಸಿಕೊಂಡು ಹನುಮಾಪುರಕ್ಕೆ ಹೋಗಿ ಬಿಟ್ಟಿದ್ದನು. ಭೀಮಣ್ಣನು ಅವನ ಮನೆಗೆ ನಾಲ್ಕುದಿನ ಎಡತಾಕಿದ ಮೇಲೆ ಒಡಕಣ್ಣನು ಭೆಟ್ಟಿಯಾದನು; ಆದರೆ, " ನೀ ನಿನ್ನ ವಚನದಂತೆ ನಡಕೊಳ್ಳಲಿಲ್ಲ. ಆದ್ದರಿಂದ ನಾವು ಮೊದಲಿನ ನಿರ್ಣಯದಂತೆ ಎರಡೂ ಲೇಖ ಸತ್ಯಪ್ಪಸೆಟ್ರಿಗೆ ಕೊಟ್ಟು ಬಿಟ್ಟೇವಿ " ಎಂದು ಹಾರಿಸಿಬಿಟ್ಟನು. " ಬಡವನ್ನ ಉಳಿಸಿರಿ " ಎಂದು ಹೇಳಿಕೊಂಡನು; ಎದೆಎದೆ ಬಡಿದುಕೊಂಡನು ಕಣ್ಣೀರು ಸುರಿಸಿದನು. ಆದರೆ ಒಡಕಣ್ಣನ ಕಲ್ಲೆದೆಯೇನು ಕರಗಲಿಲ್ಲ.

ಮುಂದೆ ಸತ್ಯಪ್ಪಸೆಟ್ಟರು ಕೋರ್ಟಿನಲ್ಲಿ ವ್ಯಾಜ್ಯವನ್ನು ಹೂಡಿ, ಒಡಕಣ್ಣನ ಹಸ್ತಕರಿಂದ ಸಾಕ್ಷಿಗಳನ್ನು ಹೇಳಿದರು. ಭೀಮಣ್ಣನು ತಾನು ಸಾಲ ತಂದ ಏಳುನೂರು ರೂಪಾಯಿಗಳನ್ನು ವೆಚ್ಚಮಾಡಿ ಮೂರುವರ್ಷಗಳವರೆಗೆ ವ್ಯಾಜ್ಯವನ್ನು ಸಾಗಿಸಿದನು. ಆದರೆ ಸತ್ಯಪ್ಪನವರು ಬರೆಯಿಸಿಕೊಂಡ ವಚನಪತ್ರವೆ ಕೊನೆಗೆ ಸಿದ್ಧವಾಗಿ ಭೀಮಣ್ಣನ ಹೊಲವು ಸೆಟ್ಟರ ಪಾಲಾಯಿತು. ಸೊಸಾಯಿಟಿಯವರು ಭೀಮಣ್ಣನಿಗೆ ಕೊಟ್ಟ ಸಾಲದ ದುರುಪಯೋಗವಾಯಿತೆಂದು ಅವನ ಮನೆಯನ್ನು ಲಿಲಾವು ಮಾಡಿಸಿ ತಮ್ಮ ಏಳುನೂರು ರೂಪಾಯಿಗಳನ್ನು ಮುಟ್ಟಿಸಿಕೊಂಡರು.

ಭೀಮನು ಭಿಕ್ಷಾಪಾತ್ರೆಯನ್ನು ಹಿಡಿದು ಒಡಕಣ್ಣನ ವಂಶಕ್ಕೆ ವೈರಿಯಾಗಿ, ಅವನನ್ನು ಮನಬಂದಂತೆ ಹಳಿಯುತ್ತಾ ಕುಳಿತನು.

# ೨೮ ವರನ ಮೆರವಣಿಗೆ

ಅಸಹಕಾರ ಚಳವಳಿಯು ಒಳ್ಳೆಯ ಏರಿಕೆಯಲ್ಲಿರುವ ಕಾಲ. ಪರದೇಶಿ ವಸ್ತು ಬಹಿಷ್ಕಾರದ ಚಳವಳಿಯಲ್ಲಿ ಬೊಮ್ಮೀಗೇರಿಯ ಬಹು ಜನರು ಭಾಗ ವಹಿಸುತ್ತಿದ್ದಾರೆ. ಎಲ್ಲಿ ನೋಡಿದಲ್ಲಿ ಕೈನೂಲಿನ ಬಟ್ಟೆಗಳು ಕಂಗೊಳಿಸು ತ್ತಿವೆ. ರಾಷ್ಟ್ರೀಯ ಶಾಲೆಯೂ, ವ್ಯಾಯಾಮ ಶಾಲೆಯೂ ಸ್ಥಾಪಿತವಾಗಿವೆ. ಮಂದಬುದ್ಧಿಗಳಾದ ಉಡಾಳರು ಸರಕಾರೀಶಾಲೆಗೆ ಶರಣುಹೊಡೆದು ಸ್ವೇಚ್ಛಾ ಚಾರಿಗಳಾಗಿ ಸಂಚರಿಸುತ್ತಿರುವುದರಿಂದ ಬೊಮ್ಮೀಗೇರಿಯ ಶಾಲೆಯು ಸಂಪು ಷ್ಟಕ್ಕೆ ಬಂದಿದೆ. ವರ್ತಮಾನಪತ್ರವನ್ನು ಓದುವವರು ಬೊಮ್ಮೀಗೇರಿಯ ಒಕ್ಕಟ್ಟನ್ನೂ, ತರುಣರ ಉತ್ಸಾಹವನ್ನೂ ಹೊಗಳುತ್ತಿದ್ದಾರೆ.

ವತನದಾರರನ್ನೆಲ್ಲ ಬುಡಮೇಲೇ ಮಾಡಬೇಕೆಂದು ಗುರಿಹೂಡಿದ ಒಡ ಕಣ್ಣನಿಗೆ ಇದೊಂದು ಸರ್ವೋತ್ಕೃಷ್ಟವಾದ ಸುಸಂಧಿಯಾಗಿದೆ. ಅವನು ವತನದಾರರ ತರುಣರಿಗೆಲ್ಲ, "ನೀವು ನಿಮ್ಮ ಪೂರ್ವಜರ ಕೀರ್ತಿ ಉಳಸಬೇ ಕಾದರ ಅಸಹಕಾರ ಚಳವಳಿವಳಗ ಧುಮುಕಲಿಕ್ಕೇಬೇಕು. ನಾನು ಹಿಂದ ನಿಂತು ನಿಮಗ ಬೇಕಾದ ಸಹಾಯ ಮಾಡತೇನಿ. ನಾವು ವೃದ್ಧರು, ಮುಂ ದರಿದು ಕಾರ್ಯಮಾಡೋ ಶಕ್ತಿ ನಮಗಿಲ್ಲ ನಿಮ್ಮಂಥಾ ಬಿಸಿರಕ್ತದ ತರುಣ ರಿಂದಲೇ ರಾಷ್ಟ್ರೋದ್ಧಾರವಾಗತಕ್ಕದ್ದು. ನಿಮ್ಮ ಹಿರೇರು ಪುಕ್ಕರು. ಅವರ ಮಾತಿಗೆ ಕಿವಿಗೊಡದೆ ಮುಂದ ನುಗ್ಗರಿ" ಎಂದು ಉಪದೇಶ ಮಾಡತೊಡಗಿ ದನು. ಇದರಿಂದ ತರುಣರೆಲ್ಲ ಹುರಿದುಂಬಿ ಅಸಹಕಾರದ ರಣರಂಗದಲ್ಲಿ ಧುಮ್ಮಿಕ್ಕಿದರು. ಒಡಕಣ್ಣನಿಗೆ ಪರಮಾನಂದವಾಯಿತು. ಅವನು ಬೊಮ್ಮೀ ಗೇರಿಯಲ್ಲಿ ನಡೆದ ಚಟುವಟಿಕೆಗಳನ್ನೆಲ್ಲ ಗುಪ್ತವಾಗಿ ಸರಕಾರದ ಅಧಿಕಾರಿಗ ಳಿಗೆ ತಿಳಿಸಹತ್ತಿದನು.

ದೇಶಪಾಂಡೆ ಗುರುರಾಯ, ಶಂಕರರಾಯರು ಸರಕಾರದ ರೋಷಕ್ಕೆ ಪಾತ್ರರಾಗಿ ಸೆರೆಮನೆಯನ್ನು ಕಂಡರು. ಎಷ್ಟೋ ಜನರು ತಮ್ಮ ಹೊಲಗಳ ಹಕ್ಕನ್ನೂ ಕಳೆದುಕೊಂಡರು. ಗಿರಿಧರರಾಯರ ಮೊಮ್ಮಕ್ಕಳು ಖಾದಿಯ ಭಕ್ತರಾದರೂ ಹಿರಿಯರ ಹೆದರಿಕೆಯಿಂದ ಚಳವಳಿಯಲ್ಲಿ ಭಾಗವಹಿಸಲಿಲ್ಲ. ಗಿರಿಧರರಾಯರ ಮನೆತನದ ಮೇಲೆ ಒಡಕಣ್ಣನ ಕ್ರೂರಕಟಾಕ್ಷವು ಬಿದ್ದಿತ್ತು.

ತನ್ನ ಈ ತಂತ್ರವು ನಡೆಯದ್ದನ್ನು ಕಂಡು ಅವನು ಅವರ ಮೇಲೆ ಹೊಸ ದೊಂದು ಹೊಂಚನ್ನು ಹೂಡಿದನು.

ಗಿರಿಧರರಾಯರ ಮಗನಾದ ಅಪ್ಪಾರಾಯನಿಗೆ ಐವರು ಗಂಡುಮಕ್ಕಳು. ಅವರಲ್ಲಿ ಚಿಕ್ಕವನಾದ ತ್ರಿಯಂಬಕನು ಅಲ್ಪಸ್ವಲ್ಪ ಇಂಗ್ಲೀಷನ್ನು ಕಲಿತು, ಮನೆಹಿಡಿದು ಕುಳಿತಿದ್ದನು. ಅವನು ಖಾದಿಯ ಭಕ್ತನಾಗಿ ಪರದೇಶದ ಸಕ್ಕರೆ ಮೊದಲಾದುವುಗಳಿಗೂ ಬಹಿಷ್ಕಾರ ಹಾಕಿ, ಕಂಡಕಂಡವರಿಗೆ ಖಾದಿಯ ಉಪದೇಶ ಮಾಡುತ್ತಿದ್ದನು. ಅಪ್ಪಾರಾಯರು ಮಗನ ವರದಕ್ಷಿಣೆಯನ್ನು ಒಂದು ಸಾವಿರಕ್ಕೇರಿಸಿದ್ದರಿಂದ ವರಾರ್ಥಿಗಳಾಗಿ ಬಂದವರೆಲ್ಲ ತಿರುಗಿಹೋಗ ಹತ್ತಿದರು ಅಪ್ಪಾರಾಯರು ದುಡ್ಡಿನ ದುರಾಶೆಗೆ ಬಿದ್ದಿರುವರೆಂಬುದನ್ನು ಕಂಡು, ಒಡಕಣ್ಣನು ಗುರುನಾಥ ದೀಕ್ಷಿತರೊಡನೆ ಗುಪ್ತವಾಗಿ ಆಲೋಚನೆ ಮಾಡಿ, ತನ್ನ ಹಸ್ತಕರಿಂದ ಮೋಸಗಾರಿಕೆಯ ಪತ್ರವೊಂದನ್ನು ಧಾರಾನಗರದ ಅಂಚೆಯಕಟ್ಟೆಗೆ ಹಾಕಿಸಿಬಿಟ್ಟನು.

ಎರಡು ದಿನಗಳಲ್ಲಿ ಆ ಕಾಗದವು ಅಪ್ಪಾರಾಯರ ಕೈಸೇರಿತು. ಅವರು ಓದಿನೋಡಿ, ತಮ್ಮ ಮಗನ ದೈವ ತೆರೆಯಿತೆಂದು ಹಿರಿಹಿರಿ ಹಿಗ್ಗಿದರು. ಒಕ್ಕುಂಬಿಯ ಕುಲಕರ್ಣಿಯವರ ಮನೆತನದಲ್ಲಿ ಒಬ್ಬಳೇ ಚಿಕ್ಕಮಗಳು ಉಳಿದದ್ದರಿಂದ ಸರಕಾರದವರು ಅವರ ಆಸ್ತಿಯನ್ನೆಲ್ಲ ತಮ್ಮ ವಶಕ್ಕೆ ತೆಗೆದುಕೊಂಡಿತ್ತಾರಂತೆ; ಆ ವತನದ ವ್ಯವಸ್ಥೆಯನ್ನು ನೋಡುವ ಮುಖ್ಯಾಧಿಕಾರಿಯಾದ ನಾಡಕರ್ಣಿ ವೆಂಕಟರಾಯರು ತ್ರಿಯಂಬಕನಿಗೆ ಆ ಹುಡಿಗೆಯನ್ನು ಕೊಡಬೇಕೆಂದು ಕಾಗದ ಬರೆದು, ಕನ್ನಿಕೆಯ ಗೋತ್ರ, ಜನ್ಮನಾಮಗಳನ್ನೂ ತಿಳಿಸಿದ್ದಾರೆ!

ಅಪ್ಪಾರಾಯರು ಅದನ್ನು ಇನ್ನೆರಡು ಸಲ ಓದಿಕೊಂಡರು. ಹಿಗ್ಗು ಹಿಡಿಸಲಾರದೆ ನಡುಮನೆಯಲ್ಲಿ ಛರಗಿಕೊಂಡಿದ್ದ ಹೆಂಡತಿಯ ಬಳಿಗೆ ಹೋಗಿ ಓದಿತೋರಿಸಿದರು. ಹುಡಿಗೆಗೆ ಸುಮಾರು ಒಂದು ಸಾವಿರ ರೂಪಾಯಿಯಾದರೂ ಆಸ್ತಿಯಿರಬಹುದು; ಮೇಲೆ ಹತ್ತೆಂಟು ಸಾವಿರ ರೂಪಾಯಿ ಸರಕಾರದಲ್ಲಿರಬಹುದು. ಛೆ! ಈ ಕನ್ಯೆಯನ್ನು ಬಿಡಬಾರದು ಎಂದುಕೊಂಡು ಅಪ್ಪಾರಾಯರು ಕಾಗದವನ್ನು ಮರಳಿ ಓದಿದರು. ಕಾಗದದ ಕೊನೆಯಲ್ಲಿ "ನೀವು ವಿಚಾರಿಸಿ, ವರನ ಗೋತ್ರ, ಜನ್ಮನಾಮಗಳನ್ನು ನಿಮ್ಮ ಊರ ಜೋಯಿಸರ

ಕಡೆಗೆ ಕೊಟ್ಟು, ಅವರಿಂದ ನಮಗೆ ಪತ್ರ ಬರೆಯಿಸಿದರೆ ವರನನ್ನು ನೋಡುವುದಕ್ಕೆ ನಾವುನಿಮ್ಮಲ್ಲಿಗೆ ಬರುವೆವು" ಎಂದಿದ್ದುದರಿಂದ ಅವರು ಲಗುಬಗೆಯಿಂದ ಬಗಲಕಸಿ ಅಂಗಿಯನ್ನು ತೊಟ್ಟು, ರುಮಾಲನ್ನು ಸುತ್ತಿ, ಸೆಲ್ಲೆಯನ್ನು ಹೊದ್ದುಕೊಳ್ಳುತ್ತಾ, ಜೋಯಿಸರ ಮನೆಗೆ ಬಂದರು.

ವಿರುಪಾಕ್ಷ ಜೋಯಿಸರ ದತ್ತಕ ಪುತ್ರರಾದ ರಾಮಜೋಯಿಸರು ಪಡಸಾಲೆಯಲ್ಲಿ ಒಡಕಣ್ಣನೊಡನೆ ಮಾತಾಡುತ್ತ ಕುಳಿತಿದ್ದರು. ಅಪ್ಪಾರಾಯರನ್ನು ಕರೆದು ಒಡಕಣ್ಣನು ತನ್ನ ಹತ್ತಿರ ಲೋಡಿಗೆ ಕುಳ್ಳಿರಿಸಿಕೊಂಡನು. ಜೋಯಿಸರು, "ನಿಮ್ಮ ಚಿರಂಜೀವರ ಲಗ್ನದ ಹೋಳಿಗಿ ತೀವ್ರವಾಗಿ ಹಾಕಿ ನಮ್ಮ ಬಾಯಿ ಸವಿ ಮಾಡ್ರೆಲ್ಲ" ಎಂದು ಸಹಜವಾಗಿ ನುಡಿದರು. ಒಡಕಣ್ಣನೂ, "ನಿಮ್ಮ ಹುಡುಗ್ಗ ಹೆಣ್ಣು ಕೊಡದವರು ಯಾರು? ಸಾವಿರಾರು ರೂ. ಉತ್ಪನ್ನ, ಮನ್ಯಾಗ ಸಂಪತ್ತು, ಇಪ್ಪತ್ತು ವರ್ಷದ ಹುಡುಗ. ರೂಪವಂತ, ವಿದ್ಯಾವಂತ, ಸದಾಚಾರಿ, ಅಪರೂಪ ವರಾ. ಸ್ಥಿತಿವಂತರ ಸಂಬಂಧ ಮಾಡಬೇಕಂತ ನೀವು ಹುಡಕೋದ್ರಿಂದ ಲಗ್ನ ಸ್ವಲ್ಪ ಹಿಂದ ಬಿದ್ದದ. ಸಮೀಪದಾಗ ನಿಮ್ಮ ಇಚ್ಛಾನೂ ಪೂರ್ಣ ಆದೀತು" ಎಂದು ಧೂರ್ತತೆಯಿಂದ ನುಡಿದನು.

ರಾಯರು "ಹೌದು ದೇಸಾಯ್ರ, ನಿಮ್ಮ ತರ್ಕ ಬರಾಬ್ಬರ! ಅವಗ ನೀವು ಹೇಳಿದಂಥಾದ್ದು ಒಂದು ಕನ್ಯಾ ಬಂದದ ಆದೇನು ಹೊರಗಿನದಲ್ಲ. ನಮ್ಮ ಜೋಯಿಸರಿಗೇ ಸಂಬಂಧ. ನೀವೆಲ್ಲಾರೂ ಕೂಡಿ ಪ್ರಯತ್ನ ಮಾಡಿದ್ರ ಕಾರ್ಯ ಆಗೋದ್ರಾಗ ಸಂದೇಹ ಇಲ್ಲ" ಎಂದು ಮುಗುಳು ನಗೆಯಿಂದ ನುಡಿದು ತಮಗೆ ಬಂದು ಓಲೆಯನ್ನು ಜೋಯಿಸರಕೈಯಲ್ಲಿಟ್ಟರು. ಜೋಯಿಸರು ಅದನ್ನೋದಿ "ಈ ಕೆಲಸ ನಾ ಅವಶ್ಯವಾಗಿ ಮಾಡಬೇಕಾತಲ್ಲ. ಈ ಕನ್ಯಾ ನನ್ನ ಮಲತಂಗಿ ಪರದೇಶಿ ಏನ್ರೆಪಾ. ನಿಮ್ಮಂಥಾ ಸದ್ಗುಣಿಗಳ ಸಂಬಂಧ ಆದ್ರ ಆಕೀ ದೈವ ತೆರಧಾಂಗಾತು. ಅನಾಯಾಸಾ ಅಣ್ಣಾ ತಂಗಿ ಕೂಡೋ ಯೋಗ ದೇವರು ತಂದುಕೊಟ್ಟಾನ. ಸರಕಾರದವರ ನನ್ನ ತಂಗೀ ಸಂರಕ್ಷಣಾ ಮಾಡೋ ಭಾರ ಹೊತ್ತಿದ್ರೂ ಅಂತ ನಾ ಆಕೀ ಲಗ್ನದ ವಿಷಯಕ್ಕ ಮಾತಾಡೋ ಹಾಂಗಿದ್ದಿಲ್ಲ. ಈಗ ಆತೆಲ್ಲಾ?" ಎಂದು ನಗೆಮೊಗದಿಂದ ಹೇಳಿದರು. ವರನ ಜನ್ಮನಾಮ ಗೋತ್ರಗಳನ್ನು ತೆಗೆದುಕೊಂಡು

ಜೋಯಿಸರು ತಮ್ಮ ಹೊತ್ತಿಗೆಯ ಗಂಟನ್ನು ಬಿಚ್ಚಿ, ಒಂದು ಪುಸ್ತಕವನ್ನೂ ಪಂಚಾಂಗವನ್ನೂ ಇಟ್ಟುಕೊಂಡು ಬೆರಳೆಣಿಸಿ, ಅಂಕಿಹಾಕಿ, ಕೊನೆಗೆ ಗೋಣ ಅಲ್ಲಾಡಿಸಿ, "ದೇಶಪಾಂಡೇರ! ಘಟಿತಾರ್ಥ ಸರ್ವೋತ್ಕೃಷ್ಟ ಕೂಡಿ ಬಂದದ. ಇಕಾ ನೋಡ್ರಿ ಇಪ್ಪತ್ತುನಾಲ್ಕು ಗುಣ ಆಗ್ಯಾವ" ಎಂದು ತಮ್ಮ ಬೇರೀಜನ್ನು ಅವರ ಮುಂದಿಟ್ಟರು. ದೇಶಪಾಂಡೆಯವರು "ಆತು, ವೈದಿಕ ವಿಷಯ ಕೂಡಿ ಬಂತು. ನೀವೂ ದೇಸಾಯರೂ ಕೂಡಿ ಲೌಕಿಕ ವಿಷಯ ಅಷ್ಟು ಬಗಿಹರಿಸಿ ಬಿಡ್ರಿ" ಎಂದರು. ಜೋಯಿಸರು ತಾವು ಆ ಕೆಲಸವನ್ನು ಮಾಡುವುದಾಗಿ ಆಶ್ವಾಸನ ಕೊಟ್ಟರು. ಆದರೆ ತ್ರಿಯಂಬಕನ ಖಾದಿಯ ಭಕ್ತಿಯನ್ನು ಕಂಡು ಹೆಣ್ಣು ಕೊಡಲಿಕ್ಕೆ ಬಂದ ಸರಕಾರೀ ಅಧಿಕಾರಿಗಳು ಹಿಂದಿರುಗಿ ಹೋದರೆ ಹೇಗೆ ಎಂಬ ಸಂಶಯವನ್ನು ಒಡಕಣ್ಣನು ವ್ಯಕ್ತ ಮಾಡಿದನು. ಅದಕ್ಕೆ ಜೋಯಿಸರು, "ಹೌದು ನಿಮ್ಮ ಸಂಶಯ ಯೋಗ್ಯ ಅದ. ಆದ್ರ ಅವರು ಬಂದಾಗಷ್ಟು ವರಗ ಪರದೇಶೀ ಉಡುಪುಹಾಕಿಸಿದ್ರ ಆತೆಲ್ಲಾ. ನಾವೆಲ್ಲಾರೂ ಒಟ್ಟಾದ್ರ ಅರೇದವರ ಕಣ್ಣಾಗ ಮಣ್ಣು ಹಾಕೋದೇನು ಆಶ್ಚರ್ಯ?" ಎಂದರು.

ದೇಶಪಾಂಡೆಯವರು "ನಮ್ಮಂಥ ವತನದಾರ್ರಿಗೆ ಸರಕಾರದ ವಿರುದ್ಧ ಚಳವಳಿ ಯಾಕ್ರೆಪಾ? ಯಥಾ ರಾಜಾ ತಥಾ ಪ್ರಜಾ ಅಂತ ಇದ್ರಾತು" ಎಂದು ದನಿಯೆಳೆದರು. ಜೋಯಿಸರು ತಾವೆ ಪ್ರತ್ಯುತ್ತರವನ್ನು ಬರೆದು ಹಾಕುವೆನೆಂದು ಹೇಳಿ ಆ ಓಲೆಯನ್ನು ತಮ್ಮ ಬಳಿಯಲ್ಲಿಯೆ ಇಟ್ಟುಕೊಂಡರು. ಅಪ್ಪಾರಾಯರು "ಎಲ್ಲಾ ಭಾರ ನಿಮ್ಮ ಮ್ಯಾಲೇ ಅದ ನೋಡ್ರೆಪಾ ಎಂದು ಹೇಳಿ ಹೊರಟುಹೋದರು. ಒಡಕಣ್ಣನು ಜೋಯಿಸರ ಕಿವಿಯಲ್ಲಿ ಏನನ್ನೋ ಊದಿ ತಮ್ಮ ಮನೆಗೆಹೋದನು.

ಮುಂದೆ ಒಂದು ದಿನ ಜೋಯಿಸರ ಮನೆಗೆ ಅವರ ಆಪ್ತರಾದ ವಕೀಲರೊಬ್ಬರು ಬಂದರು. ಒಡಕಣ್ಣನು ಕೂಡಲೆ ಅವರನ್ನೂ ಜೋಯಿಸರನ್ನೂ ಕಂಡು ಮಾತಾಡಿ ತನ್ನ ಮನೆಗೆ ಹೋದನು. ಮಧ್ಯಾಹ್ನದ ಊಟವಾದ ಮೇಲೆ ಜೋಯಿಸರು ನಾಡಕರ್ಣಿ ವೆಂಕಟರಾಯರು ತ್ರಿಯಂಬಕನಿಗೆ ಹೆಣ್ಣು ಕೊಡಲಿಕ್ಕೆ ಬಂದಿದ್ದಾರೆಂದು ಅಪ್ಪಾರಾಯರ ಮನೆಗೆ ಹೇಳಿಕಳಿಸಿ, ಅವರು

ವೇಂಕಟರಮಣನ ಗುಡಿಯಲ್ಲಿ ಇಳಿದುಕೊಂಡಿರುವರೆಂದೂ, ಒಂಬತ್ತು ತಾಸಿನ ಹೊತ್ತಿಗೆ ವರನನ್ನು ಕರೆದುಕೊಂಡು ಗುಡಿಗೆ ಬರಬೇಕೆಂದೂ ತಿಳಿಸಿದರು.

ಅಪ್ಪಾರಾಯರು ಒಡಕಣ್ಣನಲ್ಲಿಗೆ ಬಂದು ಈ ಸುದ್ದಿಯನ್ನು ಮುಟ್ಟಿಸಿ ಮುಂದಿನ ಸಿದ್ಧತೆಯ ಬಗ್ಗೆ ಅವನೊಡನೆ ಆಲೋಚನೆಯನ್ನಾರಂಭಿಸಿದರು. ಒಡಕಣ್ಣನು "ಶುಭಸ್ಯಶೀಘ್ರಂ ನೀವು ಯಾವುದಕ್ಕೂ ಆಲೋಚನಿ ಮಾಡಬ್ಯಾಡ್ರಿ. ನೀವು ನಿಮ್ಮ ಮಗನ್ನ ನಮ್ಮನೀಗೆ ಕಳಸರಿ. ನಾವೂ ದೀಕ್ಷಿತರೂ ಕೂಡಿ ವರನ್ನ ತೋರಿಸಿಗೊಂಡು ಕಾರ್ಯಮಾಡಿಕೊಂಡು ಬರತೇವಿ" ಎಂದು ಅಭಯವಚನವಿತ್ತು ಅವರನ್ನು ಕಳುಹಿಕೊಟ್ಟನು.

ಮುಂದೆ ಒಂದು ತಾಸಿನಲ್ಲಿ ಖಾದಿಭೂಷಿತನಾದ ತ್ರಿಯಂಬಕನು ಅವನಲ್ಲಿಗೆ ಬಂದನು. ದೀಕ್ಷಿತರು ಅವನನ್ನು ನೋಡಿ, "ಇದೇನು ಸರ್ವಾರಿಷ್ಟ ವೇಷ ಹಾಕ್ಕೊಂಡು ಬಂದ್ಯೋ? ಇದನ್ನು ಕಂಡು ಸರಕಾರೀ ಅಧಿಕಾರಿಗಳ ನಿನಗ ಹೆಣ್ಣು ಕೊಟ್ಟಾರ? ನಿಮ್ಮಪ್ಪಗೂ ನಿನಗೂ ಸಾಯೋತನಕ ಬುದ್ಧಿ ಬರೋದಿಲ್ಲ. ಹೊತ್ತು ಬಂಧಾಂಗ ಕೊಡಿ ಹಿಡೀಬೇಕಪಾ" ಎಂದು ನಿಷ್ಠುರವಾಗಿ ನುಡಿದರು.

ಆಗ ತ್ರಿಯಂಬಕನು ಆವೇಶದಿಂದ ಖಾದಿಯ ಮೇಲೊಂದು ಉಪನ್ಯಾಸವನ್ನಾರಂಭಿಸಿದನು. ದೀಕ್ಷಿತರು ಅವನನ್ನು ನಡುವೆ ತಡೆದು, "ನೀ ಈ ವಸ್ತ್ರ ಬಿಡದಿದ್ರ ಅವರು ನಿನಗ ಹೆಣ್ಣು ಕೊಡೋದಿಲ್ಲ. ನಿನ್ನ ಹಿಂದ ಬಂದು ನಾವೂ ಮೂರ್ಖರಾಗಬೇಕಾದೀತು. ಮತ್ತು ಯಾರನಾದ್ರೂ ಕರಕೊಂಡು ಹೋಗು—" ಎಂದು ಮುಗಿಸಿಬಿಟ್ಟರು. ಆಗ ಒಡಕಣ್ಣನು, "ದೀಕ್ಷಿತರ, ಸಿಟ್ಟಾಗಬ್ಯಾಡ್ರಿ. ತ್ರಿಯಂಬಕ ಇನ್ನೂ ಚಿಕ್ಕವ. ಮುಂದಿನ ಧೋರಣಾ ಅವಗಿಲ್ಲ ಅವಗ ಖಾದೀಮ್ಯಾಲ ಭಕ್ತೀನೂ ಅದ, ವತನದ ಮ್ಯಾಲ ಆಶಾನೂ ಅದ. ಸರಕಾರದವರು ಬಂದಾಗ ಪರದೇಶಿ ಅರಿವಿ ಹಾಕಿ, ಅವರ ಕಣ್ಣಾಗ ಮಣ್ಣು ಹಾಕೋದು, ಕಾರ್ಯ ಕೈಗೂಡಿದ ಮ್ಯಾಲ ಮತ್ತ ಖಾದೀ ಹಾಕಲಿಕ್ಕೆ ಬರತದ. ಎಷ್ಟೋ ಜನರು ಸಭಾ, ಮೆರವಣಿಗೀ ಕಾಲಕ್ಕ ಖಾದೀ ಹಾಕ್ಕೊಂಡು ಮೆರದಾಡಿ, ಮನಿಗೆ ಬಂದ ಕೂಡಲೆ ಪರದೇಶಿ ವಸ್ತ್ರ ಧರಿಸಿ ಚಹಾದಂಗಡೀ ಬಾಗಲಾ ಕಾಯೋದು ನೀವೂ ಕಣ್ಮುಟ್ಟ ನೋಡೀರಿ. ತ್ರಿಯಂಬಕಗೂ ಗೊತ್ತದ. ಆದ್ರ ಅವನ ಹತ್ರ ಪರದೇಶೀ ವಸ್ತ್ರ ಇಲ್ಲಾ

ಆದಕ್ಕ ಸ್ವಲ್ಪ ಸಂಕೋಚಪಡ್ತಾನ" ಎಂದು ಮೈಮೇಲೆ ·ತೆಗೆದುಕೊಂಡು ಮಾತಾಡಿದನು.

ದೀಕ್ಷಿತರು ಆಗಲೆ ಹೊತ್ತಾಗುತ್ತ ಬಂತೆಂದು ಆವಸರ ಮಾಡತೊಡಗಿದ್ದರು. ಒಡಕಣ್ಣನು ತ್ರಿಯಂಬಕನನ್ನು ಒಳಗೆ ಕರೆದೊಯ್ದು ಜರದ ವಸ್ತ್ರವನು ಕೊಟ್ಟು ತಿದ್ದಿ ತಿದ್ದಿ ಉಟ್ಟುಕೊಳ್ಳಬೇಕೆಂದು ತಿಳಿಸಿದನು. ತ್ರಿಯಂಬಕನು ಸಂಕೋಚಪಟ್ಟು, ಕೊನೆಗೆ ಮನಸ್ಸಿನಲ್ಲಿ ಏನೋ ಒಂದು ನಿರ್ಧಾರಕ್ಕೆ ಬಂದು ಅದನ್ನು ಉಟ್ಟುಕೊಂಡನು. ಒಡಕಣ್ಣನ ಹಸ್ತಕರು ಮುಂದರಿದು ಬಂದು ಪರದೇಶಿ ಶರಟು ಕೋಟುಗಳನ್ನು ಅವನಿಗೆ ತೊಡಿಸಿದರು; ಜರವನ್ನು ಮೇಲೆ ಮಾಡಿ ರುಮಾಲನ್ನು ಸುತ್ತಿದರು. ಜರದ ಸೆಲ್ಲೆಯು ಕೊರಳಿಗೆ ಸುತ್ತಿತು. ಎಡಗೈಗೊಂದು ಗಡಿಯಾರವಾಯಿತು. ಅಷ್ಟರಲ್ಲಿ ಒಡಕಣ್ಣ ತನ್ನ ಗೋಪುಕಂಠಿಯ ಸರಗಳನ್ನು ತಂದು ತ್ರಿಯಂಬಕನ ಕೊರಳಲ್ಲಿ ಹಾಕಿದನು. ಎಡಗೈಯಲ್ಲಿ ಬಂಗಾರದ ಸಲಕಡೆ, ಬಲಗೈಯಲ್ಲಿ ಪೋಚಿ, ನಾಲ್ಕು ಬೆರಳಿಗೆ ಉಂಗುರ— ವರನ ಅಲಂಕಾರಗಳೆಲ್ಲಾ ಬಂದುವು.

ದೀಕ್ಷಿತರು ಅವನನ್ನು ನೋಡಿ, "ಈಗ ವಸ್ತ್ರ ನೀ ವರ ನೋಡಪಾ. ನಿನ್ನ ರೂಪ ನೋಡಿದ ಕೂಡಲೆ ಬಂದವರು ಹೆಣ್ಣುಕೊಟ್ಟೇ ಹೋಗತಾರ. ಇನ್ನ ತಡ ಮಾಡಬ್ಯಾಡ್ರಿ. ಹೊಸ ಕೊಡಿ ಒಂದು ಕೊಡ್ರಿ ಪಾದರಕ್ಷಾ ಹಾಕ್ಕೊಳ್ಳಲಿ ನಾವೆಲ್ಲಾರೂ ಹಿಂದಿನಿಂದ ಗುಡಿಗೆ ಹೋಗೋಣ" ಎಂದು ಕಣ್ಣುಸನ್ನೆ ಮಾಡಿ ನುಡಿದರು. ಒಡಕಣ್ಣನು "ನೀ ಹ್ಯಾಂಗೂ ಇಂಗ್ಲೀಷ ಕಲತಾವಾ ವರಪರೀಕ್ಷಾದಾಗ ಅವರು ಇಂಗ್ಲೀಷಿಲೆ ಕೇಳಿದ್ರ ನೀ ಇಂಗ್ಲೀಷಲೇನ ಉತ್ರಕೊಡು ಅಂಜಬ್ಯಾಡ. ಎಡಕ್ಕ ನೋಡಬ್ಯಾಡಾ, ಬಲಕ್ಕನೋಡಬ್ಯಾಡಾ ಶಟದುಕೊಂಡು ಹೋಗಿ ಶಟದುಕೊಂಡು ಲೋಡಿಗೆ ಕೂತು, ಒಳ್ಳೇ ದರ್ಪದಿಂದ ಮಾತಾಡು" ಎಂದು ಉಪದೇಶ ಮಾಡಿದನು.

ದೀಕ್ಷಿತರು ಶಾಲನ್ನು ಹೊದ್ದುಕೊಂಡು, ತಲೆಗೊಂದು ಶಾಲನ್ನು ಬಿಗಿದು, ಅವನನ್ನು ಕರೆದುಕೊಂಡು ಹೊರಬಿದ್ದರು. ದೇಸಾಯರ ಪರಿವಾರವೆಲ್ಲ ತ್ರಿಯಂಬಕನ ಹಿಂದಿನಿಂದ ನಡೆಯಿತು. ಅಪ್ಪಾರಾಯರ ಮನೆಬರುತ್ತಲೆ ಒಡಕಣ್ಣನು ಅವನನ್ನು ದೇವರಿಗೂ ಹಿರಿಯರಿಗೂ ನಮಸ್ಕಾರ ಮಾಡಿ ಬಾರೆಂದು ಒಳಗೆ ಕಳುಹಿದನು. ತ್ರಿಯಂಬಕನ ಉಡುಪನ್ನು ಕಂಡು ಅವನ

ತಾಯಿಯು ಹಿರಿಹಿರಿಹಿಗ್ಗಿದಳು. ಅಪ್ಪಾರಾಯರು ತಾವು ಬರುವುದಕ್ಕೊಷ್ಪದೆ, "ನೀವೇ ಕೆಲಸ ಮಾಡಿಕೊಂಡು ಬರ್ರಿ" ಎಂದು ಎಲ್ಲ ಭಾರವನ್ನು ಒಡಕಣ್ಣನ ಮೇಲೆ ಹಾಕಿಬಿಟ್ಟರು. ಅವರಿಗೆ ಅಭಯುವನ್ನು ಕೊಟ್ಟು ಅವನು ವರನೊಡನೆ ಮುಂದೆ ಸಾಗಿದನು. ದೀಕ್ಷಿತರೂ ಪರಿವಾರದವರೂ ಹಿಂದಾದರು. ಕೆಲವರು ಮುಂದೆ ಹೋಗಿ "ವರನ ಮೆರವಣಿಗಿ ಹೊಂಟದ, ಹೊರಗ ಬಂದು ನೋಡ್ರಿ" ಎಂದು ಮನೆಮನೆ ಹೊಕ್ಕು ಓಣಿಯೊಳಗಿನ ಜನರಿಗೆಲ್ಲ ಹೇಳಹತ್ತಿದರು. ಜನರು ಹೊರಗೆ ಬಂದು ಈ ಹುಚ್ಚಾಟವನ್ನು ನೋಡತೊಡಗಿದರು. ತ್ರಿಯಂಬಕನ ಗೆಳೆಯರು, "ಏನೋ ಇದೇನು ಜಾತಿಗಾರರ ವೇಷ ಹಾಕಿದಿ?" ಎಂದು ಕೂಗಿದರು ಆಗ ಹಿಂದಿನಿಂದ ಬರುವ ದೀಕ್ಷಿತರೂ ದೇಸಾಯರ ಪರಿವಾರದವರೂ,

ವರಾ ಹೊಂಟಿತೋ ವರಾ। ವತನಕೆ ಮರುಳಾದೊರಾ॥
ಖಾದಿಯ ಪ್ರೇಮದವರಾ।
ಬೋಧವ ಮಾಡುವ ವರಾ॥
ವೇಷವ ಧರಿಸಿದವರಾ।
ನಾಲ್ಕು ರೂಪಾಯ್ಗೊರಾ॥

ಎಂದು ಹಾಡುತ್ತಾ, ಚಪ್ಪಾಳೆ ಬಡಿಯುತ್ತಾ ನಡೆದರು.

ಎಲ್ಲರೂ ವೆಂಕಟರಮಣನ ಗುಡಿಗೆ ಬಂದರು. ಅಲ್ಲಿ ಗುಡಾರವನ್ನೂ ಅದರ ಮೇಲೊಂದು ಜಮಖಾನೆಯನ್ನೂ ಹಾಸಿ, ನಾಲ್ಕು ಲೋಡುಗಳನ್ನಿಟ್ಟಿದ್ದರು; ಆದರೆ ಅಲ್ಲಿ ನಾಡಕರ್ಣಿಯವರು ಇರಲಿಲ್ಲ. ಅಲ್ಲಿ ಕುಳಿತವನೊಬ್ಬನು. "ರಾಯರು ಇಷ್ಟೊತ್ತನಕ ನಿಮ್ಮ ಹಾದೀ ನೋಡಿ ಈಗ ಜೋಯಿಸರ ಮನಿಗೆ ಹೋದರು. ನೀವು ಬಂದ್ರ ಅಲ್ಲಿಗೇ ಕಳಸಂತ ಹೇಳ್ಯಾರ್ರೀ" ಎಂದು ಹೇಳಿದನು.

ಪರಿವಾರವು ಅಲ್ಲಿಂದ ಮತ್ತೊಂದು ಹಾದಿಯನ್ನು ಹಿಡಿದು ಹೊರಟಿತು. ದೀಕ್ಷಿತರ ಮೇಳದ ಭಜನೆಯು ನಡೆದೇ ಇತ್ತು. ಹೀಗೆ ಬೊಮ್ಮೇಗೇರಿಯಲ್ಲಿ ಅರ್ಧ ಊರನ್ನು ಸುತ್ತುವರಿದು ಒಡಕಣ್ಣನು ವರನೊಂದಿಗೆ ಜೋಯಿಸರ ಮನೆಯನ್ನು ಹೊಕ್ಕನು. ವಕೀಲರೊಡನೆ ಮಾತಾಡುತ್ತ ಕುಳಿತ ಜೋಯಿಸರು ಇವರನ್ನು ನೋಡಿ ಎದ್ದು ಬಂದು, ಬಂದವರನ್ನೆಲ್ಲ

ಉಚಿತವಾಗಿ ಆದರಿಸಿ ಒಳಗೆ ಕುಳ್ಳಿರಿಸಿದರು. ಒಡಕಣ್ಣನ ಹತ್ತಿರ ಕುಳಿತ ತ್ರಿಯಂಬಕನನ್ನು ಅವರು ಮೇಲಕ್ಕೆಬ್ಬಿಸಿ, "ನೀವು ಅಳಿಯಂದಿರು ಮ್ಯಾಲಕ್ಕ ಬರಬೇಕು" ಎಂದು ವಕೀಲರ ಹತ್ತಿರದ ಲೋಡಿಗೆ ಕುಳ್ಳಿರಿಸಿದರು.

ವಕೀಲರು ವರನನ್ನು ದಿಟ್ಟಿಸಿ ನೋಡಿ, "ಹುಡುಗ ನೆಟ್ಟಗಿದ್ದಾನ. ಮಾರೀಮ್ಯಾಲೆ ಸಂಭಾವಿತರ ಕಳೆ ಅದ. ಇವನ ಉಡುಪು ನೋಡಿದರ ಚಳ ವಳ್ಯಾಗೂ ಸೇರಿಧಾಂಗ ಇಲ್ಲ. ಇವರು ಸ್ಥಿತಿವಂತರು ಅಂಬೋದಂತೂ ನಮಗ ಗೊತ್ತsa ಅದ. ವಿದ್ಯಾವಂತನೂ ಇರಬಹುದು—" ಎಂದು ಮುಗುಳುನಗೆ ಯಿಂದ ನುಡಿದರು.

ಅದಕ್ಕೆ ಜೋಯಿಸರು "ಕನ್ನಡ ಮರಾಠೀ ಓದುಬರಹ ಬರ್ತದ. ಐದು ಎತ್ತೇ ಇಂಗ್ಲೀಷು ಕಲತಾನಂತ. ನಮಗೇನು ಇಂಗ್ಲೀಷು ಬರೋದಿಲ್ಲ. ನೀವsa ಮಾತಾಡಿಸಿ ನೋಡಿದ್ರ ಎಲ್ಲಾ ತಿಳೀತದ" ಎಂದು ಸೂಚಿಸಿದರು.

ವಕೀಲರು ಮಾಡಿದ ಇಂಗ್ಲೀಷ ಪ್ರಶ್ನೆಗಳಿಗೆಲ್ಲ ತ್ರಿಯಂಬಕನು ಎಸ್. ನೋ, ಆಲ್‌ರೈಟ್ ಎಂಬ ಮೂರೇ ಶಬ್ದಗಳಲ್ಲಿ ಉತ್ತರಕೊಟ್ಟನು. ಅಲ್ಲಿ ಕುಳಿತವರಲ್ಲಿ ಯಾರಿಗೂ ಇಂಗ್ಲೀಷು ಬಾರದ್ದರಿಂದ ಹಾಸ್ಯದ ಅತಿರೇಕವಾಗ ಲಿಲ್ಲ. ವಕೀಲರು ಮಾತ್ರ ಉಕ್ಕಿ ಬರುತ್ತಿದ್ದ ತಮ್ಮ ನಗೆಯನ್ನು ಹತ್ತಿಕ್ಕಿ ಕೊಂಡು, "ಹುಡುಗ ಪಂಡಿತ ಇದ್ದಾನ; ಹೆಣ್ಣು ಕೊಡಲಿಕ್ಕೆ ಏನೂ ಅಡ್ಡಿ ಇಲ್ಲ" ಎಂದು ಗಂಭೀರವಾಗಿ ನುಡಿದರು.

ಅಷ್ಟರಲ್ಲಿ ಜೋಯಿಸರ ಕಾರಕೂನನು ಚಹ ತುಂಬಿದ ಎರಡು ಬಟ್ಟ ಲಗಳನ್ನು ವಕೀಲರ ಮುಂದೆ ತಂದಿಟ್ಟನು. ವಕೀಲರು, "ಅಳಿಯಂದಿರ ತೀರ್ಥ ಮೊದಲ ಆಗತಕ್ಕದ್ದು" ಎಂದು ಒಂದು ಬಟ್ಟಲನ್ನು ತ್ರಿಯಂಬಕನ ಮುಂದೆ ಸರಿಸಿದರು. ತ್ರಿಯಂಬಕನು ಹಿಂದೆಮುಂದೆ ನೋಡುವುದನ್ನು ಕಂಡು ಬಳಿ ಯಲ್ಲಿದ್ದ ಒಡಕಣ್ಣನು ಅವನ ಬೆನ್ನಿಗೆ ಚೆನ್ನಾಗಿ ಚಿವುಟಿ ಅದನ್ನು ಕುಡಿಯ್ಯ ಲಿಕ್ಕೇ ಬೇಕೆಂದು ಸನ್ನೆ ಮಾಡಿದನು ಪರದೇಶೀ ಸಕ್ಕರೆಯಲ್ಲಿ ಆಕಳೆಲುವಿನ ಪುಡಿಯಿರುತ್ತದೆಂದು ಬೊಬ್ಬೆ ಹೊಡೆಯುತ್ತಿದ್ದ ತ್ರಿಯಂಬಕನು ಈಗ ಅದೇ ಸಕ್ಕರೆಯಿಂದಾದ ಚಹವನ್ನು ವಕೀಲರೊಡನೆ ಸೇವಿಸಿದನು.

ಆ ಮೇಲೆ ಒಡಕಣ್ಣನ ಸಂಜ್ಞಾನುಸಾರವಾಗಿ ಅವನು ವಕೀಲರ ಕೈಯನ್ನು ಕುಲುಕಿ ಅಲ್ಲಿಂದ ಪರಿವಾರದೊಡನೆ ಹೊರಟನು. ತುಸು ಹೊತ್ತಿನ

ಮೇಲೆ ದೀಕ್ಷಿತರು ಅವರನ್ನು ಕೂಡಿಕೊಂಡು "ಇನ್ನು ಹತ್ತೆಂಟು ದಿನದಾಗ ನಿಮಗ ಪತ್ರ ಹಾಕತಾರಂತ. ಆಗ ನೀವೂ ನಿಮ್ಮ ಹಿರೇರನ್ನ ಕರಕೊಂಡು ಹೋಗಿ ನಿಶ್ಚಯ ಕಾರ್ಯವನ್ನು ಮಾಡಿಕೊಂಡು ಬರ್ರಿ ನಮ್ಮ ಕೆಲಸಂತೂ ಆತು" ಎಂದು ಮಾತಾಡುತ್ತ ಒಡಕಣ್ಣಾನ ಮನೆಯ ಕಡೆಗೆ ಹೊರಟರು. ಒಡಕಣ್ಣಾನು ತ್ರಿಯಂಬಕನನ್ನು ತಮ್ಮ ಮನೆಗೆ ಕರೆದೊಯ್ದು ತಾಸುರಾತ್ರಿಯವರೆಗೆ ಅವನೊಡನೆ ವಿನೋದ ಮಾಡಿ ಅವನನ್ನು ಕಳಿಸಿದನು.

ಮರುದಿವಸ ಊರಲ್ಲಿ ಎಲ್ಲಿ ಹೋದರೂ ವರನ ಮೆರವಣಿಗೆಯ ವಿಷಯವೆ ನಡೆದಿತ್ತು. ತ್ರಿಯಂಬಕನು ಮನೆಬಿಟ್ಟು ಹೊರಬೀಳದಂತಾಯಿತು. ಒಡಕಣ್ಣಾನು ತನ್ನ ಮಾನಭಂಗಕ್ಕಾಗಿಯೆ ಹೀಗೆ ಮೋಸಮಾಡಿದನೆಂಬುದು ಅಪ್ಪಾರಾಯರಿಗೆ ಆಗ ತಿಳಿಯಿತು. ವೈರಿಯ ಮುಂದೆ ಬಲಾಚಾರವನ್ನು ಕೇಳಲಿಕ್ಕೆ ಹೋಗಿ ನಾಳೆ ಸಾಯುವಿರೆಂದು ಹೇಳಿಸಿಕೊಂಡು ಬಂದಂತಾಯಿತೆಂದು ಅವರು ಹಳಹಳಿಸಿದರು. ರಾಯರೂ ಅವರ ಮಕ್ಕಳೂ ಅಳ್ಳೆದೆಯವರಾಗಿ ಅತಿ ಕೃಪಣರಾಗಿದ್ದುದರಿಂದ ಒಡಕಣ್ಣಾನ ಪ್ರತಿಸ್ಪರ್ಧಿಗಳಾಗಿ ನಿಲ್ಲಲಾರದೆ, ತಮ್ಮ ಅಪಮಾನವನ್ನೆಲ್ಲ ಸಹಿಸಿಕೊಂಡು, ತೆಪ್ಪಗೆ ಮನೆಹಿಡಿದು ಕುಳಿತರು. ಒಡಕಣ್ಣಾನೂ ದೀಕ್ಷಿತರೂ "ವತನಕ್ಕ ಮರುಳಾವ ವರನ ಮೆರವಣಿಗಿ ಬಹಳ ವೈಭವದಿಂದ ಆತು" ಎಂದು ಚೇಷ್ಟೆ ಮಾಡುತ್ತ ಸಂತೋಷ ಹೊಂದಿದರು.

## ೨೯. ಕಾಲಚಕ್ರ

ಒಡಕಣ್ಣಾನು ತನ್ನ ನಾಲ್ಕನೆಯ ಹೆಂಡತಿಯಾದ ಶಶಿಕಲೆಯನ್ನು ಬಿಟ್ಟು ಹನ್ನೆರಡು ವರ್ಷವಾಗಿತ್ತು. ಅವಳು ತನ್ನ ಲಗ್ನದ ಕಾಲಕ್ಕೆ ತನ್ನ ಮೈಮೇಲಿಟ್ಟ ಮೂರುಸಾವಿರ ರೂಪಾಯಿಗಳ ಆಭರಣಗಳನ್ನೂ, ಇಲ್ಲಿಯವರೆಗೆ ತನ್ನ ಉಪಜೀವನಕ್ಕಾಗಿ ಮಾಡಿದ ಸಾಲವೆಂದು ಮೂರು ಸಾವಿರರೂಪಾಯಿಗಳನ್ನೂ, ಮುಂದೆ ಪ್ರತಿವರ್ಷ ಮುನ್ನೂರು ರೂಪಾಯಿಯಂತೆ ಉಪಜೀವನದ ವೇತನವನ್ನೂ ಕೊಡಿಸಬೇಕೆಂದು ಕೋರ್ಟಿನಲ್ಲಿ ಒಡಕಣ್ಣಾನ ಮೇಲೆ ವ್ಯಾಜ್ಯವನ್ನು ಹೂಡಿದಳು. ಒಡಕಣ್ಣಾನು ಹಿಂದುಮುಂದಿನ ವಿಚಾರವನ್ನು ಮಾಡದೆ ಅವಳು ವ್ಯಭಿಚಾರಿಯಿರುವಳೆಂದು ಕೋರ್ಟಿನಲ್ಲಿ ಪ್ರತ್ಯುತ್ತರವನ್ನು

ಕೊಟ್ಟನು. ಅದನ್ನು ಸಿದ್ಧಮಾಡಿಕೊಡುವುದು ಅವನಿಗೆ ಸಾಧ್ಯವಾಗಲಿಲ್ಲ. ಅಲ್ಲದೆ ಅದಕ್ಕೆ ಪ್ರತಿಯಾಗಿ ಶಶಿಕಲೆಯು ಕೊಟ್ಟ ಉತ್ತರವನ್ನು ಕೇಳಿ ಒಡಕಣ್ಣನು ಗಾಬರಿಯಾದನು; ಗಿರಿಜೆಯು ಹಡೆದ ಗಂಡುಮಕ್ಕಳ ಗತಿಯೇನೆಂದು ಹೌಹಾರಿದನು. ಅವನ ಅಹಂಕಾರವೆಲ್ಲ ಬಯಲಾಯಿತು. ಕೊನೆಗೆ ಶಶಿಕಲೆಯ ಬೆನ್ನು ಕಟ್ಟಿದವರ ಕೈಕಾಲು ಕಟ್ಟಿಕೊಂಡು, ಸಾವಿರಾರು ರೂಪಾಯಿಗಳನ್ನು ತೆತ್ತು ಮುನ್ನೂರು ರೂಪಾಯಿಗಳ ವಾರ್ಷಿಕ ವೇತನವನ್ನೂ ಕೊಡುವುದಕ್ಕೆ ಒಪ್ಪಿಕೊಂಡು ತನ್ನ ಮೇಲೆ ಬಂದ ಕುತ್ತದಿಂದ ಪಾರಾಗಬೇಕಾದರೆ ಅವನಿಗೆ ಸಾಕುಬೇಕಾಯಿತು. ಇದು ತೀರುವಷ್ಟರಲ್ಲಿ ಮಾನಗೇಡಿಯಾಗುವ ಮತ್ತೊಂದು ಸಂಕಟವು ಅವನ ಮೇಲೆ ಬಂತು.

ಅವನ ಗುರುಗಳಾದ ಶ್ರೀಪಾದಭಟ್ಟರು ಒಬ್ಬ ಬಾಲವಿಧವೆಯೊಂದಿಗೆ ತೀರ್ಥಯಾತ್ರೆಗೆ ಹೊರಟುಹೋದರೆಂದು ಹಿಂದೆ ಇಪ್ಪತ್ನಾಲ್ಕನೆಯ ಪ್ರಕರಣದಲ್ಲಿ ಹೇಳಿದೆಯಷ್ಟೆ. ಆ ವಿಧವೆಯು ಒಡಕಣ್ಣನ ಆಪ್ತರಲ್ಲೊಬ್ಬಳು. ಶ್ರೀಪಾದಭಟ್ಟರು ತೀರ್ಥಾಟನೆ ಮಾಡುತ್ತಿರುವಾಗ ಅವಳಿಗೆ ಗರ್ಭಲಾಂಛನಗಳು ತೋರಹತ್ತಿದವು. ಭಟ್ಟರು ಗಾಬರಿಯಾಗಿ ಬೊಮ್ಮೀಗೇರಿಗೆ ಬಂದರು. ಒಡಕಣ್ಣನೊಡನೆ ಆಲೋಚನೆ ಮಾಡಿ, ನಾಗಪುರದಲ್ಲಿ ಗರ್ಭಪಾತವನ್ನು ಸುರಕ್ಷಿತವಾಗಿ ಮಾಡಿಸಬಲ್ಲ ದಾಯಿಗಳಿರುವರೆಂಬುದನ್ನು ತಿಳಿದುಕೊಂಡರು. ಅವಳ ಸಂಗಡ ಹೋಗಲಿಕ್ಕೆ ಅವರಿಬ್ಬರೂ ಹಿಂಜರಿದು, ಅವಳೊಬ್ಬಳನ್ನೆ ಕಳಿಸುವ ನಿಶ್ಚಯಮಾಡಿದರು. ನಾಗಪುರದಲ್ಲಿ ಭಟ್ಟರ ಶಿಷ್ಯನ ಮಗನಿದ್ದನು, ಅವನ ಮನೆಯಲ್ಲಿಳಿದುಕೊಂಡು, ಗುಪ್ತವಾಗಿ ಕೆಲಸ ತೀರಿಸಿಕೊಂಡು ಬರಬೇಕೆಂದು ಹೇಳಿ, ಅವಳ ಕೈಯಲ್ಲಿ ಐವತ್ತು ರೂಪಾಯಿಗಳನ್ನೂ ಶಿಷ್ಯನಿಗೊಂದು ಪತ್ರವನ್ನೂ ಕೊಟ್ಟು ವಿಧವೆಯನ್ನು ಕಳಿಸಿದರು.

ಅವಳು ನಾಗಪುರದಲ್ಲಿ ಉಗಿಬಂಡಿಯಿಂದ ಇಳಿದು ಒಂದು ಕುದುರೆಯ ಬಂಡಿಯನ್ನು ಗೊತ್ತುಮಾಡಿಕೊಂಡು ತನ್ನನ್ನು ವಿಠ್ಠಲ ಶಾಸ್ತ್ರಿಗಳ ಮನೆಗೆ ಮುಟ್ಟಿಸತಕ್ಕದ್ದೆಂದೂ, ಬಂಡಿಯಲ್ಲಿ ಮತ್ತೆ ಯಾರನ್ನೂ ಕೂಡಿಸಿಕೊಳ್ಳಬಾರದೆಂದೂ ಹೇಳಿ ಬಂಡಿಯವನಿಗೊಂದು ರೂಪಾಯಿಯನ್ನು ಕೊಟ್ಟಳು.

ಮುಂದೆ ಅರ್ಧ ಮೈಲು ಹೋಗುವಷ್ಟರಲ್ಲಿ ಮತ್ತೊಬ್ಬ ಮನುಷ್ಯನು ಬಂದು ಗಾಡಿಯಲ್ಲಿ ಸೇರಿಕೊಂಡನು. ಅವನು ಪೋಲೀಸನೆಂಬುದು ಅವಳಿಗೆ

ಗೊತ್ತಿರದಿದ್ದರೂ ಆಕೆಯು ಅವನನ್ನು ಕುಳ್ಳಿರಿಸಿಕೊಳ್ಳಬೇಡವೆಂದು ಬಂಡಿಯುವನಿಗೆ ಹೇಳಿಕೊಂಡಳು ಬಂಡಿಯುವನು ಇವರು ನಮ್ಮ ಮನೆಯವರು, ನಿಮಗೇನೂ ತೊಂದರೆಯಿಲ್ಲವೆಂದು ಅವಳಿಗೆ ಹೇಳಿ ಬಂಡಿಯನ್ನು ಮುಂದೆ ಹೊಡೆದನು. ಪೋಲೀಸನಿಗೆ ಈ ಗರ್ಭಿಣಿಯಾದ ಬ್ರಾಹ್ಮಣ ವಿಧವೆಯ ಸಂಕೋಚವನ್ನು ಕಂಡು ಸಂಶಯವಾಯಿತು. ಊರಲ್ಲಿ ಹೋಗುವಾಗ ಅವಳು ಬಂಡಿಯುವನಿಗೆ ದಾಯಿಗಳ ಮನೆಗಳು ಎಲ್ಲಿರುವವೆಂದು ಕೇಳಿದಳು. ಬಂಡಿಯವನು ಇದೇ ಓಣಿಯೆಂದು ತನ್ನ ಚಬುಕದಿಂದ ತೋರಿಸಿದನು. ಪೋಲೀಸನಿಗೆ ಸಂಶಯವು ದೃಢವಾಯಿತು. ಅವನು ಅಲ್ಲಿಯೆ ಇಳಿದು, ಬಂಡಿಯವನಿಂದ ಅವಳು ಇಳಿಯುವ ಮನೆಯನ್ನು ಕೇಳಿಕೊಂಡು ಹೊರಟು ಹೋದನು.

ಆಕೆಯು ಮನೆಮುಟ್ಟುವಷ್ಟರಲ್ಲಿ ವಿಠ್ಠಲಶಾಸ್ತ್ರಿಗಳ ಮನೆಯಿಂದ ದಾಯಿಗಳ ಓಣಿಯವರೆಗೆ ಸಿಪಾಯಿಗಳು ಗುಪ್ತವಾಗಿ ತಿರುಗಾಡಹತ್ತಿದರು

ಅವಳು ಶಾಸ್ತ್ರಿಗಳಿಗೆ ಶ್ರೀಪಾದಭಟ್ಟರ ಪತ್ರವನ್ನು ಕೊಟ್ಟು ಅವರಲ್ಲಿ ಇಳಿದುಕೊಂಡಳು. ಅಂದು ರಾತ್ರಿ ಎಷ್ಟು ಆಗ್ರಹಮಾಡಿದರೂ ಅವಳು ಅವರಲ್ಲಿ ಫಲಾಹಾರ ಮಾಡದೆ ತಾನು ತಂದ ಜಮುಖಾನೆಯ ಮೇಲೆ ಒರಗಿಕೊಂಡು ರಾತ್ರಿಯನ್ನು ಕಳೆದಳು. ಬೆಳಗಾಗುತ್ತಲೆ ಎದ್ದು, ಕುದುರೆಯ ಬಂಡಿಯವನು ಹೇಳಿದ ಹಾದಿಯನ್ನೆ ಹಿಡಿದು ಒಬ್ಬ ದಾಯಿಯನ್ನು ಕಂಡು ಸಂಗತಿಯನ್ನು ಅರಿಕೆಮಾಡಿಕೊಂಡಳು. ದಾಯಿಯು ಮೊದಲು ಐವತ್ತು ರೂಪಾಯಿ ಕೇಳಿದರೂ ಕೊನೆಗೆ ಮೂವತ್ತಕ್ಕೆ ಒಪ್ಪಿಕೊಂಡಳು. ಬಿಸಿನೀರಿನಲ್ಲಿ ತೆಗೆದುಕೊಳ್ಳುವುದಕ್ಕೆ ಅವಳಿಗೊಂದು ಗುಳಿಗೆಯನ್ನು ಕೊಟ್ಟು ಸಾಯಂಕಾಲಕ್ಕೆ ಮತ್ತೆ ಬಾರೆಂದು ಹೇಳಿ ಅವಳಿಂದ ಹತ್ತು ರೂಪಾಯಿಗಳನ್ನು ಮುಂಗಡವಾಗಿ ಪಡೆದಳು.

ವಿಧವೆಯು ಗೆದ್ದೆನೆಂದು ಹೊರಗೆ ಬರುವುದಕ್ಕೂ ಪೋಲೀಸರು ಬಂದು, ಅವಳನ್ನು ಹಿಡಿಯುವುದಕ್ಕೂ ಸರಿಹೋಯಿತು. ಇನ್ನು ಕೆಲವು ಪೋಲೀಸರ ಪಂಚರೊಡನೆ ದಾಯಿಯಮನೆಯನ್ನು ಹೊಕ್ಕರು. ವಿಧವೆಯಬಳಿಯಿದ್ದ ಗುಳಿಗೆಯನ್ನು ಪಂಚರಿಗೆ ತೋರಿಸಿ ಪಂಚನಾಮೆಯನ್ನು ಮಾಡಿ ಅವರು ದಾಯಿಯನ್ನೂ ವಿಧವೆಯನ್ನೂ ಹಿಡಿದುಕೊಂಡು ಫೌಜದಾರರ ಕಚೇರಿಗೆಹೋದರು.

ದಾಯಿಯು ತನ್ನ ಆಪ್ತರ ಸಹಾಯವನ್ನು ದೊರಕಿಸಿ ಜಾಮೀನಿನ ಮೇಲೆ ಬಿಡುಗಡೆಹೊಂದಿದಳು. ವಿಧವೆಯು ಮಾತ್ರ ಅಸಹಾಯಳಾಗಿ ಪೋಲೀಸರ ವಶದಲ್ಲಿಯೆ ಉಳಿದಳು.

ವಿಠ್ಠಲಶಾಸ್ತ್ರಿಗಳು ಭೋಜನ ಮಾಡಿ ಎಲೆಅಡಿಕೆ ಹಾಕಿಕೊಳ್ಳುತ್ತಾ ಪಡಸಾಲೆಯಲ್ಲಿ ಕುಳಿತು, ತಮ್ಮ ಮನೆಯಿಂದ ಬೆಳಗಿನಲ್ಲಿಯೆ ಹೋದವಳು ಆರುತಾಸು ಹೊತ್ತಾದರೂ ಏಕೆ ಬರಲಿಲ್ಲವೆಂದು ಚಿಂತಿಸುತ್ತಿದ್ದರು ಅಷ್ಟ ರಲ್ಲಿ ಯಾರೋ ಒಬ್ಬರು ಬಂದು "ನಿಮ್ಮ ಮನೆಗೆ ಬಂದವಳನ್ನ ಪೋಲೀಸರು ಕಚೇರಿಯಲ್ಲಿ ಹಿಡಿದು ಕೂಡಿಸ್ಯಾರ. ಆಕಿ ಗರ್ಭಪಾತ ಮಾಡಿಸಿಕೊಳ್ಳಲಿಕ್ಕೆ ಬಂದಿದ್ದಳಂತ ಈ ಅರಿಷ್ಟ ನಿಮಗೆಲ್ಲಿಗಂಟುಬಿತ್ತು? ಫೌಜದಾರರು ನಿಮ್ಮನ್ನೂ ಕರೆಯಿಸಿ ವಿಚಾರ ಮಾಡತಾರಂತೆ" ಎಂದು ತಿಳಿಸಿದರು. ಶಾಸ್ತ್ರಿಗಳು "ರಾಮ ರಾಮಾ! ಇದೇನು ಪ್ರಸಂಗ ಬಂತಲ್ಲ! ಆ ಮುಂಡೇಮಗಳು ಎಲ್ಲೀಯವಳೋ ಏನೋ! ಅವಳ ಪರಿಚಯ ಸಹಾ ನನಗಿಲ್ಲ. ಅಯ್ಯಯ್ಯೊ! ನಾ ಮನ್ಯಾಗ ಇದ್ರ ನನ್ನ ಮರ್ಯಾದಿ ಉಳಿಯೋದಿಲ್ಲ" ಎಂದು ಆಲೋಚಿಸಿ ಹಿತ್ತಲಬಾಗಿ ಲಿಂದ ಹೊರಬಿದ್ದು, ಹಳ್ಳಿಯ ಕಡೆಗೆ ಓಡಿಹೋದರು.

ಫೌಜದಾರರ ಮುಂದೆ ಆ ವಿಧವೆಯು ನಿಜವಾದ ಸಂಗತಿಯನ್ನು ಹೇಳಿಬಿಟ್ಟಳು. ಶ್ರೀಪಾದಭಟ್ಟರ ಮೇಲೆ ವಾರಂಟು ಹುಟ್ಟಿದೆಯೆಂಬ ಸುದ್ದಿಯು ಮರುದಿನವೆ ಬೊಮ್ಮೋಗೇರಿಗೆ ತಿಳಿಯಿತು. ಒಡಕಣ್ಣನು ಭಟ್ಟ ರನ್ನು ತನ್ನ ಮನೆಯ ಅಟ್ಟದ ಮೇಲೆ ಅಡಗಿಸಿಟ್ಟನು. ಆದರೇನು? ಮುಂದೆ ಕೆಲ ದಿನಗಳಲ್ಲಿಯೆ ಆ ವಿಧವೆಯು ಮಾಡಿದ ಅಪರಾಧದ ವಿಚಾರಣೆಯು ಕೋರ್ಟಿನಲ್ಲಿ ನಡೆದು ಒಡಕಣ್ಣ ಶ್ರೀಪಾದಭಟ್ಟರ ಪ್ರತಾಪಗಳೆಲ್ಲ ಬಯಲಿಗೆ ಬಿದ್ದವು. ವಕೀಲರ ಕೌಶಲ್ಯದಿಂದ ಆ ವಿಧವೆಯೂ ದಾಯಿಯೂ ಬಿಡುಗಡೆ ಹೊಂದಿದರು. ಶ್ರೀಪಾದಭಟ್ಟರು ದೇಶಭ್ರಷ್ಟರಾದರು. ಒಡಕಣ್ಣನಿಗೆ ನ್ಯಾಯಸ್ಥಾನದಿಂದ ಶಿಕ್ಷೆಯಾಗದಿದ್ದರೂ ಅವನು ಊರಲ್ಲಿ ಮೋರೆಯೆತ್ತಿ ತಿರುಗದಂತಾಯಿತು. ಮುಪ್ಪಿನ ಕಾಲದಲ್ಲಿ ತನಗೆ ಬಂದೊದಗುವ ಸಂಕಟ ಪರಂಪರೆಗಳನ್ನು ನೋಡಿ ಒಡಕಣ್ಣನು ಬಹಳ ಬೆದರಿದನು ತನ್ನ ಗುಟ್ಟ ನ್ನೆಲ್ಲ ಹೊರಗೆಡಹಿ ಮಾನಭಂಗ ಮಾಡುವವರು ಯಾರಿರಬಹುದು ಎಂದ ಎಣಿಕೆ ಹಾಕಹತ್ತಿದನು.

ಒಡಕಣ್ಣನ ಹಿರಿಯ ಮಗಳು ವಿವಾಹಕ್ಕೆ ಯೋಗ್ಯಳಾಗಿದ್ದಳು. ಎಷ್ಟು ಪ್ರಯತ್ನ ಮಾಡಿ ಹುಡುಕಿದರೂ ಅವಳಿಗೆ ವತನದಾರ ವರವು ಸಿಗಲಿಲ್ಲ. ಕಡೆಗೆ ಬೇಸತ್ತು, ನಾಲ್ಕು ಸಾವಿರ ರೂಪಾಯಿ ವರದಕ್ಷಿಣೆ ಕೊಡುವುದಕ್ಕೆ ಒಪ್ಪಿಕೊಂಡು, ಆರುನೂರು ಉತ್ಪನ್ನವಿರುವ ಒಬ್ಬ ಅರಹುಚ್ಚ ವರನನ್ನು ಗೊತ್ತುಮಾಡಬೇಕಾದರೆ ಅವನಿಗೆ ಕುರಿಕೋಣಬಿದ್ದುಹೋಯಿತು ಒಬ್ಬಳೆ ಮಗಳೆಂದು ಅವನು ಲಗ್ನವನ್ನು ಮಾತ್ರ ವೈಭವದಿಂದ ಮಾಡಿದನು ಆದರೆ ಮುಂದೆ ಆ ವರನು ಒಡಕಣ್ಣನು ಹೇಳಿದಂತೆ ನಡೆಯಲಿಲ್ಲ ಆದ್ದರಿಂದ ಒಡಕಣ್ಣನು ಅಳಿಯನು ಹೇಳಿದಂತೆ ಕೇಳುವ ಯುಕ್ತಿಯೊಂದನ್ನು ತೆಗೆದನು. ಅಳಿಯನೊಮ್ಮೆ ತನ್ನ ಹೆಂಡತಿಯನ್ನು ಕರೆಯಲಿಕ್ಕೆ ಬಂದಾಗ ಒಡಕಣ್ಣನ ಕ್ಷೌರಿಕನಿಗೆ ಹತ್ತುರೂಪಾಯಿಗಳನ್ನು ಕೊಟ್ಟು ಯಾವುದೋ ಒಂದು ವನಸ್ಪತಿಯ ಪುಡಿಯನ್ನು ಅಳಿಯನ ನೆತ್ತಿಗೆ ತಿಕ್ಕಿಸಿದನು.

ಮೊದಲಿಗೇ ಮಿದುಳಿನ ಶಕ್ತಿಯಿಲ್ಲದವರಿಗೆ ಮಿದುಳನ್ನು ಕೆಡಿಸುವ ವನಸ್ಪತಿಯನ್ನು ತಿಕ್ಕಿಸಿದ ಮೇಲೆ ಕೇಳುವುದೇನು? ಮೂರೇದಿನಗಳಲ್ಲಿ ಅವನಿಗೆ ಹುಚ್ಚುಹಿಡಿಯಿತು. ಎಷ್ಟು ಪ್ರಯತ್ನ ಮಾಡಿದರೂ ಹುಚ್ಚುಬಿಡಲಿಲ್ಲ ಕೊನೆಗೆ ಅಳಿಯನ ಕೈಕಾಲುಗಳನ್ನು ಕಟ್ಟಿ ಕೋಣೆಯೊಳಗೆ ಹಾಕಬೇಕಾಯಿತು. ಅವನಿಂದ ಅವಾಚ್ಯ ಬಯ್ಗಳನ್ನು ಬಯ್ಸಿಕೊಳ್ಳಬೇಕಾಯಿತು. ಗಿರಿಜೆಯ ಪ್ರತಾಪವನ್ನಂತೂ ಹುಚ್ಚುಹಿಡಿದ ಅಳಿಯನು ಬಿಚ್ಚಿ ಹೇಳತೊಡಗಿದನು.

ಒಡಕಣ್ಣನಿಗೆ ಚಿಂತೆಯು ಹೆಚ್ಚಾಯಿತು. ವೈರಿಗಳ ಸಂಖ್ಯೆ ಬೆಳೆಯಿತು. ತಾನು ಮಾಡಿದ ಅಕೃತ್ಯಗಳ ಫಲವನ್ನು ತಾನು ಉಣ್ಣುವಹೊತ್ತು ಬಂತು. ಮುಂದೆ ಮಕ್ಕಳ ಕೈಯಲ್ಲಿ ಪರಟೆಬರುವುದೇ ನಿಶ್ಚಯವೆಂದು ಅವನು ಹಳಹಳಿಸಹತ್ತಿದನು. ಬೆಳತನಕ ನಿದ್ದೆಯಿಲ್ಲ, ಹಗಲೆಲ್ಲ ಉಸಿರ್ಗರೆಯುವನು, ತನ್ನ ತತ್ವಗಳು ಕುಸಿ ಬೀಳತೊಡಗಿರುವುದನ್ನು ಕಂಡ, ಅವನು ಮುಂದುಗಾಣದಂತಾದನು, ಆದರೂ ಅವನು ಹತಾಶನಾಗಲಿಲ್ಲ. ಕಾಲಚಕ್ರದ ಗತಿಯನ್ನೇ ಕುಂಠಿತ ಮಾಡುವ ಶಕ್ತಿಯು ತಂತ್ರಶಾಸ್ತ್ರದಲ್ಲಿದೆಯೆಂದು ನಂಬಿ ಮತ್ತೆ ತನ್ನ ತಂತ್ರಪ್ರಭಾವವನ್ನು ಬೀರಲು ನಿರ್ಧರಿಸಿದನು.

## ೩೦. ಕೊನೆಯತಂತ್ರ.

ಒಡಕಣ್ಣನ ತಂತ್ರಪ್ರಭಾವದಿಂದ ಬೊಮ್ಮೀಗೇರಿಯಲ್ಲಿದ್ದ ವತನದಾರ ರೆಲ್ಲ ನಿರ್ವೀರ್ಯರಾಗಿದ್ದರು. ವಿದ್ವಾಂಸರು ಗ್ರಾಮತ್ಯಾಗ ಮಾಡಿದ್ದರು. ಆದರೆ ಗಿರಿಧರರಾಯರ ಮೊಮ್ಮಕ್ಕಳು ಮಾತ್ರ ಮಾನಾಪಮಾನಗಳನ್ನು ಲೆಕ್ಕಿಸಿದೆ ಜಿಪುಣತನದಿಂದ ಸಂಸಾರಸಾಗಿಸಿಕೊಂಡು ಸ್ಥಿತಿವಂತರಾಗಿದ್ದರು. ವರನ ಮೆರವಣಿಗೆಯನ್ನ ಮಾಡಿಸಿ ಮಾನಭಂಗಮಾಡಿದರೂ ಆವರು ಒಡಕ ಣ್ಣನ ವೈರಿಗಳಾಗಲಿಲ್ಲ. ಒಡಕಣ್ಣನು ಅವರಿಗೆ ಷಂಢರು, ನಿರ್ವೀರ್ಯರು ಜೀನರು ಎಂದು ಸಂಬೋಧಿಸುತ್ತಿದ್ದನು. ಇಷ್ಟಾದರೂ ಅವರು ತಲೆತಗ್ಗಿಸಿ ಕೊಂಡು ಹೋಗುತ್ತಿದ್ದರು. ಇಂಥವರ ಮೇಲೆ ತನ್ನ ತಂತ್ರವನ್ನು ಹೂಡು ವದು ಒಡಕಣ್ಣನಂಥ ಪ್ರತಾಪಶಾಲಿಗೇನಾಶ್ಚರ್ಯ.

ಅಪ್ಪಾರಾಯರ ಸೋದರಳಿಯನಾದ ತಮ್ಮಣಶಾಸ್ತ್ರಿಯ ತಂದೆಯು ಚಿಕ್ಕಂದಿನಲ್ಲಿಯೇ ತೀರಿಕೊಂಡಿದ್ದನು. ಅಪ್ಪಾರಾಯರು ತಮ್ಮಣಶಾಸ್ತ್ರಿ ಯನ್ನೂ ಅವನ ತಾಯಿಯನ್ನೂ ತಮ್ಮ ಮನೆಯಲ್ಲಿಟ್ಟುಕೊಂಡು ಸಂರಕ್ಷಿ ಸಿದ್ದರು. ಅಣ್ಣತಮ್ಮಂದಿರು ವಿಭಾಗವಾಗುವಕಾಲದಲ್ಲಿ ಅರ್ಧಸೇರು ಬಂಗಾ ರವನ್ನು ತಂಗಿಗೆ ಕೊಟ್ಟಿದ್ದರು. ತಮ್ಮಣಶಾಸ್ತ್ರಿಯು ಅಪ್ಪಾರಾಯರ ಆಶ್ರಿತ ನಾಗಿದ್ದು ಅಪ್ಪಾರಾಯರು ಅವನ ಮದುವೆಯನ್ನು ಮಾಡಿ, ಮನೆಗೆ ಕಳಿಸಿ ದರು. ತಮ್ಮಣಶಾಸ್ತ್ರಿಯು ಮಕ್ಕಳನ್ನು ಹಡೆದು ಮಾವನ ಆಶ್ರಯದಿಂದ ಸಂಸಾರ ಸಾಗಿಸಿಕೊಂಡು ಸುಖದಿಂದಿದ್ದನು. ಒಡಕಣ್ಣನು ಅಳಿಯ ಮಾವಂದಿರಲ್ಲಿ ಒಡಕು ಹುಟ್ಟಿಸಿ ತನ್ನ ತಂತ್ರಪ್ರಭಾವವನ್ನು ತೋರಿಸಬೇ ಕೆಂದು ಹೊಂಚುಹಾಕಿಕೊಂಡು ಕುಳಿತಿದ್ದನು.

ತಮ್ಮಣಶಾಸ್ತ್ರಿಯು ಸ್ವಭಾವದಿಂದ ಪೆದ್ದ. ಮೂರು ಇಯತ್ತೆಗೇ ಶಾಲೆಗೆ ಶರಣುಹೊಡೆದವ. ಅಲ್ಪಸ್ವಲ್ಪ ಅಧ್ಯಯನಮಾಡಿ, ವೈದಿಕ ವೃತ್ತಿಯನ್ನು ಸ್ವೀಕರಿಸಿ, ಆಮಂತ್ರಣೋತ್ಸವ ವಿಪ್ರನಾಗಿ ಉಪಜೀವಿಸ ತಕ್ಕವ, ಬಾಯಿ ಯಿಂದ ಬಲುಹಗುರು. ಎಟ್ಟಿತನದಮಾತು. ಹೆಂಗಳೆಯರ ಮುಂದೆ ಬಾಯಿಗೆಬಂದಂತೆ ಬೊಗಳುತ್ತ, ಮಾನಾಪಮಾನಗಳನ್ನು ಲೆಕ್ಕಿಸದೆ ನಿಶ್ಚಿಂತೆ ಯಿಂದಿರುವವ ತಂಬಾಕ ತಿನ್ನುವ ಚಟವಂತೂ ಅವನಲ್ಲಿ ಅತಿಶಯ. ಎರಡೂ

ಸೋಟಿಗಳಿಂದ ಸೋರುವ ಕೆಂಪನ್ನ ಜೊಲ್ಲು ಎದೆಯ ಮ್ಯಾಲೆ ಬಿದ್ದರೂ ಅವನಿಗೆ ಅರಿವು ಇರುತ್ತಿರಲಿಲ್ಲ. ಸೋಟಿಯಲ್ಲಿ ಎಲೆ ಅಡಿಕೆ ತಂಬಾಕ ಮೆದ್ದಿದ ಮುದ್ದಿಯನು ಹಿಡಿದು, ಅವನು ಮಾತನಾಡಹತ್ತಿದರೆ, ಎದುರಿಗೆ ಕುಳಿತವರಿಗೆ ರುಧಿದ ಬಾಷ್ಪಸ್ನಾನವಾಗುತ್ತಿತ್ತು. ಅವನು ಬಂದನೆಂದರೆ ಜನರು ದೂರಸರಿಯುವರು. ಗೊರವನಕೊಳ್ಳದ ಬೇಡಬಂದನೆಂದು ನಿಂದಿಸುವರು. ಒಡಕಣ್ಣನ ಮನೆಯ ಮುಂದೆಯೆ ಅವನ ಮನೆ. ತಮ್ಮಣಶಾಸ್ತ್ರಿಯು ತಂಬಾಕದ ಚಟವಾದಾಗೆಲ್ಲ ಒಡಕಣ್ಣನ ಮನೆಗೆ ಹೋಗಿ, ಎಥೇಚ್ಛವಾಗಿ ತಂಬಾಕವನ್ನು ಮೆಲಕಾಡಿಸುತ್ತ ಕುಳಿತುಕೊಳ್ಳುವನು. ಒಡಕಣ್ಣನಾದರೂ ಅವನಿಗೆ ಎಲೆ ಅಡಿಕೆ ತಂಬಾಕಗಳನ್ನು ಮುಕ್ತದ್ವಾರವಿಟ್ಟಿದ್ದನು. ಸಮಯು ದೊರೆತಾಗೆಲ್ಲ, ಅಪ್ಪಾರಾಯರ ಜೀನತನವನ್ನೂ, ತನ್ನ ಉದಾರತನವನ್ನೂ ತಮ್ಮಣಶಾಸ್ತ್ರಿಯ ಮುಂದೆ ಬಣ್ಣಿಸುವನು, ಒಡಕಣ್ಣನ ದುರ್ಬೋಧದಿಂದ ಪೆದ್ದನಾದ ತಮ್ಮಣಶಾಸ್ತ್ರಿಯ ಮನಸ್ಸು ಮಾವನ ಬಗ್ಗೆ ಕಲುಷಿತವಾಯಿತು.

ಒಡಕಣ್ಣನ ಗುರುಗಳಾದ ಗುರುನಾಥ ದೀಕ್ಷಿತರ ಯೋಗಮುಟ್ಟು ಏರ ಬರುತ್ತ ಇಳಿಯಹತ್ತಿತು. ಅದು ಬ್ರಹ್ಮರಂಧ್ರಕ್ಕೆ ಏರುವದರ ಬದಲು ಅಧೋಗತಿಯನ್ನು ಹೊಂದಿತು. ಮೈತುಂಬ ವ್ರಣಗಳೆದ್ದವು. ಅವು ಒಡೆದು ಸೋರಹತ್ತಿ ದೀಕ್ಷಿತರು ಕೃಮಿತಲ್ಪದಲ್ಲಿ ಶಯನಮಾಡಿದರು. ಕೂಡಲೆ ಒಡಕಣ್ಣನು ಅವರ ದತ್ತಕಪುತ್ರನು ಕರೆಕಳುಹಿ, ದೀಕ್ಷಿತರನ್ನು ಕ್ರತಪುರಕ್ಕೆ ಕಳುಹಿದನು. ದೀಕ್ಷಿತರ ವಿಯೋಗದಿಂದ ಗಿರಿಜೆಗೆ ಬಹಳ ವ್ಯಥೆಯಾಯಿತು. ಅವಳು ಮೇಲಿಂದಮೇಲೆ ಕ್ರತಪುರಕ್ಕೆ ಹೋಗಿ ಬರುತ್ತಿದ್ದಳು ಯಾವ ಯೋಗಿಗಳ ಯೋಗದಿಂದಲೇ ಗಿರಿಜೆಯು ಸಂತಾಪ ಸಮೃದ್ಧಿಯನ್ನು ಹೊಂದಿದಳೋ ಅಂಥವರನ್ನು ಮರೆಯುವ ಬಗೆಹೇಗೆ? ದೀಕ್ಷಿತರು ಆರುತಿಂಗಳು ಕೃಮಿತಲ್ಪದಲ್ಲಿಯೇ ಹೊರಳಾಡಿ, ಸವಿಕಲ್ಪ ಸಮಾಧಿಯನ್ನು ಹೊಂದಿದನ.

ದೀಕ್ಷಿತರು ಒಡಕಣ್ಣನ ಮನೆಯಲ್ಲಿ ಸರ್ವಾಧಿಕಾರಿಗಳಾಗಿರುವವರೆಗೆ ಅವನ ಮನೆಯಲ್ಲಿ ಬ್ರಾಹ್ಮಣರ ಸುಳಿವು ಅಡಗಿತ್ತು. ಗಣೇಶಭಟ್ಟನೊಬ್ಬ ಒಡಕಣ್ಣನ ವತನದ ವ್ಯವಸ್ಥೆಯನ್ನು ನೋಡುತ್ತ, ದೀಕ್ಷಿತರ ಅನುಯಾಯಿಯಾಗಿದ್ದನು. ದೀಕ್ಷಿತರ ವಿಯೋಗದಿಂದ ಒಡಕಣ್ಣನ ಮನೆಯು ದೇವತಾ

ರ್ಜನೆಯ ಕಟ್ಟಾಯಿತು. ಆದಕ್ಕಾಗಿ ಒಡಕಣ್ಣನು ತಮ್ಮಣಶಾಸ್ತ್ರಿಯನ್ನೂ ಅವನ ಸೋದರ ಮಾವನ ಮನೆಬಿಡಿಸಿ ತನ್ನ ಆಶ್ರಿತನನ್ನು ಮಾಡಿಕೊಂಡನು. ತಮ್ಮಣಶಾಸ್ತ್ರಿಯನ್ನು ಹುರಿದುಂಬಿಸಿ, ಅಪ್ಪಾರಾಯರ ತಮ್ಮನ ಅಪುತ್ರವತಿಯಾದ ವಿಧವೆಗೆ ಪರಗೋತ್ರ ದತ್ತಕಮಾಡಿಸಿ, ಅಪ್ಪಾರಾಯನು ಹೊಂಚು ಹಾಕಿಕೊಂಡು, ಉಳಿತಿದ್ದ ತಮ್ಮನಆಸ್ತಿಯು ಅವನಿಗೆ ಸಿಗದಂತೆ ಮಾಡಿದನು. ಇದರಿಂದ ಅಪ್ಪಾರಾಯರಿಗೆ ಬಹಳ ವ್ಯಥೆಯಾಯಿತು ಅವರು ಚಿಂತಾಗ್ನಿಯಿಂದ ಬೇಯುತ್ತ ಚಿತೆಯನ್ನು ಆರೋಹಿಸಿದರು.

ಅಪ್ಪಾರಾಯರಿಗೆ ನಾಲ್ವರು ಗಂಡುಮಕ್ಕಳು. ಅವರಲ್ಲಿ ಇಬ್ಬರು ದತ್ತಕಪುತ್ರರಾಗಿ ಹೋಗಿದ್ದರು. ಅವರೆಲ್ಲ ಸ್ವಭಾವದಿಂದ ಸಾತ್ವಿಕರು ತಮ್ಮ ನೆರಳಿಗೇ ತಾವು ಹೆದರುವಂಥ ಪುಕ್ಕರು. ಹಿರಿಯರು ಗಳಿಸಿಟ್ಟ ಧನವನ್ನು ಮಾತ್ರ ಪ್ರಾಣಸಂಕಟಬಂದರೂ ಕಳೆಯದವರು. ಇವರ ಧನವನ್ನು ನಾಶಮಾಡಬೇಕೆಂದು ಒಡಕಣ್ಣನು ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾದವು ಕಡೆಗೆ ಅವನು "ಕಂಟಕೇನೈವ ಕಟಕಂ" ಎಂಬ ನೀತಿಯನ್ನು ಸ್ವೀಕರಿಸಿ ತಮ್ಮಣಶಾಸ್ತ್ರಿಯಿಂದಲೇ ಅಪ್ಪಾರಾಯರ ಮಕ್ಕಳ ಮಾನಭಂಗ ಮಾಡುವ ತಂತ್ರಹೂಡಿದನು.

ಒಮ್ಮೆ ತಮ್ಮಣಶಾಸ್ತ್ರಿಯು ಭೂರಿಭೋಜನಕ್ಕಾಗಿ ಊರಿಗೆ ಹೋದವನು ನಾಲ್ಕಾರುದಿವಸ ಬರಲಿಲ್ಲ. ಈ ಸಂಧಿಯನ್ನು ಸಾಧಿಸಿ ಒಡಕಣ್ಣನು ತಮ್ಮಣಶಾಸ್ತ್ರಿಯ ಪ್ರಾಯದ ಮಗಳಿಗೆ ಅಪ್ಪಾರಾಯರ ಮೊಮ್ಮಗನ ಹೆಸರಿನಿಂದ ಒಂದು ಓಲೆಯನ್ನು ಬರೆಯಿಸಿ ತಮ್ಮಣಶಾಸ್ತ್ರಿಯ ಮನೆಯಲ್ಲಿ ಚಲ್ಲಿಸಿದನು. ನಡುರಾತ್ರಿಯಲ್ಲಿ ಬಾಗಿಲ ಬಡಿಸಿಸಿದನು. ತಮ್ಮಣಶಾಸ್ತ್ರಿಯ ಹೆಂಡತಿಯು ಮರುದಿವಸ ಗಾಬರಿಯಾಗಿ ಮನೆಯಲ್ಲಿ ಬಿದ್ದ ಓಲೆಯನ್ನು ಹಿಡಿದುಕೊಂಡು ಒಡಕಣ್ಣನ ಮನೆಗೆಬಂದಳು. ಒಡಕಣ್ಣನು ಆ ಓಲೆಯನ್ನು ಓದಿ, ನಡುರಾತ್ರಿಯಲ್ಲಿ ಬಾಗಿಲು ಬಡಿದದ್ದನ್ನು ಕೇಳಿ, ಅಪ್ಪಾರಾಯನ ಮೊಮ್ಮಗನು ನಿಮ್ಮ ಮಗಳಮೇಲೆ ಬಲಾತ್ಕಾರ ಮಾಡಲಿಕ್ಕೆ ಹೊಂಚು ಹಾಕಿರುವನೆಂದು ತಟ್ಟನೆ ಕೇಳಿಬಿಟ್ಟನು. ಇದರಿಂದ ಆ ಹೆಣ್ಣುಮಗಳ ಎದೆಯೊಡೆಯಿತು ಗಂಡನು ಊರಲ್ಲಿಲ್ಲದ ಸಮಯದಲ್ಲಿ ಏನು ಅನರ್ಥ

ವಾಗುವದೋ ಎಂದು ಬೆದರಿ, ಒಡಕಣ್ಣನ ಮರೆಹೊಕ್ಕಳು. ಒಡಕಣ್ಣನು ಅಭಿಯವಚನವನಿತ್ತು, ನಿಮ್ಮ ಪತಿಯು ಊರಿಗೆ ಬಂದಮೇಲೆ ಆಪಟಿತನ ಪಾರುಪತ್ಯಮಾಡಿಸುವೆನು. ನೀವೂ ನಡೆದ ಸಂಗತಿಯನ್ನು ಶಾಸ್ತ್ರಗಳೆದುರಿಗೆ ರಂಭಾಟಮಾಡಿ ಹೇಳಿರಿ" ಎಂದು ಉಪದೇಶಮಾಡಿ ಹೇಳಿದನು.

ಶಾಸ್ತ್ರಗಳು ಯಜಮಾನರ ಮನೆಯಲ್ಲಿ ಆಗ್ರಹಕ್ಕೆಬಿದ್ದು ಅಳತೆಗೆಟ್ಟು ಭೂರಿಭೋಜನವನ್ನು ಭುಂಜಿಸಿದರು, ಅದರಿಂದ ಅವರ ಹೊಟ್ಟೆ ಕೆಟ್ಟಿತು ಕಚ್ಚೆಕಳಕೊಂಡು ತಿಪ್ಪೆಗೂ ಮನೆಗೂ ಎಚ್ಚರವಿಲ್ಲದೆ ಎಡತಾಕಹತ್ತಿದರು ಕರೆಯಿಸಿದವರು ಔಷಧೋಪಚಾರ ಮಾಡಿಸಿ ಮತ್ತೆ ಮೂರು ದಿವಸ ಮನೆಯ ಲ್ಲಿಟ್ಟುಕೊಂಡು ಬೊಮ್ಮಗೇರಿಗೆ ಕಳುಹಿಸಿದರು. ಶಾಸ್ತ್ರಿಗಳು ಮನೆಗೆ ಬಂದೊಡನೆ ಅವರ ಹೆಂಡತಿಯು ಮಗಳನ್ನು ಮಾವನ ಮನೆಗೆ ಕಳುಹಿ, ನಾನು ಹಾಗೆಯೇ ಚವರೂರಿಗೆ ಹೋಗುವೆನೆಂದು ಹೇಳಿದಳು. "ಇಂಥ ಷಂಢ ಗಂಡಂದ್ರಿದ್ರ ಊರಾಗೆಲ್ಲಾ ಮಾನಗೇಡಾಗಿ ಮಕ್ಕಳನ್ನ ಮನ್ಯಾಗ ಕೂಡಿಸಿಗೋ ಬೇಕಾಗೋದ್ಯಾಸ್ಯೆ, ಹೊಟ್ಟೆತುಂಬ್ಯ ಕೂಳು, ಬಾಯಿತುಂಬ್ಯ ತಂಬಾಕ ಸಿಕ್ರ ಸಿಕ್ಕಲ್ಲೆ ತಿರಗಲಿಕ್ಕೆ ಹೊಂಟರು. ಇಂಥವರಿಗೆ ಹೆಂಡರ್ಯು ಮಕ್ಕಳ್ಯು ಇರಬಾರದು. ಬೈರಾಗ್ಯಾಗಿ ಬಿಕ್ಕೇಬೇಡಿಕೋತ್ಯ ತಿರಗೋದಬಿಟ್ಟು ಮದಿವೀಯಾಕ ಮಾಡಕ್ಯೋ-ಬೇಕಾಗಿತ್ತೋ ಏನೋ, ಆತು. ನಮ್ಮ ಹಾದಿ ನಾವು ಕಂಡಕೊಳ್ಳೋಣ" ಎಂದು ಒಟಗುಟ್ಟುತ್ತ ಗಂಟು ಮೊಟ್ಟೆ ಕಟ್ಟಹತ್ತಿದಳು. ಶಾಸ್ತ್ರಿಗಳು ಕಕ್ಕಾಬಿಕ್ಕಿಯಾಗಿ ಅತ್ತಿತ್ತ ನೋಡುತ್ತ "ನಿನಗ್ಯ ಅಂಥಾದೇನಾಗೀದ್ಯ ಹೇಳ್ಯಾರ್ಯ ಹೇಳಲ್ಲ" ಎಂದು ಹೆಂಡತಿಯನ್ನು ರಮಿಸಹತ್ತಿದರು. "ಒಡಕಪ್ಪ ದೇಸಾಯರ ಮನೀಗೆ ಹೋಗ್ರೀ ಎಲ್ಲಾ ಅಸಾರ್ಥಾನೂ ತಿಳೀತ್ಯದ ನಮ್ಮ ಕೊಡೀತಗದ್ರ ನಮಗ್ಯ ನಾಚಿಕಿ, ನಿಮ್ಮ ಬಳಗ್ಯ ಬಂದೂ ಕೂಡಿಕೊಂಡು ಇರ್ರಿ, ನಾ ಮಕ್ಕಳ್ಯ ಮರೀ ಕಟ್ಟಿಕೊಂಡು ನಿಮ್ಮ ಹೆಸರ್ಲೆ ಬಿಕ್ಕೆಬೇಡಿಕೋತ್ಯ ತಿರಗತೇನಿ. ಇನ್ನ ಮ್ಯಾಲ ನಿಮ್ಮಗೊಡವಿ ನನಗಬ್ಯಾಡ. ನನ್ನಗೊಡವಿ ನಿಮಗಬ್ಯಾಡ" ಎಂದು ಆರ್ಭಟಿಸಿ ಅಳುತ್ತ ಅಡಿಗೆಯ ಮನೆಯಲ್ಲಿ ಅಡಗಿಕೊಂಡರು.

ಶಾಸ್ತ್ರಿಗಳಿಗೆ ಮನೆಯಲ್ಲಿ ನಡೆದ ಸಂಗತಿಯ ಸುಳಿವೇ ಹೊಳೆಯಲಿಲ್ಲ. ಅವರು ಅಲ್ಲಿಂದ ನೆಟ್ಟಗೆ ಒಡಕಣ್ಣನ ಮನೆಗೆ ಹೋದರು. ಮನೆಯಲ್ಲಿ ನಡೆದ

ರಂಭಾಟವನ್ನು ತಿಳಿಸಿದರು. ಇದಕ್ಕೆ ಕಾರಣವೇನೆಂದು ಒಡಕಣ್ಣನನ್ನು ವಿನಯದಿಂದ ವಿಚಾರಿಸಿದರು. ಒಡಕಣ್ಣನು ಶಾಸ್ತ್ರಿಗಳನ್ನು ಕೋಣೆಯೊಳಗೆ ಕರೆದುಕೊಂಡುಹೋಗಿ, ಅವರ ಮನೆಯಲ್ಲಾದ ಅನರ್ಥವನ್ನೆಲ್ಲ ವಿಸ್ತರಿಸಿ ಹೇಳಿದನು. "ಷಂಢಸೂಳೀ ಮಕ್ಕಳು ಅವರಿಂದಽ ಇಂಥಽ ಕಾರ್ಯ ಆಗಿರಲಿಕ್ಕಿಲ್ಲಽ" ಎಂದು ಶಾಸ್ತ್ರಿಗಳು ದನಿಎಳೆದರು. ಅದಕ್ಕೆ ಒಡಕಣ್ಣನು "ನಿಮ್ಮಂಥಽ ಭಟಂಭಟ್ಟೀ ಮಂದಿಗೆ ಒಳಗಿನ ತಂತ್ರ ಹೊಳಿಯೋದಿಲ್ಲ. ನಿಮ್ಮನ್ನ ಮಾನಗೇಡಮಾಡಿ, ನಾಕಮಂದೀ ಒಳಗಽ ಮಾರೀಎತ್ತಿ ತಿರಗದ್ಹಾಂಗ ಮಾಡಬೇಕೆಂದು ನಿಮ್ಮ ಮಂದಿ ಒಳಗಿಂದೊಳಗಽ ಬೇತಇಟ್ಟಾರ ಈಗ ಕೈಬಿಟ್ರ-ನಿಮ್ಮ ಮಂತ್ಯಾನ ಮುಳಿಗೋಗತ್ಯದ ನನ್ನ ಆಶ್ರಯದಾಗಿದ್ದೀರಿ ನನಗೂ ಇಟು ನಾಚಿಗೇಡಽ ನಿಮಗ ಬೇಕಾದ ಸಹಾಯಾ ನಾ ಮಾಡತೇನಿ. ನೀವು ಧೈರ್ಯದಿಂದ ಎದೆಗೊಟ್ಟು ನಿಂತು ಆ ಮೂರ್ಖರ ಸಮಾಚಾರ ತಗೋಬೇಕು." ಎಂದು ಉಪದೇಶಮಾಡಿದನು. ಶಾಸ್ತ್ರಿಗಳ ಪಿತ್ತ ನೆತ್ತಿಗೇರಿತು. "ದೇಶಾಯ್ರು ಇನ್ನವ್ಯಾಲ ನಾನಾರ ಈ ಊರಾಗ ಬಾಳೀ ಮಾಡಿಕೊಂಡು ಇರಬೇಕು. ಅವರಾರಽ ಇರಬೇಕು. ಎರಡ್ರಾಗ. ಒಂದು ಆಗಿಹೋಗ್ಲಿ. ನಾ ಮಡ್ಡಸೂಳೀಮಗ ನನಗ ತಂತ್ರ ಗಿಂತ್ರ ಹೊಳಿಯೋದಿಲ್ಲ. ನೀವು ಹೇಳೋರು. ನಾ ಮಾಡಾವ. ನೀವ ಏನಮಾಡಂತೀರಿ ಅದನ್ನ ಮಾಡಲಿಕ್ಕೆ ಸಿದ್ಧ" ಎಂದು ಎದೆತಟ್ಟಿ ಹೇಳಿಕೊಂಡರು. ಆಗ ಒಡಕಣ್ಣನು ಕೆಲವು ಗುಪ್ತಸಂಗತಿಗಳನ್ನು ಶಾಸ್ತ್ರಿಗಳಿಗೆ ತಿಳಿಹಿದನು. ಶಾಸ್ತ್ರಿಗಳು "ಓಹೋ ಆದರಂತಽ ಮಾಡತೀನಿ" ಎಂದು ತಲೆಯಲ್ಲಾಡಿಸಿ, ಮನೆಗೆ ಹೋದರು. ಬಳಿಕ ಒಡಕಣ್ಣನು ಶಾಸ್ತ್ರಿಗಳ ಕುಟುಂಬದವರನ್ನು ಕರೆಯಿಸಿ "ಇನ್ನವ್ಯಾಲ ನೀವೇನು ಹೆದರಬ್ಯಾಡ್ರಿ ನಿಮ್ಮ ಕೂದಲು ಕೊಂಕದ್ಹಾಂಗಽ ನಾ ನೋಡಿಕೋತೇನಿ" ಎಂದು ಅಭಯವಿತ್ತು ಶಾಸ್ತ್ರಿಗಳ ಹೆಂಡತಿಯನ್ನು ಸಮಾಧಾನಪಡಿಸಿ ಕಳುಹಿದನು. ತನ್ನ ತಂತ್ರವು ಸಫಲವಾದ ಬಗ್ಗೆ ಒಡಕಣ್ಣನಿಗೆ ಬಹುಹಿಗ್ಗು, ಇದೇ ತನ್ನ ಕೊನೆಯ ತಂತ್ರವೆಂಬದನ್ನು ಅವನೇನುಬಲ್ಲ.

## ೩೧. ಷಂಢರ ಗಂಡಸುತನ.

ಶಾಸ್ತ್ರಿಗಳ ಮನೆಯ ಸಮೀಪದಲ್ಲಿಯೇ ದೇಶಪಾಂಡೆಯವರಮನೆ. ಶಾಸ್ತ್ರಿಗಳು ಮನೆಯ ಮುಂದೆ ನಿಂತು ಮಾವಂದಿರ ಕುಟುಂಬದವರ ಮೇಲೆ

ವಪತ್ಸರ ವೃಷ್ಟಿಯನ್ನು ಪ್ರಾರಂಭಿಸಿದರು. ಶಾಸ್ತ್ರಿಗಳ ಬಾಯಲ್ಲಿ ಮಾತಿಗೊಂದು ಬೈಗಳು ಸಹಜವಾಗಿ ಹೊರಡುತ್ತಿದ್ದರಿಂದ, ಇದರ ಸ್ವಭಾವವೇ ಹೀಗೆಂದು ಅಪ್ಪಾರಾಯರ ಕುಟುಂಬದ ಜನರು ಅವರ ಬೈಗಳನ್ನೆಲ್ಲ ಸಹಿಸಿಕೊಂಡು ಸುಮ್ಮನಿದ್ದರು. ಮರುದಿವಸದಿಂದ ದೇಶಪಾಂಡೆಯವ ಬಾಗಿಲ ಮುಂದೆ ಎಂಜಲ ಪತ್ರಾವಳಿಗಳು ಮುಕುರಿದವು ಆ ಮೇಲೆ ಎಲುವು ಹರಕ ಪಾದರಕ್ಷೆಗಳ ತೋರಣ, ಬಾಗಿಲಮುಂದೆ ಅಮೇಧ್ಯದ ಹೊಲಸಾಟ, ಸೇದುವ ಬಾವಿಯ ತುಂಬ ಕೊಬ್ಬಟ್ಟು. ಹೀಗಾಗಿ ದೇಶಪಾಂಡೆಯವರ ಮನೆತನದ ಹೆಣ್ಣುಮಕ್ಕಳಿಗೆ ಬಹಳ ಕಷ್ಟವಾಯಿತು. ಇದಕ್ಕೆಲ್ಲ ತಮ್ಮಣಶಾಸ್ತ್ರಿಯೇ ಕಾರಣವೆಂದು ಹೊಳೆದರೂ ಅವನು ಇಂಥ ಹೊಲಸುಕೃತ್ಯ ಮಾಡತಕ್ಕ ಕಾರಣವು ತಿಳಿಯಲಿಲ್ಲ. ಅವರು ತಮ್ಮ ಗಂಡಂದಿರಿಗೆ "ನೀವೂ ಎದೆಗಾರರಾಗಿ ಮುಯ್ಯಕ್ಕಮುಯ್ಯ ತೀರಿಸಿರಿ, ಎಂದು ಹೇಳಿಕೊಂಡರು. ಅದಕ್ಕೆ ಅವರು "ಇಷ್ಟೆಲ್ಲಾ ಮಾಡೋದು ಆ ತಮ್ಮಾನ ಯೋಗ್ಯತಾ ಅಲ್ಲ. ಆ ದೇಸಾಯಿ ಹಿಂದ ನಿಂತು ಆ ಶುಂಭನ್ನ ಕುಣಸ್ತಾನ. ನಮ್ಮ ಕಣ್ಣು, ನಮ್ಮ ಬಟ್ಟು, ಆ ಕಟಗಿ ಯೇನು ಮಾಡಲಿಕ್ಕೂ ಹೇಸೋವಲ್ಲ. ನಮ್ಮ ವತಸಾ ನೀಗಿ ಹಿಡಿಸಿದಾಗ ನಮ್ಮಪ್ಪ ಸುಮ್ಮನಿದ್ದ. ಯೇನಾರ ಮಾಡಿ, ನಮ್ಮನ್ನ ಹ್ಯಾವಕೆಡವಿ, ನಮ್ಮ ಮುಂತ್ಯಾನ ವರಿಬೇಕು ಅಂತ ಗಂಟಬಿದ್ದಾನ. "ತಾಳಿದವ ಬಾಳ್ಯಾನು, ತಡಕೊಂಡು ಸುಮ್ಮನ ನಿತ್ರಾತು" ಎಂದು ಹೇಳಿ ಹೆಂಡರ ಮಕ್ಕಳನ್ನು ಸಮಾಧಾನಮಾಡಿದರು.

ಒಂದುದಿನ ಅಪ್ಪಾರಾಯರ ಸೊಸೆಯು ಬೆಳಿಗ್ಗೆ ಎದ್ದು, ನಡುಮನೆಯ ಬಾಗಿಲ ತೆರೆದು ಹೊರಗೆ ಬಂದಳು, ಅವಳು ಒಳ ಅಂಗಳದೊಳಗಿನ ಭಯಂಕರ ದೃಶ್ಯವನ್ನು ನೋಡಿ " ಅಯ್ಯಯ್ಯೋ ಭೂತಬಂದಿವೆ " ಎಂದು ಕೆಟ್ಟ ದನಿಯಿಂದ ಕೂಗಿ ಎಚ್ಚರದಪ್ಪಿ ನಲಕ್ಕೆ ಬಿದ್ದಳು. ಒಳಗಿನವರು ಈ ಆರ್ತ್ರಸ್ವರವನ್ನು ಕೇಳಿ ಹೊರಗೆ ಬಂದು ನೋಡುತ್ತಾರೆ, ಬಾಗಿಲೆದುರಿಗೆ ಒಳ ಅಂಗಳದಲ್ಲಿ ರಂಗದನ್ನು ಹಾಕಿ ಹೆಣವನ್ನು ಕುಳ್ಳಿರಿಸಿದ್ದಾರೆ. ಆ ಹೆಣವು ಹೆಣ್ಣು, ಅದಕ್ಕೆ ಹಣೆತುಂಬ ಕುಂಕುಮ, ಗಲ್ಲಗಳಿಗೆ ಕಪ್ಪು ಕೂದಲು ಎದೆಯ ಮೇಲೆ ಹರಡಿವೆ. ಮೈತುಂಬ ಪಟ್ಟೆ ಪಟ್ಟೆ ಬಣ್ಣ ಬತ್ತಲೆಯಾಗಿ ಬಡಿಗೆ ಹಿಡಿದುಕೊಂಡು ಕುಳಿತಿದೆ. ಅದನ್ನು ನೋಡಿ ಮನೆಯವರೆಲ್ಲ ಹೌಹಾರಿ

ದರು. ಎಚ್ಚರತಪ್ಪಿ ಬಿದ್ದವಳನ್ನು ಒಳಗೆ ಕರೆದುಕೊಂಡು ಹೋಗಿ, ನೆತ್ತಿಗೆ ನೀರು ಬಡಿದು ಅಂಗಾಲಿಗೆ ಬಿಸಿಬೂದಿಯನ್ನು ತಿಕ್ಕಿ ಚೇತನಗೊಳಿಸಿದರು ಹಿತ್ತಲ ಬಾಗಿಲಿನಿಂದ ಹೊರಗೆ ಹೋಗಿ ಜನರನ್ನು ಕೂಡಿಸಿದರು ಬಂದ ಜನರು ನಡುರಾತ್ರಿಯಲ್ಲಿ ಸುಡುಗಾಡದಲ್ಲಿ ಹುಗಿದ ಹೆಣವನ್ನು ಎಬ್ಬಿಸಿತಂದು ಇಟ್ಟವರ ಎದೆಗಾರಿಕೆಯನ್ನು ಹೊಗಳಿದರು. ಮುಂದೆ ದೇಶಪಾಂಡೆಯವರು ಇಪ್ಪತ್ತು ರೂಪಾಯಿಗಳನ್ನು ಚೆಕ್ಕು ಅದನ್ನು ಸ್ವಸ್ಥಾನಕ್ಕೆ ಕಾಣಿಸಿದರು ಇಷ್ಟಾದರೂ ಅವರು ತಮ್ಮ ಶಾಂತತೆಯನ್ನು ಬಿಡಲಿಲ್ಲ. ಇದೇನು ಒಡಕಣ್ಣಿನ ವರ್ಚಸ್ಸೋ, ದೇಶಪಾಂಡೆಯವರ ಷಂಢತನವೋ; ದ್ರವ್ಯವ್ಯಾಮೋಹವೋ ಅರಿಯದ ವಿಷಯ—

ಈ ಕೃತ್ಯವು ಸಂಭವಿಸಿದ ಸ್ವಲ್ಪ ದಿವಸಗಳಲ್ಲಿಯೇ ದೇಶಪಾಂಡೆಯು ಮನೆಯಲ್ಲಿ ಮತ್ತೊಂದು ಪ್ರಸಂಗವು ಒದಗಿತು. ಮೂರೂ ಸಂಜೆಯ ಸಮಯ. ಗಂಡಸರಾರೂ ಮನೆಯಲ್ಲಿಲ್ಲ. ಹೆಂಗಸರು ಅಕ್ಕಿ ಬೇಳೆ ಹಸನ ಮಾಡುತ್ತಾ ಹಿತ್ತಲಮನೆಯಲ್ಲಿ ಕುಳಿತಿದ್ದಾರೆ. ಹುಡುಗರು ಪಡಸಾಲೆಯಲ್ಲಿ ಚಕ್ಕಂದದಿಂದ ಚೀರಾಡುತ್ತಾ ಆಟವಾಡುತ್ತಾರೆ ಈ ಸಂಧಿಯನ್ನು ಸಾಧಿಸಿ, ತಮ್ಮಣ್ಣ ಶಾಸ್ತ್ರಿಯು ದೇಶಪಾಂಡೆಯವರ ಮನೆಯನ್ನು ಹೊಕ್ಕನು. ಅಪ್ಪಾರಾಯರ ಮೊಮ್ಮಗನಾದ ಶಂಕರನು ಹುಡುಗರ ಆಟದಲ್ಲಿಬಂದ ವ್ಯಾಜ್ಯವನ್ನು ನಿರ್ಣಯಿಸುತ್ತ ಕುಳಿತಿದ್ದನು. ಶಾಸ್ತ್ರಿಗಳು ಒಳಗೆಬಂದವರೇ ಶಂಕರನನ್ನು ಗುದ್ದಿ ನೆಲಕ್ಕೆ ಕೆಡಹಿ, ಮತ್ತೆ ಮುಷ್ಟಿಪ್ರಹಾರ ಮಾಡಿದರು. ಆವನು 'ಅಯ್ಯೋ ಸತ್ತೆನು' ಎಂದು ಚೀರಿದನು. ಕೂಡಲೇ ಶಾಸ್ತ್ರಿಗಳು ಅವನ ಕತ್ತನ್ನ ಹತ್ತಿಕ್ಕ ಹತ್ತಿದರು. ಶಂಕರನ ಆರ್ತಸ್ವರವನ್ನು ಕೇಳಿ ಅವನ ತಾಯಿಯು ಧಾವಿಸಿ ಹೊರಗೆಬಂದಳು. ಶಾಸ್ತ್ರಿಗಳು "ಮೂರ್ಖಾ ನಿನಗತಿ ಹರೇದಮುದಾ ಹೆಚ್ಚಾದ್ದಂಗ ಕಾಣಸ್ತದ, ನಿನ್ನ ಹರಣಾ ತೀರಿ ಬಿಡತೇನಿ" ಎಂದು ಆರ್ಭಟಿಸುತ್ತಿದರು ಶಂಕರನ ತಾಯಿಯು ಮಗನನ್ನು ಬದುಕಿಸ ಬೇಕೆಂದು ಶಾಸ್ತ್ರಿಗಳ ಕೈಗಳನ್ನು ಹಿಡಿದು ಎಳೆಯಹತ್ತಿದಳು. ಆಗ ಶಾಸ್ತ್ರಿಗಳು ಕೆಂಪಡರಿದ ಕಣ್ಣುಗಳಿಂದ ಅವಳನ್ನು ನೋಡುತ್ತ ಕಸುವಿನಿಂದ ಕನ್ನೆಗೆ ಬಿಗಿದು ಕೈಗಳನ್ನು ಬಿಡಿಸಿಕೊಂಡರು, ಅಷ್ಟರಲ್ಲಿ ಅಪ್ಪಾರಾಯರ ಹಿರಿಯ ಸೊಸೆಯಾದ ಅಂಬಾ ಬಾಯಿಯವರು ಅಲ್ಲಿಗೆ ಬಂದರು. ಅವರು ನಲ್ವತ್ತೈದು

ವರ್ಷದವರಾಗಿದ್ದರೂ ಬಹು ಬಲಿಷ್ಠರು. ಒಳ್ಳೇ ಎದೆಗಾರ್ತಿ, ಮುಂದರಿದು ನಿಂತರೆ ಮಲಕ್ಕಣ್ಣನನ್ನು ಸಹ ಲೆಕ್ಕಿಸದವರು. ಬಾಯಿಯವರು ಶಾಸ್ತ್ರಿಗಳ ನೀಚಕೃತ್ಯವನ್ನು ನೋಡಿ, ದುರ್ಗಾವತಾರವನ್ನೇ ತಾಳಿದರು. ಶಾಸ್ತ್ರಿಗಳ ಜುಟ್ಟವನ್ನು ಗಟ್ಟಿಯಾಗಿ ಹಿಡಿದು, ದರದರ ಎಳೆಯುತ್ತ ಹಿತ್ತಲಬಾಗಿಲ ವರೆಗೆ ಒಯ್ದು, ಗುದ್ದಿಗುದ್ದಿ ಶಾಸ್ತ್ರಿಗಳ ಮೈ ಮೆತ್ತಗೆಮಾಡಿ, ಒದ್ದು ಓಣಿ ಯಲ್ಲಿ ಕೆಡಹಿದರು. ಶಾಸ್ತ್ರಿಗಳು "ದೇಸಾಯರs ಬರ್ರಿ ಸಾಯತೇನಿ" ಎಂದು ಚೀರ ಹತ್ತಿದರು. ಆಗಂತೂ ಬಾಯಿಯವರ ಕಿಚ್ಚು ಹೆಚ್ಚಾಯಿತು. ಕೈಗೆ ಸಿಕ್ಕ ಕಟ್ಟಿಗೆಯ ತುಂಡನ್ನು ತೆಗೆದುಕೊಂಡು ಶಾಸ್ತ್ರಿಗಳು ಬಿದ್ದಲ್ಲಿಗೆ ಬಂದು ಜಡಿಯುತ್ತ "ಆ ದೇಸಾಯಿ ಬರೋತನಕಾ ನಿನ್ನ ಬಿಟ್ರೆ ಗೋ. ಅಷ್ಟರಾಗs ನಿನ್ನ ಮೆಟ್ಟತೇನಿ. ಬರ್ಲಿ ಆದೇಸಾಯಿ ಅವನ್ನ ನೆತ್ತರಾ ಕುಡೀ ತೇನಿ. ಅವನ ಹೇಣತಿ ಮಕ್ಕಳು ಎಲ್ಲಾರನೂ ಗೂತ್ತಿಗೆಹೆಚ್ಚಿ ನಾ ಜೀವಾ ಕೊಡತೇನಿ. ಆ ನೀಚಾ ನಮ್ಮನ್ಯಾಲ ಮಾಡಬಾರದ ಕೆಲಸs ಮಾಡಿ ಸಿದಾ ಎಲ್ಲಾನೂ ನಮ್ಮಮನೀ ಮೀಶಿಹೊತ್ತ ಗಂಡಸರು ತಡಕೋತs ಬಂದ್ರುs ಅಂತ ಮೈಮೂಲ ಏರಿಬಂದು ಹಂಗಹರಿದವರಿಗೆ ಲಿಂಗನ ಪರಿ ವೇನು. ಆ ದೇಸಾಯಿ ಮನೆತನಾ ಮಣ್ಣುಗೂಡಸದಿದ್ರ ನಾಗಪ್ಪನ ಮಗಳಲ್ಲ 'ಒಲಿದರs ನಾರಿ ಮುನಿದರ ಮಾರಿ' ಎಂಬೋದು ತೋರಿಸಿ ಬಿಡತೇನಿ" ಎಂದು ಅರ್ಭಟಿಸ ಹತ್ತಿದರು, ಈ ಗದ್ದಲಕ್ಕೆ" ಓಣಿಯಲ್ಲಿ ಜನರು ಕೂಡಿ ದರು. ಹೆಣ್ಣುಮಕ್ಕಳು ಶಾಸ್ತ್ರಿಗಳಿಗೆ ಬಾಯಿಗೆ ಬಂದಂತೆ ಬೈದರು. ಗಂಡ ಸರು ಶಾಸ್ತ್ರಿಗಳನ್ನು ಮಾರಿಯಿಂದ ಮುಕ್ತಮಾಡಿ, ದೇಸಾಯರಮನೆಗೆ ಕಳು ಹಿದರು. ಈ ಅನರ್ಥವು ಒಡಕಣ್ಣನ ಮನೆಯ ಸಮೀಪದಲ್ಲಿ ನಡೆದರೂ ಅವನಾಗಲಿ ಅವನಾಗಲಿ ಅವನ ಪರಿವಾರದವರಾಗಲಿ ಶಾಸ್ತ್ರಿಗಳನ್ನು ಬಿಡಿಸಿ ಕೊಳ್ಳಲಿಕ್ಕೆ ಬರಲಿಲ್ಲ. ಕೂಡಿದಜನರಲ್ಲಿ "ದೊಡ್ಡವರು ಇಂಥಾ ಮಡ್ರುಮಾಡೋ ಕೆಲಸಾ ಮಾಡಿಸಬಾರದು. ಎಂದು ಕೆಲವರು, ಅದೆಲ್ಲ ದೊಡ್ಡಮನಸ್ಯಾನೋ ಹೆಣಾ ಎಬ್ಬಿಸೋಹೇಡಿ, ಊರಿಗೇ ಬೆಂಕೀ ಹಚ್ಯಾನ ಹೊಟ್ಟೆ ಉರಿದವರು ಎಲ್ಲೀತನಕಾ ನೋಡತಾರs ಬಂದಿಲ್ಲ ಬಂದದಿವಸ ಅವನವ್ಯವಸ್ಥಾ ಮಾಡತಾರ ಎಂದು ಕೆಲವರು" ಅನ್ನುತ್ತಹೊಂಟುಹೋದರು.

ಎರಡು ತಾಸು ರಾತ್ರಿಯ ಸಮಯಕ್ಕೆ ಅಂಬಾಬಾಯಿಯವರ ಗಂಡನೂ ಮೈದುನನೂ ಬಂದರು. ಮನೆಯಲ್ಲಿ ನಿಃಶಬ್ದ ಸಾಯಂಕಾಲದ ಅಡಿಗೆಯಿಲ್ಲ. ಹುಡುಗರು ಅಳುತ್ತವೆ. ಬಾಯಿಯವರು ಒಟಗುಟ್ಟುತ್ತ ಕುಳಿತಿದ್ದಾರೆ. ಇದನ್ನು ನೋಡಿ ಬಾಯಿಯವರ ಪತಿಯು "ಮನೆಯಲ್ಲಿ ಇದೇನು" ಎಂದು ಕೇಳಿದರು. ಕೂಡಲೇ ಬಾಯಿಯವರು "ನಿಮ್ಮಂಥಾ ಷಂಢ ಗಂಡಂದಿರಿದ್ರ ಮನೀಯೊಳಗಿನ ಹೆಣ್ಣುಮಕ್ಕಳ ಮರ್ಯಾದಿ ಉಳಿಯೋದು ಹ್ಯಾಂಗಾ ಎಂದು ಶಾಸ್ತ್ರಿಗಳು ಒಡಕಣ್ಣನ ನೆರವಿನಿಂದ ಮಾಡಿದ ಅನರ್ಥವನ್ನೆಲ್ಲ ಹೇಳಿ ನೀವು ಆ ದೇಸಾಯಿ ಪಾರಪತ್ಯ ಮಾಡಿದ್ರ ನಾ ಮನ್ಯಾಗ ಇರತೇನಿ. ಇಲ್ಲದ ಇದ್ರ ನನ್ನ ಹಾದಿ ನಾ ಕಂಡಕೋತೇನಿ" ಎಂದು ನಿಷ್ಠುರವಾಗಿ ನುಡಿದರು. ಅವಕ್ಕೆ ದೇಶಪಾಂಡೇಯವರು "ಅವ ಮಹಾ ನೀಚಾ ಪುಂಡರ ತಂಡಾ ಸಾಕ್ಯಾನ ಅವನ ತಡವೋದು ಅಂದ್ರ ಹೇಸಿಗ್ಗಿ ಹೊಲದಾಗ ಮೈಯಲ್ಲಾ ನಾತಾ ಮಾಡಿ ಕೊಂಡಾಂಗನ್ನಷ್ಟೆ. ದೇವರಿದ್ದಾನಾ ಏನ ಬರೋದು ಬರಲಿ ಎಂದು ಉಸು ರ್ಗರೆದರು. ಬಾಯಿಯವರಿಗೆ ಇದು ಸಹನವಾಗಲಿಲ್ಲ. ಅವರು ತಟ್ಟನೆ ಎದ್ದು "ನಿಮ್ಮದಂತೂ ತಿಳದ್ಹಾಂಗ ಆತು. ನನ್ನ ತಮ್ಮಗೊಬ್ಬಗ ಇದನ್ನ ತಿಳಿಸಿ, ಕಡಿಗೆ ನನ್ನ ಕೈಲಾದದ್ದು ಮಾಡಿ ಜೀವಾ ಕೊಡತೇನಿ" ಎಂದು ಹೇಳಿ ತಮ್ಮ ಮನೆಯ ಆಳನ್ನು ಕರೆದುಕೊಂಡು ನಡೆಯುತ್ತಲೇ ತಮ್ಮ ತವ ರೂರಿಗೆ ಹೊರಟುಹೋದರು.

ಮರುದಿವಸ ಮೂರುತಾಸು ರಾತ್ರಿಯಸಮಯ ಕ್ಕೆ ಒಡಕಣ್ಣನ ಮನೆಯ ಎರಡೂ ಬಾಗಿಲ ಮುಂದೆ ಇಬ್ಬರು ಯಮದೂತರು. ಸುತ್ತಲೂ ಹದಿನೈದು ಇಪ್ಪತ್ತು ಜನರು. ಅವರು ಗುದಿಗೆ ಚಣ್ಣವನ್ನು ಹಾಕಿ ಅದಕ್ಕೆ ಹದ ನಾದ ಚೂರಿಯನ್ನು ಕಟ್ಟಿದ್ದಾರೆ. ಬಲಗೈಯೊಳಗೆ ಬಡಿಗೆ ಎಡತೋಳಿಗೆ ಕವಣೆ, ಮನೆಯ ಸುತ್ತಲೂ ಕವಣೆಗಲ್ಲಿನ ಗುಂಪು ಈ ತಂತವು ಬರುವು ದನ್ನು ನೋಡಿ ಒಡಕಣ್ಣನು ಲಗುಬಗೆಯಿಂದ ತಲೆಬಾಗಿಲನ್ನು ಹಾಕಿ ಒಳ ಅಗಳಿ ಚಿಲಕಗಳನ್ನು ತೊಡಿಸಿದನು. ಬಂದವರು "ಎಲೇ ರಣಹೇಡಿ ಬಾಲ ಲಬಡಕೊಂಡು ಒಳಗ್ಯಾಕ ಕ್ಯಾತೀ ಗಂಡಸಾಗಿದ್ರ ಹೊರಗ ಬಾ. ನಿನ್ನ ಮ್ಯಾಲಾ ಕರಿಸು ಇವತ್ತಿನಿಂದಾ ನಾವಾರಾ ಊರಾಗಿದ್ದದ್ಹಾಗಿರಬೇಕು. ಇಲ್ಲಾ ನೀನಾರ ಇರಬೇಕು. ಎರಡರಾಗ ಒಂದ ಆಗಿಹೋಗಲಿ, ಬಾಗಿಲಾ ಹಾಕಿದರ ಬಿಡತೇವೆ, ಕದಾಮುರದು ಒಳಗ ಹೊಕ್ಕು ನಿಮ್ಮೆಲ್ಲಾರ್ನ ಬಂಡಾ ತುಂಡು ಮಾಡತೇವಿ" ಎಂದು ಕೂಗಹತ್ತಿದರು. ಒಡಕಣ್ಣನ ಮನೆಯ

ಸುತ್ತಲೂ ಕವಣಿಗಲ್ಲುಗಳುಸ್ಖಿಸುರಿಯಹತ್ತಿದವು. ದೇಸಾಯರ ಮನೆಗೆ ದರೋಡೆಯವರು ಬಂದರೆಂದು ಊರಲ್ಲಿ ಬೊಬ್ಬಾಟ, ಪುಕ್ಕಜನರು ಕದವನ್ನಿಕ್ಕಿಕೊಂಡು ಒಳಗೆ ಕುಳಿತರು. ಕೆಲಗಟ್ಟಿಗರು ಮುಂದರಿದು ಬಂದರು ಕವಣೆಗಲ್ಲುಗಳು ಸುಯಿಗುಡುತ್ತ ಬರುತ್ತಿರುವದನ್ನು ನೋಡಿ ಅವರೂ ದೂರ ನಿಂತರು. ಆಗ ಅಲ್ಲಿ ನಿಂತ ವ್ಯಕ್ತಿಗಳು "ನಾವೇನೂ ದರೋಡೆ ಮಾಡಲಿಕ್ಕೆ ಬಂದಿಲ್ಲ. ಈ ದೇಸಾಯಿ ಇತ್ಯರ್ಥ ಮಾಡಲಿಕ್ಕೆ ಬಂದೇವಿ. ಈ ಊರಾಗ ಇದೊಂದು ಆಕಳಮಾರಿ ಹುಲಿ. ಇದನ್ನ ಹೊಡೀದಿದ್ರ ಊರಽ ಉಳಿಯೋ ಹಾಂಗಿಲ್ಲ ಅದಕ್ಕ ಇದನ್ನ ಇಕ್ಕಿಬಿಡತೇವಿ ಸುಮ್ಮನ ನೀವು ಇಲ್ಲಿಗೆ ಬಂದು ಜೀವಾ ಯಾಕ ಕಳಕೋತೀರಿ. ನಾವು ನಮ್ಮ ಹೆಂಡ್ರ ಗುಳದಾಳಿ ಹರಕೊಂಡಽ ಬಂದೇವಿ. ಯಾರಾದರೂ ಮುಂದ ಬಂತಿದ್ರ ನೀವೂ ಹಾಂಗ ಮಾಡಿಕೊಂಡಽ ಬರ್ರಿ" ಎಂದು ದೊಡ್ಡ ಧ್ವನಿಯಿಂದ ಹೇಳಹತ್ತಿದರು. ನೆರದವರಿಗೆ ಇದರ ಮರ್ಮವೆಲ್ಲ ಹೊಳೆಯಿತು. ಅವರೆಲ್ಲರೂ ಅಲ್ಲಿಂದ ಕಾಲ್ಕಿಗೆದು ಪೋಲೀಸಗೌಡರ ಮನೆಯ ಕಡೆಗೆ ತೆರಳಿದರು.

ಒಡಕಣ್ಣನು ಯುಕ್ತಿವಂಚನಲ್ಲದೆ ಶಕ್ತಿವಂತನಲ್ಲ. ತನ್ನ ಮೇಲೆ ಅಕಸ್ಮಾತ್ತಾಗಿ ಬಂದ ದುರ್ಧರ ಪ್ರಸಂಗಕ್ಕೆ ಅವನು ಬೆದರಿದನು. ಅಂಬಾಬಾಯಿಯ ತಮ್ಮನೇ ಮುಂದಾಳಾಗಿ ಬಂದದ್ದನ್ನು ಕೇಳಿ ಅವನ ಎದೆಯೊಡೆದು ನೀರಾಯಿತು. ಅವನೇನು ಸಾಮಾನ್ಯ ವ್ಯಕ್ತಿಯಲ್ಲ- ಜೀವದ ಪರಿವೆಯಿಲ್ಲದವ ಎಷ್ಟೋ ದುರಂತಗಳಿಂದ ಪಾರಾದವ. ಒಂದು ಪ್ರಸಂಗದಲ್ಲಿಯಂತೂ ಮೂಗು ಹರಕೊಂಡು ಮರಣ ತಪ್ಪಿಸಿಕೊಂಡವ ಇಂಥ ಧೀರನ ಮುಂದೆ ಒಡಕಣ್ಣನಂಥ ತಂತ್ರಗಾರನು ಪಾರಾಗುವದೆಂತು. ಒಡಕಣ್ಣನು ಜೀವಗಳ್ಳ, ಆದರೆ ದೇಶಪಾಂಡೆಯವರ ಮನೆಯವರು ಷಂಢರೆಂದು ತಿಳಿದು ಅವರ ಮೈಮೇಲೆ ಮನಬಂದಂತೆ ಏರಿಹೋಗಿದ್ದ ಇಂಥ ಷಂಢರೇ ಪುಂಡರಾಗಿ ಬಂದದ್ದನ್ನು ಕಂಡು ಬೆರಗಾದ. ಮುಂದೆ ಏನು ಅನರ್ಥ ಸಂಭಸುವದೋ ಎಂದು ಬೆದರಿದ. ಒಳಗೇ ಕುಳಿತು "ಜೀವದಾನ ಕೊಡಿರಿ ಇನ್ನು ಯಾರ ಗೊಡೆವೆಗೂ ನಾನು ಹೋಗುವದಿಲ್ಲ ನನ್ನ ಸರ್ವಾಪರಾಧವಾಯಿತು ಶರಗೊಡ್ಡಿ ಬೇಡಿಕೊಳ್ಳುತ್ತೇನೆ. ಊರ ಉಸಾಬರಿಗೇ ಇನ್ನು ಹೋಗುವದಿಲ್ಲ ಮುಪ್ಪಿನಕಾಲಕ್ಕೆ ದುರ್ಮರಣವನ್ನು ತರಬೇಡಿರಿ" ಎಂದು ದೈನ್ಯೋಕ್ತಿಯಿಂದ ಬೇಡಿಕೊಳ್ಳಹತ್ತಿದ. ತಲೆಬಾಗಿಲಲ್ಲಿ ನಿಂತೆ ಅಪ್ಪಾರಾಯರ ಮೂರನೆಯ

ಯೋಗನು "ಮಂದಿಗೆ ಪಂಥೆರೆಂದು ಮನೆಯಲ್ಲಿ ಕುಳಿತು ಸಂಬೋಧಿಸುವವನ ಗಂಡಸುತನವನ್ನಷ್ಟು ನೋಡಿರಿ. ಸೇರಿಗೆ ಸವ್ವಾಸೇರು ಆದರೇ ಕಾರ್ಯವಾಗುವದು. "ಕಾವುಕೊಟ್ಟರೇ ಕಬ್ಬಿಣವು ಹಿಗ್ಗುವದು" ಎಂದು ಹಾಸ್ಯಮಾಡಹತ್ತಿದನು.

ಗೌಡರ ಮನೆಯಲ್ಲಿ ಕೂಡಿದ ಜನರು ತಮ್ಮ ತಮ್ಮೊಳಗೆ ವಿಚಾರ ಮಾಡಿ, ಗಡೆಗೆ ದೇಸಾಯಿಯು ಮೊದಲು ಮಾಡಿದ್ದು ಮಹಾಪರಾಧವೆಂದು ನಿರ್ಣಯಿಸಿ, ನಾವೆಲ್ಲರೂ ಹೇಳಿ ಹೊತ್ತಿದ ಬೆಂಕಿಯನ್ನು ಹತ್ತಿಕ್ಕಬೇಕೆಂದು ದೇಸಾಯರ ಮನೆಯ ಹತ್ತಿರ ಬಂದರು. ಗೌಡರು ದೂರದಿಂದಲೇ "ನಾಡಕರ್ಣೀರs ದೇಶಪಾಂಡೇರs ನಿಮ್ಮಂಥs ದೊಡ್ಡವರು ಕುಂತು ಹೀಗ ಮಾಡಬಾರದು. ನಮ್ಮ ಹೊಟ್ಯಾಗ ಕಿಚ್ಚಬಿದ್ದsದ ಆ ದೇಸಾಯಿ ಇಂಥs ಹೇಸಿ ಕೆಲಸ ಮಾಡಬಾರದಾಗಿತ್ತು ಅವ ಮಾಡಿದ ಕೆಲಸಕ್ಕs ಊರಾಗ ಯಾರೂ ಹೌದನ್ನೋದಿಲ್ಲ. ನೀವು ದೊಡ್ಡ ಮನಸ್ಸು ಮಾಡಿ ನಮ್ಮ ಮಾತ ಕೇಳಿದ ನಿಮ್ಮ ಕೂದಲಾ ಕೊಂಕದ್ಹಾಂಗ ಮಾಡತೇವಿ ಸಿಟ್ಟಿನ ಕೈಯ್ಯಾಗ ಬುದ್ಧೀ ಕೊಡಬ್ಯಾಡ್ರಿ. ವಿಚಾರ ಮಾಡಿ ನೋಡ್ರಿ," ಎಂದು ಬಹು ವಿನಯದಿಂದ ತಿಳಿಸಿದರು. ಆಗ ನಾಡಕರ್ಣಿಯವರು ಅಭಯವನ್ನಿತ್ತು ಗೌಡರನ್ನೂ ಅವರ ಪರಿವಾರದವರನ್ನೂ ಮುಂದೆ ಕರೆದರು. ಆಗ ಗೌಡರು ಒಳಗೆ ಕು‍ ‍ತ ಒಡಕಣ್ಣನಿಗೆ ಛೀ ಹಾಕಿ "ಎಪ್ಪತ್ತ ವರ್ಸಾ ಆಗೇತಿ ಇನ್ನಾರ ಇಂಥs ಚಾಳೀ ಬಡ್ರಿ, ನಿಮ್ಮ ಕಾರಭಾರಕ್ಕ ಊರಂತೂರ ತಲೀತಿರಿಗಿ ಕುಂತೈತಿ. ಕಾಲ ಬದ್ಲ ಆಗೇತಿ. ಇನ್ನ ಮ್ಯಾಗ ನೋಡಿಕೊಂಡು ಬಾಳೇವ ಮಾಡ್ರಿ ಇವತ್ತಿನ ಸಂಕಟಾ ತಪ್ಪಸೇವಿ. ಇನ್ನಮ್ಯಾಗ ನಿಮ್ಮ ಮನೀ ಹಾಳಾದರ್ ನಾವ ಯಾರೂ ಬರೋರಲ್ಲ" ಎಂದು ನಿಷ್ಠುರವಾಗಿ ಹೇಳಿದರು. ಒಡಕಣ್ಣನ "ಊರ ಉಸಾಬರಿ ನನಗ್ಯಾಕ ಬೇಕ್ರೆಪ್ಪಾ ಮನೀಹಿಡಕೊಂಡು ಸುಮ್ಮನ್ ತೇನ್ ಸಾಯೋಕಾಲಾನs ಬಂದsದ ಸುರಕ್ಷಿತ ಸಾಯೋಹಾಂಗಮಾಡ್ರಿ ಸ್ವರದಿಂದ ಹೇಳಿಕೊಂಡನು. ಗೌಡರು "ನಿಮ್ಮ ತಂತ್ರ ತಡದು ಥರು ಗಂಡಸರಾಗಿ ಕೂತರು ಎಲ್ಲಾನೂ ನಿಮ್ಮ ಪ್ರತಾ ಳಿ ಒಡಕಣ್ಣನ ಮನೆಗೆ ಬಂದ ಗಂಡಾಂತರವನ್ನು ದೂ ತಿರಳಿದರು. ಒಡಕಣ್ಣನು ಇನ್ನು ಮೇಲೆ ತನ ಡೆಯುವದಿಲ್ಲವೆಂದು ನಿರ್ಧರಿಸಿ ನಿದ್ದೆಗೇಡಾಗಿ ಬಿದು